

೧. ಯೂರೋಪು; ೨. ಆಸ್ಯ; ೩. ಹಿಂದುದೇಶ; ೪. ಗ್ರೇಟ್‌ಬ್ರಿಟ್ಟಿನ್; ೫. ಅಫ್ರಿಕ; ೬. ಔಸ್ತ್ರಾಲ್ಯ;
೭. ಉತ್ತರ ಅಮೆರಿಕ; ೮. ದಕ್ಷಿಣ ಅಮೆರಿಕ.

# Third

# Book of Lessons

IN

## CANARESE

Adapted to the Vernacular
Schools of the Madras Presidency by order of the
Director of Public Instruction





Mangalore
Printed by J. Hunziker, Basel Mission Press
MDCCCLXII



MADRAS ಚನ್ನಪಟ್ಟಣ

# ಕಂನಡ ಪಾಠಗಳ

# ಮೂರನೇ

# ಪುಸ್ತಕವು

ಬೋಧನೆಯ ಸರಕಾರಿ ಡಿರೆಕ್ಟರವರ ಅಪ್ಪಣೆಯ ಪ್ರಕಾರ
ಮದ್ರಾಸಾಧಿಪತ್ಯದ ಕೆಳಗೆ ಇರುವ ಶಾಲೆಗಳಿಗಾಗಿ ಅನುರಚಿಸಿದ್ದು



ಮಂಗಳೂರು
ಬಾಸೆಲ್ ಮಿಶನ್ ಛಾಪಖಾನೆಯಲ್ಲಿ ಛಾಪಿಸಿದ್ದು
೧೮೬೨

ತಿದ್ದ ತಕ್ಕದ್ದೇನಂದರೆ:

೧ನೇ ಪಾನಿನಲ್ಲಿ ಭೌತಿಕ ಲಕ್ಷಣಗಳು ಎಂಬದಕ್ಕೆ ೧ ಎಂಬ ಅಂಕೆ ಕೂಡಿಸ ಬೇಕು.

| | | | | | | |
|---|---|---|---|---|---|---|
| ೧೫ನೇ | „ | Fura | „ ಬದಲಾಗಿ | Jura | ಎಂತಿರ | „ |
| ೪೨ನೇ | „ | ಕೂತ್ತಿಕುಡಿ | „ | „ ತೂತ್ತುಕುಡಿ | „ | „ |
| ೮೭ನೇ | „ | Reptiles | „ | „ Reptiles etc. | „ | „ |
| ೧೨೨ನೇ | „ | ಲಿಹವದನು ಬಣ್ಣಿಸಾದು | „ | „ ಲಿಹವದನು ವಿವರಿ ಸುತ ಬಣ್ಣಿಸಾದು ಎಂತಿರ ಬೇಕು | „ | „ |
| ೧೬೧ನೇ | „ | ಳೀಯುವ, ಕರ್ಮದುಸ್ಥಿತಿ | „ | „ ಳೀಯುವ ಕರ್ಮದುಸ್ಸ್ಥಿತಿ | „ | „ |
| ೧೭೦ನೇ | „ | ೫೩ ಸಂಣ ಗೃಹಗಳವೆ | „ | „ ೫೩ ಸಣ್ಣ ಗ್ರಹಗಳವೆ | „ | „ |

# CONTENTS

page

### III. The Animal Kingdom



### IV. Geography and History

**V. Astronomy**



**VI. Real Stories &c.**



**VII. Specimens of Hindoo Literature.**

# ಅನುಕ್ರಮಣಿಕೆ

---

Third

# BOOK OF LESSONS

## IN CANARESE

# ಪಾಠಗಳ ಮೂರನೇ ಪುಸ್ತಕವು

## INTRODUCTION

## ಪೀಠಿಕೆಯು

ಲೋಕದಲ್ಲಿರುವ ಬೇರೆ ಬೇರೆ ವಸ್ತುಗಳ ಸಮೂಹಗಳನ್ನು ನಾವೇ ನೋಡಿ ತಿಳುಕೊಳ್ಳುತ್ತೇವೆ; ಹಲವು ತರದ ವಸ್ತುಗಳ ವಿದ್ಯಮಾನವನ್ನು ಮತ್ತೊಬ್ಬರ ಬೋಧನೆಯಿಂದ ತಿಳಿದು ಕೊಳ್ಳುತ್ತೇವೆ. ಸೋಮನಾಥನೆಂಬವನು ಹೇಳುತ್ತಾನೆ:

"ಹಲವು ಬಲ್ಲವರಿಂದ ಕಲಿಯ ಬೇಕು, ಕೆಲವು ಕಲಿಕಿಯಿಂದ ಕಲಿಯ ಬೇಕು;
ಹಲವು ಶಾಸ್ತ್ರದಿಂದ ಕಲಿಯ ಬೇಕು, ಹಲವು ಮಾಡುವವರಿಂದ ಕಲಿಯ ಬೇಕು;
ಹಲವು ಕಂಡು ನೋಡ ಬೇಕು, ಹಲವು ಜ್ಞಾನದಿಂದ ತಿಳಿಯ ಬೇಕು;
ಹಲವು ಸತ್ಪುರುಷರ ಸಂಗದಿಂದರಿಯ ಬೇಕು; ಅಲ್ಲಿಂದ ಸರ್ವಜ್ಞನಾಗುವನು.
ಹಲವು ಹಳ್ಳಗಳು ಕೂಡಿದರೆ ಸಮುದ್ರವು ಹ್ಯಾಗೆ ತುಂಬುತ್ತದೋ ಹಾಗೆಯೇ ಬುದ್ಧಿಪ್ರಕಾಶ
ಕೊಡು ಎಂಬುದರ್ಥವು".

ಬಾನಿನಲ್ಲಿಯೂ ಭೂಮಿಯಲ್ಲಿಯೂ ಜಲದಲ್ಲಿಯೂ ಇರುವ ವಸ್ತುಗಳಲ್ಲಿ ಸಜೀವ, ನಿರ್ಜೀವವೆಂದು ಎರಡು ವಿಧವು.

ಬುದ್ಧಿವಂತನು ತನ್ನನ್ನು ತಾನು ತಿಳಿದು ಕೊಳ್ಳ ಬೇಕೆಂದು ಬಯಸುವದಲ್ಲದೆ, ತನ್ನ ಇಂದ್ರಿಯಗಳಿಗೆ ಲೋಕದಲ್ಲಿ ಗೋಚರವಾಗುವ ವಸ್ತುಗಳನ್ನೂ ಅವುಗಳ ಗುಣಗಳನ್ನೂ ಲೋಕದಲ್ಲಿ ನಡದ ಕಾರ್ಯಗಳನ್ನೂ ಅರಿಯ ಬೇಕೆಂದು, ವಿಚಾರಣೆ ಮಾಡಿ, ವಿದ್ವಾಂಸರು ರಚಿಸಿದ ನಾನಾವಿಧವಾದ ಗ್ರಂಥಗಳನ್ನು ಓದಿ, ವಿದ್ಯೆಯನ್ನು ಪಡಕೊಳ್ಳಲಿಕ್ಕೆ ಸಾಧಿಸುವನು.

ಲೋಕವನ್ನೂ ಲೋಕದಲ್ಲಿರುವದೆಲ್ಲಾನ್ನೂ ದೇವರು ಉಂಟು ಮಾಡಿದ್ದಾನೆ. ದೇವರು ಅನಾದಿಯೂ ಅನಂತನೂ ನಿರ್ಮಲನೂ ಸಚ್ಚಿದಾನಂದನೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣನೂ ಆಗಿದ್ದಾನೆ. ಆತನು ಉಂಟು ಮಾಡಿದ ಸೃಷ್ಟಿಯು ಧಾತು, ಉದ್ಭಿಜ್ಜ, ಜಂತುಗಳೆಂದು, ಮೂರು ವಿಧವಾಗಿದೆ.

೧. ನೀರೂ ಕಲ್ಲೂ ಮಣ್ಣೂ ಹೊನ್ನು ಮುಂತಾದ ಲೋಹವೂ ವಜ್ರ ಮುಂತಾದ ರತ್ನಗಳೂ ಎಂಬ ನಿರ್ಜೀವವಾದ ಈ ವಸ್ತುಗಳಿಗೆ ಧಾತು ಎಂಬ ಹೆಸರು. ಅವುಗಳಿಗೆ ಜೀವವೂ ಚಲನೆಯೂ ಇಲ್ಲದದರಿಂದ ನಿರ್ಜೀವಾಚರಗಳೆನ್ನಿಸಿ ಕೊಳ್ಳುತ್ತವೆ. ಅವು ಉದ್ಭಿಜ್ಜ ಮತ್ತು ಜಂತುಗಳಂತೆ ಆಹಾರದಿಂದ ಬೆಳೆಯುವದಿಲ್ಲ; ದೊಡ್ಡವಾದರೆ ಸ್ಪರ್ಶನಮಾತ್ರದಿಂದ ಆಗುತ್ತವೆ.

೨. ಮರ, ಗಿಡ, ಬಳ್ಳಿ, ಹುಲ್ಲು, ಗಡ್ಡೆ ಮುಂತಾದವುಗಳಿಗೆ ಉದ್ಭಿಜ್ಜವೆಂದು, ಹೆಸರು. ಇವು ಧಾಳಿಯಿಂದ ಕದಲುವದಲ್ಲದೆ ಧಾತುಗಳಂತೆ ಸ್ಥಳಾಂತರ ಮಾಡಲಾರದೆ, ಮೊಳೆತಲ್ಲಿಯೇ ಇರುತ್ತವೆ. ಆದದರಿಂದ ಅವುಗಳಿಗೆ ಸ್ಥಾವರವೆಂದು ಹೆಸರು. ಧಾತುಗಳಿಗೆ ಚಲನೆ ಪ್ರಾಣ ಎರಡೂ ಇಲ್ಲ, ಆದರೆ ಇವುಗಳಿಗೆ ಜೀವವದೆ; ಧಾತುಗಳು ನಿರ್ಜೀವಾಚರಗಳೆಂದ ಮೇಲೆ ಇವುಗಳು ಸಜೀವಾಚರಗಳೆನ್ನ ತಕ್ಕದ್ದಾಗಿದೆ. ಉದ್ಭಿಜ್ಜವುಗಳು ಬೇರುಗಳಿಂದ ನೀರನ್ನೂ ಭೂಮಿಯ ಸಾರವನ್ನೂ, ಬಾಯ್ಯಿಂದ ಹೀರುವಂತೆ, ಶೋದಿ, ಈ ಆಹಾರದಿಂದ ಬೆಳೆಯುತ್ತವೆ. ಸಸ್ಯಾದಿಗಳಿಗೆ ಎಲೆಗಳು ಪ್ರಾಣಿಕೋಶಗಳಂತೆ ಶ್ವಾಸಕರಣಗಳಾಗಿವೆಂದು, ಹೇಳ ಬಹುದು. ಹೀಗೆ ಈ ಜಾತಿಯು ಪಂಚಭೂತಗಳಿಂದ ಸಾಕಿಸಿ ಕೊಂಡು, ಮೊಳೆತು, ಬೆಳದು, ಎಲೆಗಳನ್ನೂ ಹೂವುಗಳನ್ನೂ ಬಿಟ್ಟು, ಫಲ ಫಲಿಸಿ, ಕಡೆಯಲ್ಲಿ ಬಾಡಿ, ಸಾಯುತ್ತದೆ.

೩. ಸಜೀವಚರಗಳಿಗೆ ಜಂತುಗಳೆಂದು, ಹೆಸರು. ಅವುಗಳಲ್ಲಿ ಗರ್ಭದಲ್ಲಿ ಹುಟ್ಟುವಂಥವುಗಳಿಗೆ ಜರಾಯುಜವೆಂದೂ ಮೊಟ್ಟೆಗಳಲ್ಲಿ ಹುಟ್ಟುವಂಥವುಗಳಿಗೆ ಅಂಡಜವೆಂದೂ ಹೆಸರು. ಅವು ಶ್ವಾಸ ಉಶ್ವಾಸ ಬಿಡುತ್ತವೆ; ಮನಸ್ಸು ಬಂದಲ್ಲಿಗೆ ಹೋಗುತ್ತಾ, ಆಹಾರವನ್ನು ಅರಸಿ, ಪಡ ಕೊಳ್ಳುತ್ತವೆ. ಹಿಂದು ಗ್ರಂಥಕರ್ತನೊಬ್ಬನು ಹೇಳುವದೇನಂದರೆ —

“ಧರಣಿಗಗನವನಚರಂಗಳು
ಚರಗಳಿವು, ಪಂಚೀಕೃತಂಗಳು.
ತರುಲತಾಗುಲ್ಮಾದಿಗಳು ಕೇಳ್! ಅಚರವೆನಿಸುವವು.||
ತಿರಚರಂಗಳು ನಾಲ್ಕು ಜಾತಿಯ
ಪರಿಯಲಿ: ಸ್ವೇದಜವ್, ಉದ್ಭಿಜ್ಜಾಂಡಜವ್,
ಅರಿ, ಜರಾಯುಜವ್; ಇಂತು ನಾಲ್ಕು ತೆರದ ಪ್ರಾಣಿಗಳು.„||

ಸ್ವೇದಜವೆಂಬದು ಒಂದು ಜಾತಿ ಎಂದು, ಪೂರ್ವಿಕರು ನೆನಸಿದರು. ಅದಕ್ಕೆ ಮನುವೂ ಹೇಳುತ್ತಾನೆ:

“ಸ್ವೇದಜಂ ದಂಶಮಶಕಂ ಯೂಕಾ ಮಕ್ಷಿಕ ಮತ್ಕುಣಂ |
ಉಷ್ಮಣಶ್ಚೋಪಜಾಯಂತೇ ಯಚ್ಚಾನ್ಯತ್ ಕಿಂಚಿದೀದೃಶಂ„|| ೪೫||
ಪ್ರಥಮೋಧ್ಯಾಯ.

ಅಂದರೆ: “ಕಚ್ಚುವ ನುಸಿಗಳೂ ಹೇನು ನೊಣ ತೆಗಣೆಗಳೂ ಈ ಮೊದಲಾದವುಗಳು ಸೆಕೆಯಿಂದಲೂ ಬೆವರಿನಿಂದಲೂ ಹುಟ್ಟುತ್ತವೆ.„ — ಆದರೆ ಈಗಿನ ವಿದ್ವಾಂಸರು ಹೆಚ್ಚು ವಿಚಾರಣೆ ಮಾಡಿ, ಸ್ವೇದಜಗಳಿಲ್ಲವೆಂತ, ತಿಳುಕೊಂಡಿದ್ದಾರೆ.

ಭೂಮಿಯೂ ನೀರೂ ಅಂತರಿಕ್ಷವೂ ಬೇರೆ ಬೇರೆ ಜಂತುಗಳ ವಾಸಸ್ಥಳಗಳಾಗಿವೆ. ಮೃಗ, ಮೀನು, ಪಕ್ಷಾದಿಗಳು ಸ್ವಾಭಾವಿಕ ಬುದ್ಧಿಯಿಂದ ತಮಗೆ ಯುಕ್ತವಾದ ಆಹಾರಗಳನ್ನು ತಿಳಿದು, ಕೂಡಿಸಿಟ್ಟು, ತಿಂದು, ನಾನಾತರದ ಬೀಡುಗಳನ್ನು ಹವಣಿಸಿಕೊಂಡು, ಕಾಲಕ್ಷೇಪ ಮಾಡುತ್ತವೆ. ಎಲ್ಲಾ ಸಜೀವಚರಗಳಲ್ಲಿ ಶ್ರೇಷ್ಠವಾದದ್ದು ಮನುಷ್ಯನು; ಅವನು ಸಜೀವಾತ್ಮಚರನೆನ್ನ ತಕ್ಕದ್ದಾಗಿದೆ; ಅವನಿಗೆ ಮನಸ್ಸೂ ಅಹಂಕಾರವೂ ವಿವೇಕವೂ ಉಂಟು. ಅವನು ಕಷ್ಟ ಮಾಡಿ, ಹೊಟ್ಟೆ ಹೊರುವದಕ್ಕೆ ಬೇಕಾದದ್ದನ್ನು ಸಂಪಾದಿಸಿ, ತನ್ನ ಆಹಾರವನ್ನು ನಾನಾ ಪ್ರಕಾರವಾಗಿ ಅಟ್ಟು, ಉಣ್ಣುತ್ತಾನೆ. ಇದಲ್ಲದೆ ತನ್ನನ್ನು ಉಂಟು ಮಾಡಿ, ಸಾಕುತ್ತಾ ಬರುವ ದೇವರನ್ನು ತಿಳುಕೊಂಡು, ಸ್ತುತಿಸಿ, ಸೇವಿಸುವದಕ್ಕೆ ಬೇಕಾದ ಜ್ಞಾನವು ಅವನಿಗೆ ಉಂಟು.

ದೇವರು ಉಂಟು ಮಾಡಿದ ಜೀವಿಗಳಲ್ಲಿ ತರತರಗಳು ಯಾವವೆಂದರೆ: ಆತ್ಮಭಾವದ ದೇವದೂತರು, ಶರೀರ ಜೀವ ಆತ್ಮಗಳುಳ್ಳ ಮನುಷ್ಯರು, ಭೂಚರವಾದ ಮೃಗಗಳು, ಖೇಚರವಾದ ಹಕ್ಕಿಗಳು, ಜಲಚರವಾದ ಜಂತುಗಳು, ಭೂಜಲಚರವಾದ ಜಂತುಗಳು, ಅಂತು ಆರು ವಿಧ.

ಧಾತುಗಳೂ ಉದ್ಭಿಜ್ಜವುಗಳೂ ಜಂತುಗಳೂ ತಮ್ಮಷ್ಟಕ್ಕೆ ಹುಟ್ಟಲಿಲ್ಲ, ದೇವರು ಅವುಗಳನ್ನು ಸೃಷ್ಟಿಸಿದ್ಧಾನೆ; ಆದದರಿಂದ ಅವುಗಳಿಗೆ ಸೃಷ್ಟಿ ಎಂದು ಹೆಸರು. "ಕಾರ್ಯದಿಂದ ಕರ್ತನು ತಿಳಿಯುವನು" ಎಂಬ ಪ್ರಮಾಣದ ಪ್ರಕಾರ ಲೋಕದಲ್ಲಿರುವ ಸೃಷ್ಟಿಯ ಲಕ್ಷಣಗಳಿಂದ ಇದನ್ನುಂಟು ಮಾಡಿದ ದೇವರ ಬಲವೂ ಜ್ಞಾನವೂ ಗೋಚರವಾಗುತ್ತವೆ. ಆತನು ಅದೃಶ್ಯನಾಗಿದ್ದರೂ ಆತನು ನಿರ್ಮಿಸಿದ ಸೃಷ್ಟಿಯನ್ನು ನೋಡಿ, ಚನ್ನಾಗಿ ವಿಚಾರಿಸುವದರಿಂದ ಆತನ ಭಾವವನ್ನೂ ಗುಣಗಳನ್ನೂ ತಿಳುಕೊಳ್ಳ ಬಹುದು. ದೇವರ ತಿಳುವಿಕೆ ಇಲ್ಲದವನ ಜ್ಞಾನವು ಅಜ್ಞಾನವಾಗಿದೆ. ಸೃಷ್ಟಿವಿದ್ಯಾಭ್ಯಾಸ ಶ್ರೇಷ್ಠವಾಗಿರುವದರಿಂದ ಹಿಂದು ಗ್ರಂಥ ಒಂದರಲ್ಲಿ ಬರೆದದ್ದೇನಂದರೆ—

"ವಿದ್ಯೆಗಳನ್ನು ಕಲಿಸದೆ ಇದ್ದರೆ ಮಕ್ಕಳಿಗೆ ತಂದೆಯು ವೈರಿಯು.,,

ಸಕಲ ಪ್ರಾಣಿಗಳನ್ನು ಸಂರಕ್ಷಿಸುತ್ತಾ ಬರುವ ದೇವರನ್ನು ಮನಮುಟ್ಟಿ ಭಜಿಸುವದು ಮನುಷ್ಯರಿಗೆ ಯುಕ್ತವಾಗಿದೆ. ಸದ್ಭಕ್ತರಿಗೆ ಆತನ ಕೃಪೆಯ ಪ್ರಸಾದವು ಸಿದ್ಧಿಸುವದೆಂಬುವದಕ್ಕೆ ಏನೂ ಸಂದೇಹವಿಲ್ಲ.





# 1. MINERAL KINGDOM

# ೧. ಧಾತುವರ್ಗವು



## THE PROPERTIES OF MATTER

### ಭೌತಿಕ ಲಕ್ಷಣಗಳು



ವರು ಸೃಷ್ಟಿಸಿದ ಲೋಕಗಳಲ್ಲಿ ನಮಗೆ ವಾಸಸ್ಥಾನವಾಗಿ ನೇಮಕ ಮಾಡಿದ ಭೂಲೋಕವು ಒಂದಾಗಿದೆ. ಅದರಲ್ಲಿಯ ಸೃಷ್ಟಿಯು ಉಂಟಾಗುತ್ತಾ, ಇಲ್ಲವಾಗುತ್ತಾ, ಕಾಣಿಸುತ್ತಾ, ಕಾಣದೆ ಹೋಗುತ್ತಾ, ನಾನಾವಿಧ ರೂಪಭೇದಗಳಾಗುತ್ತಾ, ಅದೆ. ಇದಕ್ಕೆ ಉದಾಹರಣೆ: ನೀರು ಕುದಿಸಿದರೆ ಅದರಿಂದ ಹಬೆ ಹುಟ್ಟಿ, ಸೂಕ್ಷ್ಮ ಅಣು ರೂಪವಾಗಿ ಮೇಲಕ್ಕೇರಿ, ಕಾಣದೆ ಹೋಗುತ್ತದೆ; ಮತ್ತು ಬೆಟ್ಟದ ಕಲ್ಲು ಪುಡಿಯಾಗಿ ಮಣ್ಣಾಗುತ್ತದೆ; ಮತ್ತು ಅದು ಧೂಳಾಗಿ, ಬೆಳೆಯುವ ಸಸ್ಯಾದಿಗಳಲ್ಲಿ ಅಣುರೂಪವಾಗಿ ಕವಿಯುತ್ತದೆ. ಬೀಜವು ಮೊಳಕೆಯಾಗಿ, ಗಿಡವಾಗುತ್ತದೆ, ಗಿಡದಲ್ಲಿ ಫಲ ಹುಟ್ಟುತ್ತದೆ, ಫಲದಲ್ಲಿ ಬೀಜ ಉಂಟು; ಬಳಿಕ ಗಿಡವು ಫಲವನ್ನು ಕೊಟ್ಟು ಮೇಲೆ ಒಣಗಿ, ಸುಟ್ಟು, ಬೂದಿಯಾಗುವದು. ಹೀಗೆ ಕಾಲಕ್ರಮದಿಂದ ಸೃಷ್ಟಿಯು ಎಡೆ ಬಿಡದೆ ರೂಪಾಂತರವಾಗುತ್ತದೆ; ಆದರೆ ರೂಪಗಳು ಬೇರೆಯಾಗುವದಲ್ಲದೆ ಅದು ತಾನೇ ನಾಶವಾಗುವದಿಲ್ಲ.

ಪಂಚಭೂತಗಳಲ್ಲಿ ಒಂದಾದ ನೀರು ಶೀತಪ್ರದೇಶಗಳಲ್ಲಿ ಹುಟ್ಟುವ ಕಡು ಛಳಿಯಿಂದ ಗಡ್ಡೆ ಕಟ್ಟಿ, ಕಲ್ಲಿನಂತೆ ಘಟ್ಟಿಯಾಗುವದು; ಆದರೆ ಹೀಗೆ ಕಲ್ಲಾದ ನೀರು

ಬೇಸಿಗೆಗೆ ಕರಗಿ, ಮರಳಿ ನೀರಾಗುವದು. ಸೂರ್ಯನ ಬಿಸಲಿನಿಂದಲೂ ಪೃಥ್ವಿಯ ಕಾವಿನಿಂದಲೂ ಭೂಮಿಯ ಮೇಲಿರುವ ನೀರು ಕಾದು, ಹಬೆಯಾಗಿ, ಏರಿ, ಮೋಡಗಳಾಗಿ ಕೂಡಿಕೊಂಡು, ಬಳಿಕ ಬಾನಿನಿಂದ ಮಳೆಯಾಗಿ ಹನಿದು, ನೀರಾಗಿ ಭೂಮಿಗೆ ತಿರುಗುವ ಪದ್ಧತಿ ಸರ್ವತ್ರ ಸ್ಥಿರವಾದದ್ದು.

ಅಂತರಿಕ್ಷದಲ್ಲಿಯಣ ಘಾಳಿ ಅತ್ಯಂತ ಸೂಕ್ಷ್ಮವಾಗಿರುವದರಿಂದ ಕಣ್ಣಿಗೆ ಕಾಣುವದಿಲ್ಲ.

ಜಡವಸ್ತುಗಳ ಗುಣಗಳನ್ನು ಅಸಂಯೋಗವಾಗಿಯೂ ಸಂಯೋಗವಾಗಿಯೂ ವರ್ಣಿಸ ತಕ್ಕದ್ದು. ಪರಾಸಂಯೋಗಗುಣವೇನಂದರೆ — ಒಂದು ವಸ್ತು ತನ್ನಷ್ಟಕ್ಕೆ ತೋರಿಸುವಂಥಾದ್ದು; ಬೆಳಕಿಗೆ ಹೊಳಪು, ಬೆಂಕಿಗೆ ಉರಿಯು, ಸ್ಪಟಿಕಕ್ಕೆ ಪ್ರಕಾಶವು ಪರಾಸಂಯೋಗಗುಣ. ಪರಸಂಯೋಗಗುಣವೇನಂದರೆ — ಒಂದು ಪದಾರ್ಥಕ್ಕೆ ಮತ್ತೊಂದು ಕೂಡಿದಲ್ಲಿ ಕಾಣುವ ಗುಣವು; ಉದಾಹರಣೆ: ಪಾಚಿಯು ನೀರಿನಲ್ಲಿ ಹಾಕಲು, ನೀರನ್ನು ಹೀರುವದು; ಕಟ್ಟಿಗೆತುಂಡು ಬೆಂಕಿಯಲ್ಲಿಡಲು, ಸುಟ್ಟು ಹೋಗುವದು. ನೀರು ಹೀರುವಂಥಾದ್ದು ಪಾಚಿಗೆ ಪರಸಂಯೋಗಗುಣ; ಬೆಂಕಿಯಿಂದ ಸುಟ್ಟು ಹೋಗುವಂಥಾದ್ದು ಕಟ್ಟಿಗೆಗೆ ಪರಸಂಯೋಗಗುಣವು.

ಪರಿಮಾಣ ರೂಪಗಳು, ಅಚಲತ್ವ, ವಿಕಾಸ, ಸಂಕೋಚ, ಅಪ್ರವೇಶ್ಯ, ವಿಭಾಜ್ಯ, ಆಕರ್ಷಣ, ಭಾರ ಈ ಎಂಟು ಸಾಧಾರಣ ಗುಣಗಳು ಜಡಪದಾರ್ಥಗಳಲ್ಲಿ ಕಾಣುತ್ತವೆ. ಉದ್ದವೂ ಅಗಲವೂ ತೋರವೂ ತೆಳವೂ ಇತ್ಯಾದಿ ರೂಪ ಮತ್ತು ಪರಿಮಾಣಕ್ಕೆ ಶೇರುತ್ತದೆ. (ಕಣಾದ ಮುನಿ ಹೇಳುವದೇನಂದರೆ —

"ತತ್ಪರಿಣಾಮಂ ಚತುರ್ವಿದಮ್ ಅಣು ಮಹದ್ ದೀರ್ಘಂ ಹ್ರಸ್ವಂ„).

ಸ್ವಸ್ಥಾನವನ್ನು ಬಿಡದೆ ಇರುವಂಥ ಗುಣಕ್ಕೆ ಅಚಲತ್ವವೆಂಬ ಹೆಸರು; ಈ ವಿಷಯಕ್ಕೆ "ಅಲ್ಲಾಡಿಸುವವನಿಲ್ಲದೆ ಹುಲ್ಲಿನ ಗರಿಯೂ ಅಲ್ಲಾಡುವದಿಲ್ಲವು" ಎಂಬ ಗಾದೆ ಒಪ್ಪುತ್ತದೆ. ಉಷ್ಣ ಮೊದಲಾದವುಗಳ ಸಂಯೋಗದಿಂದ ವಸ್ತುಗಳು ಉಬ್ಬುವದಕ್ಕೆ ವಿಕಾಸವೆಂಬ ಹೆಸರು. ಉಷ್ಣ ನಿವಾರಣ ಮೊದಲಾದ ಹೇತುಗಳಿಂದ ವಸ್ತುಗಳು ಅಡಕವಾಗುವದಕ್ಕೆ ಸಂಕೋಚವೆಂಬ ಹೆಸರು. ಒಂದು ಪದಾರ್ಥವಿರುವಲ್ಲಿ ಮತ್ತೊಂದು ಪದಾರ್ಥ ಶೇರಕೂಡದ್ದಕ್ಕೆ ಅಪ್ರವೇಶ್ಯವೆಂದು ಹೆಸರು; ಉದಾಹರಣೆ: ಒಂದು ಪುಸ್ತಕವಿಟ್ಟಿರುವಲ್ಲಿ ಮತ್ತೊಂದು ಪುಸ್ತಕವಿಡ ಬೇಕಾದರೆ ಮೊದಲನೇದನ್ನು ತೆಗೆಯದೆ, ಎರಡನೇದನ್ನು ಇಡಕೂಡದು; ಮತ್ತು ನೀರು ತುಂಬ ತುಂಬಿದ ಮಡಿಕೆಯಲ್ಲಿ ಕಲ್ಲು ಇಕ್ಕಿದರೆ ಅದು ಅಡಿಗೆ ಬಿದ್ದು, ತಾನು ಶೇರಿದ ಸ್ಥಳದಲ್ಲಿ ನೀರನ್ನು ತಳ್ಳುವದರಿಂದ ಅಷ್ಟು ನೀರು ಮಡಿಕೆಯಿಂದ ಚಲ್ಲಿ ಹೋಗುತ್ತದೆ; ಘಾಳಿ ತುಂಬಿದ ಚಂಬು ಮಗಚಿ ನೀರಿನಲ್ಲಿ ಮುಳು

ಗಿಸಿದರೆ ಘಾಳಿ ಎಂಬ ಪದಾರ್ಥವು ಇದ್ದಲ್ಲಿ ನೀರೆಂಬ ಮತ್ತೊಂದು ಪದಾರ್ಥವು ಶೇರಲಾರದ್ದರಿಂದ ಚಂಬಿನಲ್ಲಿ ತಕ್ಕ ಮಟ್ಟಿಗೆ ಹೋಗುವದಿಲ್ಲ, ಚಂಬಿನ ಘಾಳಿ ಹೋದಾಗ ನೀರು ಒಳಗೆ ಶೇರುತ್ತದೆ. ಕಲ್ಲು ಮಣ್ಣು ಮರಾದಿಗಳು ಅತ್ಯಂತ ಸೂಕ್ಷ್ಮ ಭಾಗಗಳಾಗಿ ಭಿನ್ನವಾಗ ಬಹುದಾದ್ದಕ್ಕೆ ವಿಭಾಜ್ಯವೆಂದು ಹೆಸರು. ಉದಾಹರಣೆಗಳು: ಒಂದು ಬೆಣಚಿಕಲ್ಲು ಒರಳಿನಲ್ಲಿ ಹಾಕಿ, ಕುಟ್ಟಿ, ಲಕ್ಷಾಂತರ ಚೂರಾಗಿ ಪುಡಿ ಮಾಡ ಬಹುದು; ಕಾಳುಗಳನ್ನು ಹಿಟ್ಟು ಮಾಡ ಬಹುದು; ಲೋಹಗಳ ಅಣುಗಳನ್ನು ಅರದಿಂದ ತಿಕ್ಕುವದರಿಂದಾಗಲಿ ಸುತ್ತಿಗೆಯಿಂದ ಹಣಿಯುವದರಿಂದಾಗಲಿ ಕಬ್ಬೆಚ್ಚಿನಿಂದ ಎಳೆಯುವದರಿಂದಾಗಲಿ ವಿಂಗಡಿಸ ಬಹುದು; ನೀರು ಹನಿಗಳಾಗಿ ಭಾಗಿಸಿ, ಒಂದೊಂದು ಹನಿಯ ಒತ್ತಿ ಅಗಲ ಮಾಡಿ, ಅದರ ಅಣುಗಳನ್ನು ವಿಂಗಡಿಸ ಬಹುದು; ಹೀಗೆ ಭಾಗವಾದ ಹನಿ ಉಬ್ಬೆಯಾದರೆ ತೀರ ಚಿಕ್ಕವಾದ, ಕಣ್ಣಿಗೆ ತೋರದಂಥ ಭಾಗಗಳಾಗ ಬಹುದು. ಜಡ ಅಜಡ ದೇಹಗಳಲ್ಲಿ ಕೂಡಿದ ಲೆಖ್ಖವಿಲ್ಲದ ಅಣುಗಳು ತಮ್ಮಷ್ಟಕ್ಕೆ ಭಿನ್ನವಾಗದೆ, ಏಕೀಭೂತವಾಗಿರುವದಕ್ಕೆ ಆಕರ್ಷಣಸಂಯೋಗವೆಂಬ ಹೆಸರು. ಭೌತಿಕವು ಭೌತಿಕವನ್ನು ಆಕರ್ಷಿಸುತ್ತದೆ: ನುಣುಪಾದ ಎರಡು ಕಲ್ಲಿನ ಹಲಿಗೆಗಳನ್ನಾಗಲಿ ಎರಡು ಕನ್ನಡಿಬಿಲ್ಲೆಗಳನ್ನಾಗಲಿ ಎರಡು ಲೋಹದ ತಗಡುಗಳನ್ನಾಗಲಿ ಮುಖಕ್ಕೆ ಮುಖ ತಗಲಿಸಿ ಜೋಡಿಸಿದರೆ ಒಂದಕ್ಕೊಂದು ಹಿಡುಕೊಳ್ಳುತ್ತದೆ; ಅವುಗಳನ್ನು ವಿಂಗಡಿಸುವದು ಪ್ರಯಾಸ. ಇದೇ ಪ್ರಕಾರ ನೀರಿನ ತಟುಕುಗಳು, ಪಾದರಸದ ಬಿಂದುಗಳು ಒಂದಕ್ಕೊಂದು ಸಮೀಪಿಸಿದರೆ ಮಿಳಿತವಾಗುತ್ತವೆ.

ಭೌತಿಕವಾದ ಪದಾರ್ಥಗಳಿಗೆಲ್ಲಾ ಭಾರವದೆ; ಆದರೆ ಬೇರೆ ಬೇರೆ ವಸ್ತುಗಳ ಭಾರದಲ್ಲಿ ಅತ್ಯಂತ ಭೇದವದೆ. ಕಡಿಮೆ ಭಾರದವುಗಳಿಗೆ ಲಘುವೆಂದು, ಹೆಚ್ಚು ಭಾರದವುಗಳಿಗೆ ಗುರುವೆಂದು, ಹೇಳುತ್ತೇವೆ. ಹಾಗೆ ಘಾಳಿ ಮುಂತಾದ ಸೂಕ್ಷ್ಮ ಪದಾರ್ಥಗಳಿಗೂ ತಮ್ಮ ತಮ್ಮ ಭಾರ ಉಂಟು. ಹೆಚ್ಚು ಭಾರವಾದವುಗಳು ಇಳಿಯುತ್ತವೆ, ಕಡಿಮೆ ಭಾರವಾದವುಗಳು ಏರುತ್ತವೆ. ಹಬೆ ಘಾಳಿಗಿಂತ ಲಘುವಾಗಿರುವದರಿಂದ ಮೇಲಕ್ಕೆ ಹೋಗುತ್ತದೆ; ಮಳೆಹನಿ ಘಾಳಿಗಿಂತ ಭಾರವಾಗಿರುವದರಿಂದ ಭೂಮಿಗೆ ಬೀಳುತ್ತದೆ. ಕೆಲವು ಮರ ಮುಂತಾದವುಗಳು ನೀರಿಗಿಂತ ಲಘುವಾಗಿರುವದರಿಂದ ಅದರಲ್ಲಿ ಮುಣುಗದೆ, ತೇಲಾಡುತ್ತವೆ; ಕಲ್ಲು ಕಬ್ಬಿಣ ಮುಂತಾದವುಗಳು ಭಾರ ಹೆಚ್ಚಾಗಿರುವದರಿಂದ ಮುಳುಗಿ, ಅಡಿಗೆ ಶೇರುತ್ತವೆ. ಬೆಂಡು ಘಾಳಿಯಲ್ಲಿ ಬಿಸಾಡಿದರೆ ಅದಕ್ಕಿಂತ ಗುರುವಾಗಿರುವದರಿಂದ ನೆಲಕ್ಕೆ ಬೀಳುತ್ತದೆ; ನೀರಿನಲ್ಲಿ ಹಾಕಿದರೆ ಅದಕ್ಕಿಂತ ಲಘುವಾಗಿರುವದರಿಂದ ತೇಲುತ್ತದೆ.



## 2. GEOLOGY AND CREATION

# ೨. ಪೃಥ್ವಿಭಾವವಿದ್ಯೆಯೂ ಭೂನಿರ್ಮಾಣ ಕ್ರಮವೂ

"ಇಯಂ ಸಕರ್ತೃಕಾ ನೂನಂ ಕ್ಷಿತಿರ್ಭವಿತುಮ್ ಅರ್ಹತಿ| ಕಾರ್ಯತ್ವಂ ತತ್ರ ಹೇತುಃ ಸ್ಯಾತ್| ಘಟಾದೌ ದೃಶ್ಯತೇ ಯಥಾ"||

ರಾಮಾನುಜನ ಭಾಷ್ಯ.

ಅಂದರೆ: ಈ ಭೂಮಿಯು ನಿಶ್ಚಯವಾಗಿ ಒಬ್ಬ ಕರ್ತನ ಆಧೀನದಲ್ಲಿ ಆಗಿರಬೇಕು; ಕರ್ತೃತ್ವವು ಇಲ್ಲಿ ಹೇತುವಾಗಿದೆ, ಮಡಿಕೆ ಮುಂತಾದ್ದರಲ್ಲಿ ಕಾಣುವ ಹಾಗೆ.




ಭೂಮಿಯಾಗಿರುವ ಮಣ್ಣು, ಕಲ್ಲು, ಲೋಹಾದಿಗಳ ವಿದ್ಯಮಾನದ ವಿವರವು ಪೃಥ್ವಿಭಾವವಿದ್ಯೆಯನ್ನಿಸಿಕೊಳ್ಳುವದು.

ಭೂಮಿ ಎಂಬ ಅಂಡದ ಅಡ್ಡಳತೆಯು ಹೆಚ್ಚುಕಡಿಮೆ ೮೦೦೦ ಮೈಲು ಆಗಿದೆ; ಅದರ ಸುತ್ತಳತೆಯು ಸ್ವಲ್ಪ ಕಡಿಮೆಯಾಗಿ ೨೫೦೦೦ ಮೈಲು. ಭೂಮಿಯಲ್ಲಿ ಗವಿ ಅಗಿದು, ಹೆಚ್ಚು ಹೆಚ್ಚು ಆಳಕ್ಕೆ ಹೋದರೆ ಧಾಳಿ ಹೆಚ್ಚು ಹೆಚ್ಚು ಶೆಖೆಯಾಗುವದರಿಂದ ವಿಲಾಯತಿಯ ವಿದ್ವಾಂಸರಲ್ಲಿ ಹಲವರು ಈ ಲೆಖ್ಖದ ಪ್ರಕಾರ ಭೂಮಿಯ ಒಳಭಾಗವು ಅಗ್ನಿಮಯವಾಗಿರಬೇಕೆಂದು ನೆನಸಿ, ಪಾಷಾಣಾದಿರೂಪಗಳಿಗೆ ಅಗ್ನಿಯೇ ಪ್ರಧಾನಭೂತವೆಂದು, ಹೇಳುತ್ತಾರೆ; ಬೇರೆ ಹಲವರು ಜಲವೇ ಪ್ರಧಾನವೆಂದು, ವಾದಿಸುತ್ತಾರೆ. ಪೃಥ್ವಿಭಾವವಿದ್ಯೆಯಲ್ಲಿ ಈ ಎರಡು ಸೂತ್ರಗಳನ್ನು ಕೂಡಿ ಹೇಳಬೇಕು.

೩೦೦೦ ಅಡಿಗಿಂತ ಕೆಳಗೆ ಭೂಮಿಯನ್ನು ಅಗಿದು ನೋಡಿದವರಿಲ್ಲ. ಅಗಿಯುತ್ತಾ ಅಗಿಯುತ್ತಾ ಹೋಗಲು, — ನೀರುಳ್ಳಿಗಡ್ಡೆಯ ಶಿಪ್ಪೆಗಳಂತೆ ಒಂದರ ಕೆಳಗೆ ಒಂದು ಒಟ್ಟಿರುವ ನಾನಾ ವಿಧವಾದ ಮಣ್ಣು, ಕಲ್ಲು ಮೊದಲಾದವುಗಳ ಪರೆಗಳು ಕಾಣುತ್ತವೆ.

ಆ ಪರೆಗಳ ಮೇಲೆ ಗೊತ್ತಾಗುವದೇನಂದರೆ — ಕಾಲಾಂತರವಾಗಿ ಭೂಮುಖದಲ್ಲಿ ಬಹಳ ಮಾರ್ಪಾಟಾಯಿತು: ಇದ್ದ ಸಮುದ್ರ ಸರೋವರಗಳು ಹೋದವು; ಇದ್ದ ವನಾಂತರಗಳು ಮುಚ್ಚಿ ಹೋದವು; ಇದ್ದ ಸಸ್ಯಾದಿಗಳಲ್ಲಿ ಅನೇಕ ಬದಲಾದವು; ಇದ್ದ ಮೃಗಾದಿಗಳಲ್ಲಿ ಅನೇಕ ಹೋದವು, ಬೇರೆ ಅವು ಬಂದವು. ಯಾಕಂದರೆ ಈ ಸಂಗತಿಯ ಪ್ರಮಾಣಕ್ಕಾಗಿ ಅನೇಕ ಕಲ್ಲಾದ ಜಂತ್ವಾದಿಗಳು ಆ ಗನಿಗಳಲ್ಲಿ ಶಿಕ್ಕುತ್ತವೆ.

ದೇವಕರ್ತೃತ್ವದಲ್ಲಿ ಆದ ಸೃಷ್ಟಿಯ ಕ್ರಮವು ಉತ್ಪತ್ತಿಯ ಗ್ರಂಥದಲ್ಲಿ ವಿವರಿಸಿರುವದು ಹ್ಯಾಗಂದರೆ: ಭೂಮಿ ಉಂಟಾದ ಮೇಲೆ

ಬೆಳಕು ಮೊದಲನೇ ದಿವಸದಲ್ಲಿ ಉಂಟಾಯಿತು;

ಎರಡನೇ ದಿವಸದಲ್ಲಿ ಅಂತರಿಕ್ಷ ಅಥವಾ ಆಕಾಶ ಉಂಟಾಯಿತು;

ಮೂರನೇ ದಿವಸದಲ್ಲಿ ನೀರು ಭೂಮಿಯಿಂದ ಕೆಳಗಾಗಿ, ಸಮುದ್ರವೆನ್ನಿಸಿತು;

ನಾಲ್ಕನೇ ದಿವಸದಲ್ಲಿ ದಿವಸ ಪಕ್ಷ ಮಾಸ ಋತು ವರುಷ ಮುಂತಾದ ಕಾಲಭೇದಗಳನ್ನು ಗೊತ್ತು ಮಾಡುವ ಸೂರ್ಯ ಚಂದ್ರ ನಕ್ಷತ್ರಾದಿಗಳು ಉಂಟಾದವು;

ಐದನೇ ದಿವಸದಲ್ಲಿ ಜಲಚರವಾದ ಮೀನುಗಳೂ ಖೇಚರವಾದ ಹಕ್ಕಿಗಳೂ ಉಂಟಾದವು;

ಆರನೇ ದಿವಸವಲ್ಲಿ ಮೃಗ, ಪಶ್ವಾದಿಗಳೂ ಅವುಗಳ ತರುವಾಯ ಪುರುಷ ಸ್ತ್ರೀಯರಿಬ್ಬರೂ ದೇವರಿಂದ ನಿರ್ಮಾಣವಾದರು; ಭೂಲೋಕವನ್ನೆಲ್ಲಾ ಆಳಿರೆಂದು, ಸರ್ವಕರ್ತನು ಇವರಿಬ್ಬರನ್ನು ತನ್ನ ರೂಪವಾಗಿ ನಿರ್ಮಿಸಿದನು.

ಈ ಪ್ರಕಾರವಾಗಿ ದೇವರು ಆರು ದಿವಸದಲ್ಲಿ ಭೂನಿರ್ಮಾಣಕೃತ್ಯವನ್ನು ತೀರಿಸಿ, ಏಳನೇ ದಿವಸದಲ್ಲಿ ತೀರಿಕೆಯಾಗಿದ್ದನು.

ಉನ್ನತವಾದ ಪರ್ವತಶಿಖರಗಳಲ್ಲಿಯೂ ಬೇರೆ ಭೂಪ್ರದೇಶಗಳಲ್ಲಿಯೂ ಸಾಮುದ್ರಿಕ ದ್ರವ್ಯಗಳು ವಿಶೇಷವಾಗಿ ಶಿಲಾರೂಪದಲ್ಲಿ ಶಿಕ್ಕುತ್ತವೆ; ಇದು ಮೊದಲಾದ ದೃಷ್ಟಾಂತಗಳಿಂದ ಪೂರ್ವದಲ್ಲಿ ಜಲಪ್ರಳಯ ಉಂಟಾಯಿತೆಂದು, ನಿಶ್ಚಯ ಮಾಡ ಬರುತ್ತದೆ.



# 3. ON THE ATMOSPHERE, RAIN, DEW, LIGHTNING, &C.

# ೩. ವಾಯುವು, ಮಳೆಯು, ಮಿಂಚು, ಗುಡುಗು, ದಿಕ್ಕು ಮೊದಲಾದವುಗಳು

## ATMOSPHERE

### ವಾಯುವು

"ಬೇಸಿಗೆಯ ಬಿಸಲಿನಲಿ, ಬೆಟ್ಟದಿ
ಬೀಸುತಿಹ ಘಾಳಿಯಲಿ, ಮಳೆಯನು
ಸೂಸುತಿಹ ಸೋನೆಯಲಿ, ಮಂಜು ಸುರಿಯುವ ಶೀತದಲಿ ||
ಘಾಸಿಯಾಗುತ, ಘೋರ ದುಖ್ಖಾ—
ವಾಸವೆನ್ನದೆ, ತಪ ಮಾಡುವ—
ರೈಸೆ! — ಸುಖವೆನಿತಿಲ್ಲ; ಕಾಲಾಧೀನರಾಗಿಹರು.,, || ೪೧ ||

ಅನುಭವಾವೃತ, ೩ ನೇ ಸಂಧಿ.



ಈ ಚಿತ್ರದಲ್ಲಿ ಕೆಳಗೆ ದೋಣಿ ಕಟ್ಟಿದ ವಾಯುವಿಮಾನವು ಆಕಾಶಕ್ಕೆ ಏರಿದ್ದು ಕಾಣುತ್ತದೆ. ಒಂದು ವೇಳೆ ಜನರು ಆ ದೋಣಿಯಲ್ಲಿ ಕುಂತಿರುತ್ತಾರೆ.

ಯುವು ಕಣ್ಣಿಗೆ ಕಾಣಿಸದು; ಆದರೂ ಅದು ಎಲ್ಲಾ ಪ್ರದೇಶಗಳಲ್ಲಿ ವರ್ತಿಸುವದು. ಮನೆಗಳಲ್ಲಿ ಆಗಲಿ ಬೀದಿಗಳಲ್ಲಿ ಆಗಲಿ ಇತರವಾದ ಎಂಥಾ ಸ್ಥಳಗಳಲ್ಲಿ ಆಗಲಿ ವರ್ತಿಸುವದು. ಅದು ಮೇಲೆ ನಾಲ್ವತ್ತು ಮೈಲುಗಳ ವರೆಗೂ ಇರುತ್ತದೆ. ಅದನ್ನು ನೋಡುವದಕ್ಕೆ ಅಶಕ್ಯವಾದಾಗ್ಯೂ ಅದರ ಚಲನೆಯ ಪರಿಮುಖವಾಗಿ ವಾಯು ಉಂಟೆಂದು, ದೃಕ್ಸ್ಪರ್ಶೇಂದ್ರಿಯಗಳಿಂದ ತಿಳಿದು ಕೊಳ್ಳಬಹುದು. ನೆಲದ ದೆಸೆಯಿಂದ ಬರುವ ಘಾಳಿ ನೆಲಘಾಳಿ ಎಂತಲೂ ಸಮುದ್ರದಿಂದ ಬರುವ ಘಾಳಿ ಸಮುದ್ರಘಾಳಿ ಎಂತಲೂ ತೆಂಕಲಿಂದ ಬರುವ ಘಾಳಿ ತೆಂಕಣಘಾಳಿ ಎಂತಲೂ ಬಡಗದಿಂದ ಬರುವ ಘಾಳಿ ಬಡಗಘಾಳಿ ಎಂತಲೂ ಬಹಳ ಬಿರುಸಾಗಿ ಬೀಸುವ ಘಾಳಿ ಬಿರುಘಾಳಿ ಎಂತಲೂ ಸುತ್ತಿ ಸುತ್ತಿ ಬೀಸುವ ಘಾಳಿ ಸುಳಿಘಾಳಿ ಎಂತಲೂ ಅನ್ನಿಸಿ ಕೊಳ್ಳುವದು. ಹಡಗಿನ ಹಾಯಿ ಎತ್ತಿ ಕಟ್ಟಿದಾಗ ಚನ್ನಾಗಿ ಘಾಳಿ ಬೀಸಿದರೆ ನಾವೆಯು ನಡೆಯುವದು.



ಈ ಜಿತ್ರ ಒಂದು ವಾಯು
ಗಾಣವ ತೋರಿಸುತ್ತದೆ. ಪಟಕಟ್ಟಿದ ಅದರ ಕೈ ಘಾಳಿಗೆ ತಿರಿಗಿದರೆ
ಒಳಗೆ ಬೀಸುವ ಕಲ್ಲುಗಳು ಆಡುತ್ತವೆ

“ಘಾಳಿಯಿಂದ ಧೂಳು ಹಾರಿದರೆ ಕೋಳೀ ಹೊಟ್ಟೆ ತುಂಬೀತೇ?„

ಎಂತ ಕೇಳಿ, ಘಾಳಿಗೆ ಸ್ವಲ್ಪ ಹಾಸ್ಯ ಮಾಡಿದರೂ ಘಾಳಿ ಇಲ್ಲದೆ ಹೋದರೆ ಯಾವ ಜಂತುವಿಗಾಗಲಿ ಜೀವ ಉಳಿಯದು, ಅಗ್ನಿ ಇರಲಾರದು, ತರುಗುಲ್ಮಲತಾದಿಗಳು ಬೆಳೆಯಲಾರವು, ಮಾನುಷ್ಯಜೀವ ಆರಿ ಹೋಗುವದು.

“ತಂಘಾಳಿ ಕಂಡರೆ ಮಂಗವಾದರೂ ಉಲ್ಲಾಸಿಸುತ್ತದೆ.„

ವಾಯುವು ಒಂದೊಂದು ವೇಳೆ ಶಾಂತವಾಗಿಯೂ ಮೆಲ್ಲವಾಗಿಯೂ, ಒಂದೊಂದು ವೇಳೆ ತೀವ್ರವಾಗಿಯೂ ಕಠಿಣವಾಗಿಯೂ ಇರುತ್ತದೆ.

ಶಾಂತ ಘಾಳಿಯು ೧ ತಾಸಿಗೆ ಹೆಚ್ಚುಕಡಿಮೆ ೨ ಹರದಾರಿ ದ್ರವಿಸುತ್ತದೆ.

| | | | | | | | |
|---|---|---|---|---|---|---|---|
| ಸುಮಾರಿನ | " | " | " | " | ೧೨ | " | " |
| ಸ್ವಲ್ಪ ಹೆಚ್ಚು ಬೀಸುವ | " | " | " | " | ೩೦ | " | " |
| ಅಧಿಕವಾಗಿ ಬೀಸುವ | " | " | " | " | ೬೦ | " | " |
| ಬಿರು | " | " | " | " | ೧೨೦ | " | " |
| ಕಠೋರ ಬಿರು | " | " | " | " | ೨೦೦ | " | " |

"ಬಿರು ಘಾಳಿಗೆ ಹಿಡಿದರೆ ಸರಿಗೆ ಆದೀತೇ?" ಎಂದು ಕೇಳುತ್ತಾರೆ.

## RAIN

### ಮಳೆಯು

"ಮೂರ್ಖಗೆ ಹೇಳಿದ ಬುದ್ಧಿ, ಘೋರ್ಕಲ್ಲ ಮೇಲೆ ಹೊಯಿದ ಮಳೆ"
ಗಾದೆ.

ಒಂದು ಬಟ್ಟಲಿನಲ್ಲಿ ಸ್ವಲ್ಪ ನೀರು ಹಾಯಿದು ಬಿಸಿಲಿನಲ್ಲಿ ಇಟ್ಟರೆ ಬಿಸಲು ಕಾಯುತ್ತಾ ಕಾಯುತ್ತಾ, ನೀರು ಕಡಿಮೆಯಾಗುವದು. ಒಂದು ಗಡಿಗೆ ನೀರು ತಂದು ಬೆಂಕಿಯ ಮೇಲೆ ಇಟ್ಟಿದ್ದಾದರೆ ಆ ನೀರು ಕಾಯುತ್ತಾ ಕಾಯುತ್ತಾ ಹಬೆಯಾಗಿ ಹೋಗುವ ಹಾಗೆ ಸೂರ್ಯರಶ್ಮಿ ತಗಲುತ್ತಾ, ಬಟ್ಟಲಿನ ನೀರು ಹಬೆಯ ರೂಪವಾಗಿ, ಮೇಲಕ್ಕೇರುವದು. ಆ ಹಬೆಯು ಬಹಳ ಸೂಕ್ಷ್ಮವಾಗಿದ್ದರೆ ಕಂಣಿಗೆ ಕಾಣಿಸುವದಿಲ್ಲ.

ಸಮುದ್ರ ಮೊದಲಾದ ಜಲಸ್ಥಳಗಳ ನೀರು, ಮೇಲೆ ಹೇಳಿದ ಪ್ರಕಾರ, ಪ್ರತಿದಿನವು ಸೂರ್ಯರಶ್ಮಿಯಿಂದ ಹಬೆಯ ರೂಪವಾಗಿ, ಏಳುವದು. ಹೀಗೆ ಹೋಗುವಂಥ ಹಬೆಯು ಆಕಾಶದಲ್ಲಿ ಅಲ್ಲಲ್ಲಿ ಕೂಡಿ ಕೊಂಡು, ತಂಘಾಳಿ ತಾಗಿ, ಮೇಘಗಳಾಗುವದು. ಒಲೇ ಮೇಲಿಟ್ಟ ಜಲಪಾತ್ರೆಗೆ ಒಂದು ಮುಚ್ಚಳ ಮುಚ್ಚಿದರೆ ಆ ಪಾತ್ರೆಯೊಳಗಿರುವ ಹಬೆಯು ಮುಚ್ಚಳಕ್ಕೆ ತಗಲಿ, ಮುಚ್ಚಳ ತಣ್ಣಗಾಗಿರುವದರಿಂದ ಬಿಂದು ಬಿಂದಾಗಿ, ಸುರಿಯುವದು. ಈ ಪ್ರಕಾರವೇ ಹಬೆಯ ವಿಕಾರವಾದ ಮೇಘಗಳಿಗೆ ತಕ್ಕಷ್ಟು ತಂಘಾಳಿ ತಾಗಿದರೆ ಆ ಹಬೆಯು ಬಿಂದುರೂಪವಾಗಿ, ಮಳೆ ಬರುವದು. ಮಳೆಯಿಂದ ವಿಶೇಷ ಪ್ರಯೋಜನ ಉಂಟು. ಅದು ಬೀಳದೆ ಹೋದರೆ ಹಸರು

ಹುಲ್ಲು ಮುಂತಾದ ಒಂದು ಜೀನಸಾದರೂ ಮೊಳೆಯಲಾರದು; ಬರ ಉಂಟಾಗುವದು.

"ಮಳೆ ಇಲ್ಲದ ಪೈರೂ ಮಾತೆ ಇಲ್ಲದ ಕೂಸೂ ಸಮ.,,



## DEW

### ಮಂಜು

ಹಗಲುಹೊತ್ತು ಸೂರ್ಯರಶ್ಮಿಯಿಂದ ಭೂಮಿಯಲ್ಲಿಯ ನೀರು, ಮೇಲೆ ಹೇಳಿದ ಹಾಗೆ, ಹಬೆಯಾಗಿ, ಏರುವದು; ಸೂರ್ಯನು ಅಸ್ತಮಿಸಿದ ಬಳಿಕ ಭೂಮಿ ತಣ್ಣಗಾಗುತ್ತಲೆ ಅದರ ಹತ್ತರದ ಹಬೆಯು ತಂಪಿನಿಂದ ಕೂಡಿ, ವಿಶೇಷವಾಗಿ ಹುಲ್ಲು ಮುಂತಾದ ಮೊನೆಯುಳ್ಳದ್ದಕ್ಕೆ ಹನಿಹನಿಯಾಗಿ ಹತ್ತುವದು. ಇದಕ್ಕೆ ಮಂಜು ಎಂದು ಹೆಸರು. ಉದ್ದವಾಗಿ ಏರಿದ ಹಬೆಯು ಥಳಿ ತಾಗಿ ಮೋಡವಾಗುವಂತೆ ಭೂಮೀ ಹತ್ತರದಲ್ಲಿಯದು ಸಹಾ ಆಗಿಂದಾಗ್ಗೆ ಹೊಗೆಯುವಂಥ ಮಂಜು ಆಗುವದು. ಈ ತರದ ಮಂಜು ಬಹಳವಾದರೆ ಇಬ್ಬನಿ ಎನ್ನಿಸುತ್ತದೆ.

## LIGHTNING AND THUNDER &C.

### ಮಿಂಚು, ಗುಡುಗು ಇತ್ಯಾದಿ

"ನೀರ ಮೇಲಣ ಗುಳ್ಳೆ ಲಿಂಗಾ—
ಕಾರದಂದದಿ ಪಾಳವುತಿರಲ್, ಅವಿ—
ಚಾರಿಯಾದವ ಲೋಹದಲಿ ಬಂಧಿಸುವ ತೆರನಂತೆ,||
ತೋರಿ ಅಡಗುವ ಮಿಂಚಿನಂತೆ ಶ—
ರೀರವನು ಕಡು ಮೃತ್ಯುವು ಹೀರಿದಾ—
ಗಾರು ಸಲಹುವರೆ? ನಿತ್ಯವಾರಿಗೆ ತನುವು? ಮಗನೆ, ಕೇಳೆಂದಾ,,.|| ೨೦ ||

ಅನುಭವಾಮೃತ, ೩ ನೇ ಸಂಧಿ.

ಮಿಂಚು ಅಂದರೆ ಮೇಘದಲ್ಲಿ ಹುಟ್ಟುವ ಬೆಂಕಿಯು. ಮಿಂಚು ಹುಟ್ಟಿದ ಮೇಲೆ ಮಳೆ ಹೊಯ್ಯುವ ಪದ್ಧತಿ ಉಂಟು. ಮಿಂಚಿನ ವೇಗವು ಚೋದ್ಯವಾದದ್ದು; ಅದರ ಚಲನೆಯಿಂದ ಮೇಘದಲ್ಲಿ ಧ್ವನಿ ಹುಟ್ಟುವದು. ಇದಕ್ಕೆ ಗುಡುಗೆಂದು ಹೆಸರು. ಕಾಂತಿಯು ಧ್ವನಿಗಿಂತ ಶೀಘ್ರವಾಗಿ ಚರಿಸಿ ಬರುವದು; ಆದದರಿಂದ ಮಿಂಚು ಕಂಡ ಕೀತೆ ಗುಡುಗು ಕೇಳಿಸುವದು. ಧ್ವನಿಯು ನಿಮಿಷದಲ್ಲಿ ಹೆಚ್ಚು ಕಡಿಮೆಯಾಗಿ ೧೧೪೨ ಅಡಿ ದೂರ ಹೋಗುವದು. ಆದದರಿಂದ ಫಿರಂಗಿಯ ಕಾಂತಿಧ್ವನಿಗಳಿಂದ ಫಿರಂಗಿ ಇಟ್ಟು ಇರುವ ಸ್ಥಾನದ ದೂರವನ್ನು ತಿಳಿದು ಕೊಳ್ಳುವ ಪ್ರಕಾರವೇ ಮೇಘದ ಕಾಂತಿಧ್ವನಿಗಳಿಂದ ಮೇಘ ಇಷ್ಟೇ ದೂರದಲ್ಲಿರುತ್ತದೆಂದು, ಗಣಿಸ ಬಹುದು. ಇದಕ್ಕೆ ಉದಾಹರಣೆಯು: ಮಿಂಚು ಕಾಣಿಸಿದ ನಾಲ್ಕು ನಿಮಿಷಗಳ ಮೇಲೆ ಧ್ವನಿ ಕೇಳಿಸಿದರೆ ಆ ಮೇಘವು ೪೫೬೮ ಅಡಿಗಳ ದೂರದಲ್ಲಿರುತ್ತದೆಂದು, ತಿಳಿಯ ಬಹುದು.

ಘಾಳಿ ತಲಗಿ ಉರಿಯಲಿಕ್ಕೆ ಹತ್ತುವಂಥ ಅಣುರಾಶಿಗಳು ಕೆಲವು ಕಡೆಯಲ್ಲಿ, ಮುಖ್ಯವಾಗಿ ಕೊಳಕು ನೀರಿನ ಅಡಿವೆಗಳಲ್ಲಿ ಭೂಮಿಯೊಳಗಿಂದ ಹೊರಟು, ಬೆಳಗುತ್ತವೆ. ಅಂಥಾ ಜ್ವಾಲೆಯನ್ನು ದೈವಚೂಡಿ, ಕೊಳ್ಳಿ ಪಿಶಾಚಿ, ಉಲ್ಕಭೂತ ಎಂದು ಹೇಳುತ್ತಾರೆ.

ಅತಿ ಉತ್ತರವು, ಅತಿ ದಕ್ಷಿಣವು ಆಗಿರುವ ದೇಶಗಳಲ್ಲಿ ಸೂರ್ಯಪ್ರಕಾಶವು ಬಹು ಕಡಿಮೆಯಾಗಿರುವದರಿಂದ ಆ ದೇಶಗಳ ದೀರ್ಘರಾತ್ರಿಸಮಯದಲ್ಲಿ ಅರುಣೋದಯದ ಓಪಾದಿ ಹೊಳೆಯುವ ಒಂದು ಪ್ರಕಾಶವು ಉಂಟಾಗುತ್ತದೆ. ಅದಕ್ಕೆ ಉತ್ತರಪ್ರಕಾಶವೆಂದು, ಹೆಸರು ಉಂಟು. ಅದು ಉತ್ತರ ದೇಶದವರಿಗೆ ಉತ್ತರದಲ್ಲಿ ಮೂಡಿ, ಮಧ್ಯ ಆಕಾಶದ ಪರಿಯಂತರ ಅತಿ ಸೌಂದರ್ಯವಾದ ಕಿರಣಮಾಲೆ ಕಿರೀಟಗಳ ರೂಪವಾಗಿ ಪ್ರಜ್ವಲಿಸಿ, ಆ ದೇಶದವರಿಗೆ ಪ್ರಕಾಶವನ್ನುಂಟು ಮಾಡುತ್ತದೆ.

ಒಂದೊಂದು ವೇಳೆ ಉಲ್ಕಾಪಾತ ಅಂದರೆ ಬೀಳುವ ಕೊಳ್ಳಿ ಎಂಬುವದು ಉಂಟಾಗುತ್ತದೆ. ಅದು ಗೋಳಾಕಾರವಾಗಿ ಪ್ರಜ್ವಲಿಸಿ, ಬಹಳ ವೇಗದಿಂದ ಆಕಾಶವನ್ನು ದಾಟಿ, ಕಡೆಯಲ್ಲಿ ಫಿರಂಗಿ ಬಿಟ್ಟ ಹಾಗೆ ಒಂದು ಶಬ್ದವನ್ನು ಮಾಡಿ, ಒಡೆದು ಹೋಗಿ, ನೆಲಕ್ಕೆ ಬೀಳುತ್ತದೆ; ಅದು ಬಿದ್ದ ಸ್ಥಳವನ್ನು ಹುಡುಕಿ ನೋಡಿದರೆ ಕೆಲವು ಸಾರಿ ಒಂದು ಲೋಹಗುಂಡು ಶಿಕ್ಕುತ್ತದೆ. ಇದೇ ಜಾತಿಯಲ್ಲಿ ರಾತ್ರಿರಾತ್ರಿಗೆ ಕಾಣುವ ನಕ್ಷತ್ರಪತನಗಳು ಶೇರ್ಯಾವೆಂದು, ನೆನಸ ಬಹುದು.

ಪ್ರಾತಃಕಾಲದಲ್ಲಿ ಹುಲ್ಲಿನಲ್ಲಿ ಕೂತಿರುವ ನೀರುಹನಿಗಳು ಬಿಸಲಿಗೆ ನಾನಾ ಬಣ್ಣವಾಗಿ ಶೋಭಿಸುವವು; ಅದರಂತೆ ಬೀಳುವ ಮಳೆಹನಿಗಳಿಗೆ ಸೂರ್ಯಪ್ರಕಾಶ ವಾರೆ

ಯಾಗಿ ಬಿದ್ದರೆ ಅವು ಥಳಥಳಿಸಿ, ಕಾಮನ ಅಥವ ಮಳೆಯ ಬಿಲ್ಲು ಕಾಣಿಸುವದು. ಅದು ಹೊತ್ತಾರೆ ಪಶ್ಚಿಮದಲ್ಲಿ, ಮಧ್ಯಾಹ್ನ ಪೂರ್ವದಲ್ಲಿ ಉಂಟಾಗುವದು.

ಮೇಲೆ ಕೆಳಗೆ ಹೆಚ್ಚು ಕಡಿಮೆಯಾಗಿ ಕಾದ ಘಾಳಿಯ ದೆಸೆಯಿಂದ ಮರೀಚಿಕೆ ಎಂಬದು ಹುಟ್ಟುತ್ತದೆ. ಅದು ದೊಡ್ಡ ಬೈಲುಗಳಲ್ಲಿ ವಿಶೇಷವಾಗಿ ತೋರುವದು. ಕೆರೆಸರೋವರಗಳು ಇಲ್ಲದಲ್ಲಿ ಅವು ಇದ್ದ ಹಾಗೆ ಕಾಣುವದು. ಪ್ರಯಾಣಸ್ಥರಿಗೆ ಅದರಿಂದ ಅನೇಕ ಸಾರಿ ಮೋಸವಾಯಿತು. ಜನರು ಬಿಸಿಲ ಕುದುರೆ ಎನ್ನುವಂಥಾದ್ದು ಮರೀಚಿಕೆಯ ಒಂದು ಜಾತಿ.




ಒಂದು ಪಾತ್ರೆಯಲ್ಲಿ ಒಂದು ನಾಣ್ಯವಿಟ್ಟು, ಇದು ಕಾಣದ ಹಾಗೆ ತಕ್ಕಷ್ಟು ದೂರಕ್ಕೆ ಹೋಗಿ ನಿಂತು, ಮತ್ತೊಬ್ಬನಿಂದ ಆ ಪಾತ್ರೆಯೊಳಗೆ ನೀರು ಹಾಕಿಸಿದರೆ ಆ ನಾಣ್ಯ ಸ್ಥಳ ತಪ್ಪದೆಯೂ ಜಲಮುಖಾಂತರ ದೂರ ನಿಲ್ಲುವವನಿಗೆ ಸ್ಥಳ ತಪ್ಪಿದಂತೆ ತಿರಿಗಿ ಕಾಣುವ ಓಪಾದಿ, ಘಾಳಿಮುಖಾಂತರ ಆಗಿಂದಾಗ್ಯೆ ಒಂದು ವಸ್ತು ಸ್ಥಳಾಂತರ ಪಟ್ಟಂತೆ ಕಾಣಿಸುವದು. ಈ ಚಿತ್ರದ ಸಮುದ್ರದಲ್ಲಿಯ ಹಡಗ ಘಾಳಿಮುಖಾಂತರ ಆಕಾಶದಲ್ಲಿ ತಲೆ ಕೆಳಗಾಗಿಯೂ ನೆಟ್ಟಗಾಗಿಯೂ ತೋರುತ್ತದೆ. ಇದೂ ಒಂದು ತರದ ಮರೀಚಿಕೆ

ಒಂದು ಮಾತು ಸುಳ್ಳೆಂದು ವರ್ಣಿಸುವದಕ್ಕೆ ಮರೀಚಿಕೆಯ ಸಾಮ್ಯ ಬರುತ್ತದೆ, ಉದಾಹರಣೆ:

"ಕಂದ ಕೇಳ್ಳೈ, ಮಾಯಾವಾದ ಪುಸಿಯು,
ಇಂದ್ರಜಾಲವು; ಮರೀಚಿಕೆ ಜಲ—
ದಂದದಿ, ರಜ್ಜು ಭುಜಂಗದಂದದಿ ತೋರ್ಪ ವಾದವೆಂದಾ". ||

ಅದಲ್ಲದೆ ಸೋಮನಾಥನೆಂಬವನು ಹೇಳುವದೇನಂದರೆ—

"ಕಾಮ ಬಿಲ್ಲಿನಾಕಾರವು, ಮುಗಿಲಿನಾಕಾರವು, ಕನಸಿನಾಳಗಿನ ಹೊನ್ನಿನಾಕಾರವು, ನೀರ ಗುರಳಿಯಾಕಾರವು, ಗಾಳಿಯಲ್ಲಿ ಇಟ್ಟಂಥಾ ದೀಪದಾಕಾರವು, ನೆಲದ ಮೇಲೆ ಚರಿಸುವಂಥಾ ಬಿಸಿಲ ಕುದುರೆಯಾಕಾರವು, ಹುಲ್ಲ ಮೇಲೆ ನಿಂತಿರುವಂಥಾ ಇಬ್ಬನಿನೀರಿನಾಕಾರವು—ಇಷ್ಟು ಆಕಾರವಾಗಿ ಕಾಣಿಸುವವು; ಹಿಂದೆ ಹೇಳಿದಷ್ಟು ಸ್ಥಿರವಾಗಿರುವದಿಲ್ಲವು".



## THE FOUR QUARTERS OF THE GLOBE

### ದಿಕ್ಕುಗಳು

"ದಿಕ್ಕು ದಿಕ್ಕಿಗೆ ಹೋದರೂ ದುಃಖ ತಪ್ಪೀತೇ"?
ಗಾದೆ.

ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣವೆಂಬ ನಾಲ್ಕು ಮುಖ್ಯವಾದ ದಿಕ್ಕುಗಳು ಅವೆ. ಪ್ರಾತಃಕಾಲದಲ್ಲಿ ಸೂರ್ಯನು ಉದಯಿಸುವ ದಿಕ್ಕಿಗೆದುರಾಗಿ ನಿಂತು ನೋಡಿದರೆ ಎದುರಿಗೆ ಇರುವದು ಪೂರ್ವ ಅಥವಾ ಮೂಡಲೆಂದು, ಬೆನ್ನಿನ ಕಡೆ ಇರುವ ದಿಕ್ಕು ಪಶ್ಚಿಮ ಅಥವಾ ಪಡವಲೆಂದು, ಬಲಗೈಗಡೆಯ ದಿಕ್ಕು ದಕ್ಷಿಣ ಅಥವಾ ತೆಂಕಲು ಎಂದು, ಎಡಗೈಪಕ್ಕವು ಉತ್ತರ ಅಥವಾ ಬಡಗಲೆಂದು, ಅನ್ನಿಸಿಕೊಳ್ಳುವದು. ಪೂರ್ವಕ್ಕೂ ದಕ್ಷಿಣಕ್ಕೂ ನಡುವೆ ಇರುವ ದಿಕ್ಕು ಆಗ್ನೇಯ ಅಥವಾ ದಕ್ಷಿಣಪೂರ್ವವೆಂದೂ, ದಕ್ಷಿಣಕ್ಕೂ ಪಶ್ಚಿಮಕ್ಕೂ ನಡುವೆ ನೈರುತ್ಯ ಅಥವಾ ದಕ್ಷಿಣಪಶ್ಚಿಮವೆಂದೂ, ಉತ್ತರಕ್ಕೂ ಪೂರ್ವಕ್ಕೂ ನಡುವೆ ಈಶಾನ್ಯ ಅಥವಾ ಉತ್ತರಪೂರ್ವವೆಂದೂ, ಉತ್ತರಕ್ಕೂ ಪಶ್ಚಿಮಕ್ಕೂ ನಡುವೆ ವಾಯುವ್ಯ ಅಥವಾ ಉತ್ತರಪಶ್ಚಿಮವೆಂದೂ ಮತ್ತು ನಾಲ್ಕು ದಿಕ್ಕುಗಳು. ಅಂತು ಎಂಟು ದಿಕ್ಕುಗಳು ಅವೆ.




"ದಿಕ್ಕಿಲ್ಲದ ಮನುಷ್ಯನಿಗೆ ದೇವರೇ ಗತಿ„.

## 4. MINES

## ೪. ಗನಿಗಳು

"ಪಂಚಮಶಾಲೆಯವರ ಕಂಚು ಪಂಥಕ್ಕೆ ಶಿಕ್ಕೀತೇ?„

ಗಾದೆ.

ಚಿನ್ನ, ಬೆಳ್ಳಿ, ತಾಂಬ್ರ ಮೊದಲಾದ ಲೋಹಗಳು ವಿಶೇಷವಾಗಿ ಗನಿಗಳಲ್ಲಿ ಶಿಕ್ಕುವವು. ಇದು ವರೆಗೆ ಭೂಮಿಯೊಳಗೆ ಅನೇಕ ಗನಿಗಳು ಅಗಿದವೆ. ಈ ಕೆಲಸದಲ್ಲಿ ಎರಡು ತಲೆಯ ಪಿಕಾಶಿಗಳೂ ಎಲೆಗುದ್ದಲಿಗಳೂ ಹಾರೆಗೋಲೂ ಮೊದಲಾದ ಸಾಧನಗಳು ಪ್ರಯೋಗಿಸಲ್ಪಡುವವು. ಗನಿಗಳನ್ನು ತೆಗೆಯುವಾಗ ಒಂದೊಂದು ವೇಳೆ ಹ್ಯಾಗಾಗುತ್ತದಂದರೆ: ಮೊದಲು ಹೊಸ್ತಾಗಿ ನೀರು ತಂದಿಟ್ಟ ಭೂಮಿ (Alluvium), ಆ ಮೇಲೆ ಇದಕ್ಕಿಂತ ಪೂರ್ವದಲ್ಲಿ ನೀರು ತಂದಿಟ್ಟ ಭೂಮಿ (Diluvium) ಹತ್ತುತ್ತದೆ.

ಪೂರ್ವದ್ದರಲ್ಲಿ ಈಗ ಇರುವಂಥ, ಮತ್ತು ಇಲ್ಲದೆ ಹೋದಂಥ ಮೃಗಾದಿಗಳ ಅನೇಕ ಕಲ್ಲಾದ ಅಸ್ತಿಗಳು ಸಿಕ್ಕುತ್ತವೆ. ಈ ಎರಡು ಭೂಮಿ ಫಲೋತ್ಪತ್ತಿಗೆ ಒಳ್ಳೇದಾಗಿದೆ. ಹೆಚ್ಚು ದೂರ ಅಗಿದರೆ ಒಂದು ತರದ ಸುಣ್ಣಕಲ್ಲೂ ಮಸಿಕಲ್ಲೂ ಜೇಡಿಮಣ್ಣೂ (Molasse) ಹತ್ತುತ್ತವೆ. ಈ ಭೂಪರೆಯಲ್ಲಿಯೂ ಈಗಿನ ಮೃಗ ವೃಕ್ಷಾದಿಗಳಿಗೆ



ದೀಪದಿಂದ ಬೆಳಕು ಬರುವ ಈ
ಗನಿಯೊಳಗೆ ಕಲ್ಲೊಡೆದು, ಪುಟ್ಟಿ ಪೆಟ್ಟಿಗೆಗಳಲ್ಲಿ ತುಂಬಿಸುವ ಕೆಲಸ ನಡೆಯುತ್ತದೆ.
ಹಿಂದಗಡೆ ಹಗ್ಗದಿಂದ ಮೇಲಕ್ಕೆ ಜಿಗ್ಗುತ್ತಾರೆ.

ಹೋಲುವಂಥ ಅನೇಕವು ಕಾಣುತ್ತವೆ. ಬಳಿಕ ಚಿಕ್ಕಿಮುಕ್ಕಿಕಲ್ಲು ಸಿಕ್ಕುವ ವಿಲಾಯತೀ ಸುಣ್ಣವೂ ಕಟ್ಟಲಿಕ್ಕೆ ತಕ್ಕದಾದ ಒಂದು ತರದ ಮಸಿಕಲ್ಲೂ ಮತ್ತೊಂದು ತರದ ಜೇಡಿ ಮಣ್ಣೂ (Chalk) ಬರುತ್ತದೆ. ಆ ವಿಲಾಯತೀ ಸುಣ್ಣ ಚಂದಾಗಿ ಶೋಧಿಸಿದರೆ ಅದು ಬರೇ ಸಮುದ್ರಜಂತುಗಳದ್ದು. ಮತ್ತು ಅಗಿದರೆ ಬಹಳ ವೃಕ್ಷ ಮತ್ತು ಜಲಜಂತು

ಗಳು ಇರುವ ಉತ್ತಮ ತರದ ಸುಣ್ಣಕಲ್ಲು (Fura) ಶಿಕ್ಕುತ್ತದೆ. ಇದರ ಕೆಳಗೆ ನಾನಾ ಬಣ್ಣದ ಮಸಿಕಲ್ಲೂ ಕಲ್ಲುಪ್ಪು ಕೂಡಿರುವ ಚಿಪ್ಪೆಸುಣ್ಣವೂ ಅನೇಕ ಸಮುದ್ರಜೀನಸುಗಳ ಸಂಗಡ ಅದೆ (Trias). ಇದರ ಅಡಿಯಲ್ಲಿ ಬಹಳ ತಾಂಬ್ರವೂ ಕಲ್ಲುಪ್ಪೂ ಸ್ವಲ್ಪ ಜಂತುವೃಕ್ಷಗಳೂ ಶಿಕ್ಕುವ ಒಂದು ತರದ ಭೂಪರೆ (Permian Group) ಹತ್ತುತ್ತದೆ. ಇದರ ಬುಡದಲ್ಲಿ ಕಲ್ಲಿದ್ದಲಿ (Carboniferous Group) ದೊರಕುತ್ತದೆ; ಇದು ವೃಕ್ಷಗಳಿಂದ ಆಗಿ, ಬೆಂಕಿ ಹಚ್ಚುವದಕ್ಕೆ ಹೇಳಲಾರದ ಪ್ರಯೋಜನದ್ದಾಗಿದೆ. ಆ ಮೇಲೆ ಸ್ವಲ್ಪ ಬಳಗಲ್ಲೂ ಬಹಳ ಕಬ್ಬಿಣವೂ ಸ್ವಲ್ಪ ಬೆಳ್ಳಿಯೂ ಸತುವೂ ಇರುವ ಭೂಮಿ (Silurian Group) ಬರುತ್ತದೆ. ಇದರಲ್ಲಿ ಸಮುದ್ರಜೀನಸುಗಳು ಅನೇಕ. ಆ ಮೇಲೆ ಮುಖ್ಯವಾಗಿ ಬರೆಯುವ ಹಲಿಗೆ ಮುಂತಾದದ್ದನ್ನು ಮಾಡಲಿಕ್ಕಾಗುವ ಬಳಗಲ್ಲೂ ಕಬ್ಬಿಣವೂ ಶಿಕ್ಕುವ ಒಂದು ತರದ ಕಲ್ಲು (Slate) ಬರುತ್ತದೆ. ಇದರಲ್ಲಿ ತಕ್ಕಷ್ಟು ಲೋಹ ಪ್ರಾಪ್ತವಾಗುತ್ತದೆ. ಆ ಮೇಲೆ ಹತ್ತುವ ಕಲ್ಲುಗಳಲ್ಲಿ ಜಂತುವೃಕ್ಷಾದಿಗಳ ಗುರುತುಗಳು ಕಾಣುವದಿಲ್ಲಾ; ಅದಲ್ಲದೆ ಅವು ಬಹಳ ಘಟ್ಟಿಯಾಗಿವೆ. ಮುಖ್ಯವಾಗಿ ಇವುಗಳಲ್ಲಿ ಪಂಚಲೋಹರತ್ನಾದಿಗಳು ಶಿಕ್ಕುತ್ತವೆ.

ನಾವು ಹೇಳಿದ ಹಾಗೆ ಆಗಿಂದಾಗ್ಯೆ ಭೂಪರೆಗಳು ಒಟ್ಟಿ ಅವೆ; ಆದರೂ ಗುಡ್ಡಪರ್ವತಗಳು ಇರುವಲ್ಲಿ ಕೆಳಗಿದ್ದದ್ದು ಬಹಳ ಸರ್ತಿ ಮೇಲೆ ಬಂದದೆ. ಆವಾಗ ದೂರವಿದ್ದ ಲೋಹರತ್ನಗಳು ಸಮೀಪ ಬಂದದ್ದಲ್ಲದೆ ನೀರು ಅವನ್ನು ಅನೇಕ ಕಡೆಗೆ ವೈಯುತ್ತದೆ.

ವಿರುದ್ಧವಾದ ಗನಿಯೊಳಗೆ ಪ್ರವೇಶಿಸ ಬೇಕಾದರೆ ಅದರ ಬಾಯಿಯ ಎರಡು ಪಕ್ಕಗಳಲ್ಲಿ ಹಾಸಿದ ಹಲಿಗೆಗಳಿಗೆ ಕಟ್ಟಿದ ಹಗ್ಗಗಳ ತುದಿಗಳಿಗೆ ಮಂಕರಿಗಳು ಕಟ್ಟಿರುವವು. ಆ ಮಂಕರಿಗಳಲ್ಲಿ ಮನುಷ್ಯರು ಕೂತುಕೊಂಡು, ಇಳಿದು, ಬೇಕಾದ್ದನ್ನು ತೆಗದು ಕೊಂಡು ಬರುತ್ತಾರೆ.

ಗನಿಗಳನ್ನು ಅಗಿಯುವಾಗ ಒಂದು ವೇಳೆ ಬೆಟ್ಟದ ಕಲ್ಲುಗಳನ್ನು ಒಡೆಯ ಬೇಕಾದರೆ ಸಂಣ ಚಾಣಗಳಿಂದ ಅವುಗಳಲ್ಲಿ ತೂತು ತೋಡಿ, ಫಿರಂಗೀ ಮದ್ದು ಹಾಕಿ, ಜಡದು, ಸುಡುವರು. ಅದರಿಂದ ಬಹಳ ಭಯಂಕರವಾದ ಶಬ್ದ ಉಂಟಾಗುವದು; ಬಂಡೆ ಬಿರಿಯುವದು; ಕಲ್ಲುಗಳು ತುಂಡು ತುಂಡಾಗಿ ಒಡದು ಹೋಗುವವು. ಹಾರೆ ಗೋಲು ಮೊದಲಾದ ಉಪಕರಣಗಳಿಂದ ದೊಡ್ಡ ಕಲ್ಲುಗಳನ್ನು ಒಡೆಯ ಕೂಡದು. ಪರ್ವತಪ್ರದೇಶಗಳಲ್ಲಿ ಭಾವಿಗಳನ್ನು ಅಗಿಯುವವರು ಸಹ ಮದ್ದು ಪ್ರಯೋಗಿಸುವರು.

“ಬಂಡೆ ಒಡದು, ದಿಂಡೆಯನ್ನೆಬ್ಬಿಸಿದನು„ ಎಂಬ ಗಾದೆ ಹೇಳುವಮುಂಟು.

ಲೋಹಗಳು ಕಲ್ಲಿನಲ್ಲಿಯೂ ಮಣ್ಣಿನಲ್ಲಿಯೂ ಬೆರದಿರುವವು. ಆದದರಿಂದ ಅವುಗಳನ್ನು ತಂದು, ನಾನಾ ವಿಧವಾಗಿ ಕಾಸಿ, ತೊಳೆದು, ಮಣ್ಣು ಮೊದಲಾದವುಗಳನ್ನು ಪ್ರತ್ಯೇಕಿಸ ಬೇಕು.



## 5· GOLD

# ೫. ಬಂಗಾರವು



"ರಂಜನಂ ನೇತ್ರಯೋರೇವ ಸುವರ್ಣಂಚಾತ್ಮಭಂಜನಂ ।
ಸುವರ್ಣಂ ನಿರ್ಗುಣಮನ್ಯೇ ರುಚಿಗಂಧವಿವರ್ಜಿತಂ.,, ॥
ಅಂದರೆ:
ಸುವರ್ಣವು ಕಣ್ಣಿಗೆ ಸುಂದರವು, ಆತ್ಮಕ್ಕೆ ನಾಶವು; ಭಂಗಾರವು ನಿರ್ಗುಣವೂ ರುಚಿಗಂಧವಿಲ್ಲದ್ದೂ ಅನ್ನುತ್ತೇನೆ.

ಬಂಗಾರವು ಅರಸಿನವರ್ಣವಾಗಿರುವದು. ಕಲ್ಲಿನಲ್ಲಿಯೂ ಮಳಲಿನಲ್ಲಿಯೂ ಅದು ಶಿಕ್ಕುವದು. ಅಫ್ರಿಕ, ಅಮೆರಿಕ ಖಂಡಗಳೊಳಗಣ ನದಿಗಳಲ್ಲಿ ಬಂಗಾರದ ಹ್ಯಾಗೆ ಬಹಳ. ಕೆಲವು ಕಾಲಕ್ಕೆ ಮೊದಲು ಅಮೆರಿಕ ಖಂಡಕ್ಕೆ ಪಶ್ಚಿಮ ದಿಕ್ಕಿನಲ್ಲಿರುವ ಕಲಿಫಾರ್ನಿಯ ಎಂಬ ದೇಶದಲ್ಲಿಯೂ ಔಸ್ಟ್ರೇಲಿಯ ದ್ವೀಪದಲ್ಲಿಯೂ ಬಂಗಾರವು ಅನೇಕ ಕಾಣಲ್ಪಟ್ಟಿತು. ಆ ಲೋಹವು ಈಗ ಅಲ್ಲಿ ವಿಶೇಷವಾಗಿ ದೊರಕುತ್ತದೆ. ನದಿಯದು ಹ್ಯಾಗೆಯ ಸಂಗಡ ಮಿಳಿತವಾಗಿರುವದರಿಂದ ಆ ಹ್ಯಾಗೆ ತೆಗದು, ತೊಳದು, ಬಂಗಾರ ಫಳಿಸಿ ಕೊಳ್ಳುತ್ತಾರೆ.

ಇದು ಬೆಳ್ಳಿ ಮೊದಲಾದ ಮಿಕ್ಕ ಲೋಹಗಳಿಗಿಂತ ಹೆಚ್ಚು ಭಾರವಾದದ್ದು; ನೋಟಕ್ಕೆ ರಮ್ಯವಾಗಿದೆ; ಇತರ ಲೋಹಗಳಿಗಿಂತ ಶ್ರೇಷ್ಟವು. ಪುಟ ಹಾಕುತ್ತಾ ಹಾಕುತ್ತಾ, ಭಾರ ಸ್ವಲ್ಪ ತಗ್ಗುವದು; ಆದರೂ ಬಣ್ಣ ಹೆಚ್ಚುವದು. ಇತರ ಲೋಹಗಳ ಹಾಗೆ ಬಂಗಾರಕ್ಕೆ ಕಿಲುಬು ಹಿಡಿಯದು. ಗುರಗಂಜಿಯಷ್ಟು ಬಂಗಾರವನ್ನು ತಂದು, ಸಾಗು ಬಡಿದು, ಒಂದು ಅಂಗುಲದ $\frac{೧}{೨೦೦೦೦೦}$ನೇ ಪಾಲಷ್ಟು ತೆಳ್ಳಗಾದ, ದೊಡ್ಡ ತಗಡು

ಮಾಡ ಬಹುದು! ಅದಲ್ಲದೆ ಅಷ್ಟು ತೂಕ ಭಂಗಾರದಿಂದ ೫೦೦ ಅಡಿ ಉದ್ದವಾದ ಸರಿಗೆಯನ್ನು ಎಳಿಯ ಬಹುದು.

ತಾಂಬ್ರ ಮೊದಲಾದವುಗಳಿಂದ ಮಾಡಿದ ಪಾತ್ರಾದಿಗಳಿಗೆ ಭಂಗಾರದ ಕಲಾಯಿ ಮಾಡಿ, ಬಳಸುವರು. ಭಂಗಾರದ ಅತಿ ಸಪುರವಾದ ಒರಕನ್ನು ಅನೇಕ ಸಾಮಾನುಗಳಿಗೆ ಶೃಂಗಾರಕ್ಕಾಗಿ ಹಚ್ಚುವದುಂಟು.

ಅಪರಂಜಿ ಅಂದರೆ ನಿರ್ಮಲವಾದ ಭಂಗಾರವು; ಹದಿನಾರು ಬಣ್ಣವುಳ್ಳ ಚಿನ್ನವು ಅಪರಂಜಿಯಂತೆ; ಅದು ಮೃದುವಾಗಿಯೂ ನುಣುಪಾಗಿಯೂ ಇರುತ್ತದೆ. ಅದರ ಸಂಗಡ ತಾಂಬ್ರವನ್ನಾಗಲಿ ಬೆಳ್ಳಿಯನ್ನಾಗಲಿ ಸ್ವಲ್ಪ ಬೆರಸಿ, ಘಟ್ಟಿ ಮಾಡಿ, ನಾಣ್ಯಗಳೂ ನಗಗಳೂ ಮೊದಲಾದವುಗಳನ್ನು ಮಾಡುವರು. ಚಿನ್ನದ ನಾಣ್ಯಗಳಾದ ಮೊಹರೆಗಳೂ ವರಹಗಳೂ ಮೊದಲಾದವುಗಳಲ್ಲಿ ಹತ್ತರಲ್ಲಿ ಒಂದು ಪಾಲು ತಾಂಬ್ರವಿರುವದು.

ವಿಶೇಷವಾಗಿ ಭಂಗಾರವನ್ನು ಆಭರಣಗಳಿಗೆ ಉಪಯೋಗಿಸುವರು. ಅದು ಶಿಕ್ಕುವದು ಅಪರೂಪ; ಆದದರಿಂದ ಬಹಳ ಪ್ರಿಯವಾಗಿರುವದು. ಒಂದು ರುಪಾಯಿತೂಕ ಭಂಗಾರಕ್ಕೆ ಹೆಚ್ಚುಕಡಿಮೆಯಾಗಿ ೧೫ ರೂಪಾಯಿ ಕ್ರಯವಾಗುವದು. ಎಂಟು ಬಂಣದ ಭಂಗಾರ ವರಹತೂಕಕ್ಕೆ ನಾಲ್ಕು ರೂಪಾಯಿ ಕ್ರಯ ಬೀಳುವದು.

ಅನೇಕರು ಕಾಲು ಮೊದಲುಗೊಂಡು ತಲೆವರೆಗೂ ಭಂಗಾರದ ಒಡವೆಗಳನ್ನು ಇಟ್ಟುಕೊಳ್ಳುತ್ತಾರೆ! ಜ್ಞಾನವಿಲ್ಲದವರಿಗೆ ಮೋಕ್ಷವಿಲ್ಲವೆಂಬ ಸತ್ಯದ ಹಾಗೆ ಭೂಷಣವಿಲ್ಲದವರಿಗೆ ಭೂಲೋಕವಿಲ್ಲವೆಂಬ ಮರುಳು ಜಾವ ಅಂಥವರಲ್ಲಿ ತೋರುವದು.



# 6. SILVER

# ೬. ಬೆಳ್ಳಿಯು



"ನಾಣ್ಯದ ಲಕ್ಷಣ ಬಾಣಿಜಗೆ ತಿಳಿಯದೇ?"

ಗಾದೆ.

ಚೊಕ್ಕ ಬೆಳ್ಳಿ ಸಣ್ಣ ತುಂಡುಗಳಾಗಿಯೂ ಬಳ್ಳಿ ಹಬ್ಬಿದಾಕಾರವಾಗಿಯೂ ಗನಿಗಳಲ್ಲಿರುವದು. ಈ ಗನಿಗಳು ದಕ್ಷಿಣ ಅಮೇರಿಕದಲ್ಲಿ ಹೆಚ್ಚಾಗಿ ಇರುವವು. ಇಂಗ್ಲಾಂಡಿನಲ್ಲಿ ಕಂದು ಬೆಳ್ಳಿ ಸ್ವಲ್ಪ ಶಿಕ್ಕುತ್ತದೆ. ಬೆಳ್ಳಿಯು ಬಹಳ ಸರ್ತಿ ಶೀಸದಲ್ಲಿ ಬೆರದಿರುವದು; ಒಂದು ವಿಧವಾಗಿ ಅದನ್ನು ಕಾಸಿ ಪ್ರತ್ಯೇಕಿಸುತ್ತಾರೆ. ಬೆಳ್ಳಿಯನ್ನು ಎಲೆಗಳ ಹಾಗೆ ಸಾಗು ಬಡಿಯುವರು, ಕೂದಲುಗಳ ಹಾಗೆ ಬಹಳ ಸಣ್ಣವಾದ ಕಂಬಿಗಳ ಸಹಾ ಮಾಡುವರು. ಚೊಕ್ಕ ಬೆಳ್ಳಿ ಮೃದುವಾಗಿರುವದು. ರೂಪಾಯಿ ಮೊದಲಾದ ನಾಣ್ಯಗಳನ್ನು ಅದರಿಂದ ಮಾಡಿದರೆ ಬೇಗ ಸವಿಯದಂತೆ ಅದರ ಸಂಗಡ ಸ್ವಲ್ಪ ತಾಂಬ್ರವನ್ನು ಕೂಡಿಸಿ ಕರಗಿಸುವರು. ವರಹತೂಕ ಬಂಗಾರವನ್ನು ಕೊಟ್ಟು, ಹದಿನೈದು ವರಹತೂಕ ಬೆಳ್ಳಿಯನ್ನು ಕೊಳ್ಳ ಬಹುದು. ಒಂದು ಶೇರು ಬೆಳ್ಳಿಯಿಂದ ೨೪ ರೂಪಾಯಿ ಮಾಡ ಬಹುದು. ನಗಗಳು, ಎಲೆ ಅಡಿಕೆತಟ್ಟೆಗಳು, ಗಂಧದ ಬಟ್ಟಲುಗಳು, ಪನ್ನೀರಿನ ಗಿಂಡಿಗಳು, ಸೌಟು ಮೊದಲಾದವುಗಳು ಬೆಳ್ಳಿಯಿಂದ ಆಗುವವು. ಬೆಳ್ಳಿ ಕಿಲುಬು ಹಿಡಿಯುವಂಥಾದ್ದಲ್ಲವಾದರೂ ದಿನಗಳು ಕಳೆಯುತ್ತಾ ಕಳೆಯುತ್ತಾ, ಸ್ವಲ್ಪ ಮಾಸುವದು. ಆಗಿಂದಾಗ್ಗೆ ಶೀಮೇ ಸುಣ್ಣದಿಂದ ತಿಕ್ಕುವ ಪಕ್ಷದಲ್ಲಿ ಬಹಳ ಪ್ರಕಾಶಿಸುವದು. ಅದನ್ನು ಪಾತ್ರೆ ಮುಂತಾದ್ದನ್ನು ಮಾಡ ಹೋದರೆ ಅದನ್ನು ಬಿಲ್ಲೆಗಳಾಗಿ ಹೊಯ್ದು, ಸಾಗ ಬಡಿಯುವರು. ಬೆಳ್ಳಿಯ ತಕ್ಕಷ್ಟು ಥಪ್ಪವಾದ ತಗಡನ್ನು ಬಿಲ್ಲೆಬಿಲ್ಲೆಗಳಾಗಿ ಕತ್ತರಿಸಿ, ಆ ಬಿಲ್ಲೆಗಳನ್ನು ಎರಡು ಉಕ್ಕುಮುದ್ರೆಗಳ ಮಧ್ಯದಲ್ಲಿಟ್ಟು ಒತ್ತಿದರೆ ಆ ಮುದ್ರೆಗಳು ಬಿಲ್ಲೆಯಲ್ಲಿ ಮೂಡುವವು. ಈ ಉಪಾಯಗಳಿಂದಲೇ ರೂಪಾಯಿಗಳನ್ನು ಮಾಡುವರು. ಹೀಗೆ ಕೈಗಳಿಂದ ಮುದ್ರಿಸುವದಕ್ಕೆ ಬಹು ಕಾಲ ಹಿಡಿಯುವಷ್ಟರಲ್ಲಿ ಯಂತ್ರಪರಿಮುಖವಾಗಿ ನಿಮಿಷದಲ್ಲಿ ಸಾವಿರಾರು ರೂಪಾಯಿಗಳನ್ನು ಮುದ್ರಿಸ ಬಹುದು. ಪಾತ್ರೆ

ಮೊದಲಾದವುಗಳಿಗೆ ಬೆಳ್ಳೀ ಕಲಾಯಿ ಮಾಡ ಬಹುದು. ಹಾಗೆ ಮಾಡಿದ ಪಾತ್ರೆಗಳು ಬೆಳ್ಳಿಯ ಪಾತ್ರೆಗಳ ಹಾಗೆ ಹೊಳೆಯುವವು.

ಒರೆಕಲ್ಲಿನಿಂದ ಬೆಳ್ಳಿ ಶೋಧಿಸುತ್ತಾರೆ. ಹ್ಯಾಗಂದರೆ ಅಕ್ಕಸಾಲಿಗರ ಹತ್ತರ ಕುರೆ (ನಿರ್ಮಲ) ಬೆಳ್ಳಿಯ ಒಂದು ತುಂಡು ಅದೆ. ಇದರಿಂದ ಒಂದು ಘಟ್ಟಿಯಾದ ಕರೇ ಕಲ್ಲಿಗೆ ತಿಕ್ಕಿ, ಗೆರೆ ಹಾಕಿ, ತರುವಾಯ ಪರೀಕ್ಷಿಸ ಬೇಕಾದ ಬೆಳ್ಳಿಯಿಂದ ಅದೇ ಕಲ್ಲಿಗೆ ಗೆರೆ ಮಾಡಿ, ಆ ಎರಡು ಗೆರೆಗಳ ಛಾಯೆ ಚಂದಾಗಿ ಸರಿ ನೋಡುತ್ತಾರೆ; ಛಾಯೆಯ ಹೆಚ್ಚು ಕಡಿಮೆಯು ಬೆಳ್ಳಿಯ ಹೆಚ್ಚು ಕಡಿಮೆಯನ್ನು ತೋರಿಸುತ್ತದೆ.

---

## 7. LEAD AND TIN

# ೭. ಶೀಸವೂ ತವರವೂ



"ಶೀಸದ ಉಳಿಯಲ್ಲಿ ಶೈಲ್ಯ ಒಡೆಯ ಬಹುದೇ?,,

ಗಾದೆ.

ಇಂಗ್ಲಾಂಡು, ಜರ್ಮನಿ, ಅಮೇರಿಕ ಮೊದಲಾದ ಬಹು ದೇಶಗಳಲ್ಲಿ ಶೀಸ ದೊರಕುತ್ತದೆ; ಇದು ಕಬ್ಬಿಣದ ಹಾಗೆ ರಾಶಿಯಾಗಿ ಸಿಕ್ಕುವದು. ಶೀಸವು ಬಹಳ ಮೃದುವಾದದ್ದು. ಅದು ಬೂದಿಯ ವರ್ಣ ಉಳ್ಳದ್ದು; ಸುತ್ತಿಗೆಯ ಪೆಟ್ಟಿಗೆ ಸುಲಭವಾಗಿ ಸಾಗುವದು; ನಿಮಿಷದಲ್ಲಿ ಕರಗುವದು. ಶೀಸದಿಂದ ನೀರಿನ ಪಾತ್ರೆ ಗಂಗಾಳ ಮೊದಲಾದವುಗಳನ್ನು ಅನೇಕ ಮಾಡುವರು. ಅದರ ಸಂಗಡ ಸ್ವಲ್ಪ ಪಾಷಾಣವನ್ನು ಬೆರಸಿ, ಕರಗಿಸಿ, ರಂಧ್ರಗಳುಳ್ಳ ಒಂದು ತರದ ತಾಂಬ್ರದ ತಟ್ಟೆಗಳಲ್ಲಿ ಹ್ಯಾದರೆ ಅದು ಆ ತೂತುಗಳಿಂದ ಮಳೇ ಹನಿಗಳ ಹಾಗೆ ಇಳಿದು, ಸಣ್ಣ ಸಣ್ಣ ಗುಂಡುಗಳಾಗುವವು; ಆ ಗುಂಡುಗಳನ್ನು ರವೆಗಳೆಂದು, ಹೇಳುವರು. ಶೀಸದ ಮೇಲೆ ತೇಲುವಂಥ ಕಲ್ಮಷವು ವಿಷವುಳ್ಳದ್ದು; ತವರಪಾತ್ರೆಗಳು ಶೀಸ ಕೂಡಿದ್ದರೆ ಪ್ರಯೋಗಿಸುವವರಿಗೆ ರೋಗ ಬರುವದು. ಶೀಸದಿಂದ ಬಹಳ ಪ್ರಯೋಜನವಾದ ಒಂದು ಬಿಳೀ ರಂಗ ಮಾಡುತ್ತಾರೆ; ಅದು ವಿಷದ್ದು.

ತವರವು ಬೆಳ್ಳಗಾದ, ಬಿರಸಾದ ಲೋಹವಾಗಿದೆ. ಅದು ಇಂಗ್ಲಾಂಡಿನಲ್ಲಿ ದೊರಕುವದು. ಆ ಲೋಹವು ಅಲ್ಲಿ ಇರುತ್ತದೆಂಬ ಸಮಾಚಾರವನ್ನು ಕೇಳಿ, ಫೊಯಿನಿಕೆಯ ದೇಶ ಪ್ರವರ್ತಕರು ಮೊದಲಾದ ಇತರ ದೇಶದವರು ಪೂರ್ವದಲ್ಲಿ ಆ ದ್ವೀಪಕ್ಕೆ ಬಂದರು. ತವರವು ಕಬ್ಬಿಣತಗಡುಗಳಿಗೂ ತಾಂಬ್ರಪಾತ್ರೆಗಳಿಗೂ ತುಕ್ಕು ಹಿಡಿಯದ ಹಾಗೆ ಕಲಾಯಿ ಮಾಡುವದಕ್ಕೆ ಬಹಳ ಉಪಯೋಗವುಳ್ಳದ್ದಾಗಿದೆ. ಚಂದಾಗಿ ಸಾಗ ಬಡಿದು, ಅದರಿಂದ ಬೆಳ್ಳಿಯಂತೆ ತೋರುವಂಥಾ ಒರಕು ಮಾಡುತ್ತಾರೆ. ತವರವನ್ನೂ ಶೀಸವನ್ನೂ ಬೆರಸಿದರೆ ಬಿಳೀ ಶೀಸವಾಗುವದು; ಇದು ಸೌಟು ಇತ್ಯಾದಿಗಳನ್ನು ಮಾಡಲಿಕ್ಕೆ ಬರುತ್ತದೆ.

ತವರದಿಂದಲೂ ಒಂದು ಬಿಳೀ ಬಣ್ಣ ಮಾಡುವದುಂಟು; ಇದು ವಿಷವಲ್ಲದ್ದೂ ಕಪ್ಪು ಛಾಯೆ ಹಿಡಿಯದ್ದೂ ಆಗಿರುವದರಿಂದ ಶೀಸದ್ದಕ್ಕಿಂತ ಒಂದು ಪ್ರಕಾರ ಒಳ್ಳೇದಾಗಿ ಇರುತ್ತದೆ.

ಲೋಹಗಳಲ್ಲಿ ಒಂದೊಂದು ನೀರಿಗಿಂತ ಇಷ್ಟಿಷ್ಟು ಭಾರವಾಗಿದೆಂತ, ಹೇಳುವದುಂಟು. ಹ್ಯಾಗಂದರೆ ೧ ಅಳತೇ ಶೇರಿನ ತವರಕ್ಕೆ ೭ ಅಳತೇ ಶೇರು ನೀರು ತೂಕದಲ್ಲಿ ಸಮವಾಗಿರುವದು. ಕಬ್ಬಿಣ ೧ ಶೇರಿಗೆ ೮ ಶೇರು ನೀರು, ತಾಂಬ್ರ ೧ ಶೇರಿಗೆ ೯ ಶೇರು ನೀರು, ಬೆಳ್ಳಿ ೧ ಶೇರಿಗೆ ೧೦½ ಶೇರು ನೀರು, ಶೀಸ ೧ ಶೇರಿಗೆ ಸುಮಾರು ೧೧ ಶೇರು ನೀರು, ಬಂಗಾರ ೧ ಶೇರಿಗೆ ೧೯ ಶೇರು ನೀರು ಸರಿ ತೂಗುವದು. ಆದದರಿಂದ ತವರ ತೂಕದಲ್ಲಿ ಕಡಿಮೆಯಾದದ್ದೆಂತ, ತಿಳಿದು ಕೊಳ್ಳ ತಕ್ಕದ್ದು. ಇದು ಜಾತೀಯ ಗುರುತ್ವ ವಿಚಾರಣೆಯದು. ವಿಲಾಯತಿಯಲ್ಲಿ ಈ ಗಾತ್ರಿನ ಮೇಲೆ ಲೋಹಗಳನ್ನು ಪರೀಕ್ಷಿಸುವದುಂಟು.



# 8. IRON

# ೮. ಕಬ್ಬಿಣವು

"ಮುದ್ದೆಕಬ್ಬಿಣ ಜಲದೊಳಿರಿಸಿದ—
ಡದ್ದುವುದು; ಕೇಳ್, ಅದನೆ ಪಾತ್ರೆಯ
ತಿದ್ದಿದರೆ ತೇಲುವದು. ತಿಳಿ, ಆ ಪರಿಯಲೆ ಬುದ್ಧಿ.||
ಹೊದ್ದಿ ಮಲಿನದ ಬುದ್ಧಿಯ,
ಬದ್ಧಗಾಣನು; ಅಮಲಬೋಧೆಯು
ಸಿದ್ಧಿಯಾಗಲು,—ಭವಸಾಗರದ ನಾವಿಯಹುದೈ, ನೋಡೆಂದಾ.„||

ಕಬ್ಬಿಣವು ಮಿಕ್ಕ ಲೋಹಗಳಿಗಿಂತ ಬಹಳ ಉಪಯೋಗ ಉಳ್ಳದ್ದು. ಅದನ್ನು ದೇವರು ತನ್ನ ಅನುಗ್ರಹಜ್ಞಾನದಿಂದ ಹೆಚ್ಚಾಗಿ ಉಂಟು ಮಾಡಿದ್ದಾನೆ; ವಿಶೇಷವಾಗಿ ಸಮಸ್ತ ದೇಶಗಳಲ್ಲಿಯೂ ಶಿಕ್ಕುವದು. ಕಬ್ಬಿಣದಿಂದಲೇ ಕೆಂಪಾದ ಬೆಟ್ಟಗಳಿಗೆ ವರ್ಣ ಬಂದದೆ. ಕಬ್ಬಿಣಕಲ್ಲು ಮುಖ್ಯವಾಗಿ ಗುಂಡುಗುಂಡುಗಳಾಗಿ ದೊರಕುತ್ತದೆ. ಆ ಕಬ್ಬಿಣಕಲ್ಲು ತಂದು, ಪುಡಿ ಮಾಡಿ, ಸ್ವಲ್ಪ ಇದ್ದಲಿ ಕಲಿಸಿ, ಬೇಕಾದರೆ ಸ್ವಲ್ಪ ಸುಣ್ಣ ಕೂಡಿಸಿ, ಕುಲುಮೆಯಲ್ಲಿಟ್ಟು, ಕರಗಿಸುವರು. ಕರಗುವ ಹೊತ್ತಿನಲ್ಲಿ ಕಬ್ಬಿಣವಲ್ಲದ್ದು ಕಬ್ಬಿಣಕ್ಕಿಂತ ಹಗುರವಾದದರಿಂದ ಮೇಲೆ ತೇಲುವದು; ಕಬ್ಬಿಣ ಭಾರವಾದದರಿಂದ ಅಡಿಯಲ್ಲಿ ಇರುವದು. ತರುವಾಯ ಕುಲುಮೆಯ ಅಡಿಯಲ್ಲಿರುವ ಬಾಯಿ ತೆರೆದು, ಕರಗಿದ್ದನ್ನು ಹೊರಗೆ ಬಿಡುವರು. ಇದರ ಮೇಲಿನ ಚಟ್ಟೆ ಆಗಿಂದಾಗ್ಗೆ ಕಬ್ಬಿಣಕಾಕ್ಕೆಗಳಿಂದ ತೆಗೆಯುತ್ತಾರೆ. ಹೀಗೆ ಕಬ್ಬಿಣ ಘಳಿಸಿ ಕೊಳ್ಳುವ ರೀತಿ. ಕಬ್ಬಿಣವು ಕುಲುಮೆಯಿಂದ ಹೊರಟು ತಣಿದ ಕೂಡಲೆ ಬಹಳ ಬಿರುಸಾಗಿರುವದರಿಂದ ಸುತ್ತಿಗೇ ಕೆಲಸಕ್ಕೆ ಅದು ಯೋಗ್ಯವಲ್ಲ; ಅದನ್ನು ಮೆತ್ತಗೆ ಮಾಡುವದಕ್ಕೆ ಘಾಳಿ ಚನ್ನಾಗಿ ತಾಗುವಲ್ಲಿ ಕಾಸಿ, ದೊಡ್ಡ ಸುತ್ತಿಗೆಗಳಿಂದ ಹೊಡೆಯುವರು. ಕಬ್ಬಿಣದಿಂದ ಪಾತ್ರೆಗಳು, ಬಿಂದಿಗೆಗಳು, ಮೊಳೆಗಳು, ಬೀಗಗಳು ಇತ್ಯಾದಿ ಮಾಡ ಬಹುದು. ಕಬ್ಬಿಣಕ್ಕೆ ತುಕ್ಕು ಹಿಡಿಯುವದು. ಅದರ ಸಂಗಡ ಇದ್ದ ಚಟ್ಟೆ ಕಲ್ಲಿನಂತೆ ಭಾರವಾದ ಗಡ್ಡೆಗಳು ಆಗುತ್ತದೆ. ಆ ಚಟ್ಟೆ ಅಥವಾ ಕಿಟ್ಟ ತಂದು, ಪುಟಗಳಿಗೆ ಹಾಕಿ, ಭಸ್ಮವನ್ನು ಮಾಡುವರು; ಅದಕ್ಕೆ ಮಂಡೂರಭಸ್ಮವೆಂಬ ಹೆಸರು. ಈ ಔಷಧವು ದೇಹಕ್ಕೆ ಬಲ ಕೊಡುತ್ತದಂತೆ. ಸುತ್ತಿಗೇ ಕೆಲಸಕ್ಕೆ ಯೋಗ್ಯವಾದ ಕಬ್ಬಿಣದ ಪಟ್ಟಿಗಳನ್ನು ತಂದು, ಕುಲುಮೆಯಲ್ಲಿ

ಮಸೀ ಪುಡಿಯ ಸಂಗಡ ಇಟ್ಟು ಕಾಸಿದರೆ ಅದು ಉಕ್ಕಾಗುವದು. ಅದು ಕುಲುಮೆ ಯಿಂದ ಬಂದು ಆರಿದ ಮೇಲೆಯೇ ಇದ್ದ ಕಬ್ಬಿಣಕ್ಕಿಂತ ಘಟ್ಟಿಯಾದದ್ದಲ್ಲ; ಆದರೆ ಉಕ್ಕು ಕಾಸಿ, ತಂನೀರೊಳಗೆ ಮುಳುಗಿಸಿದರೆ ಅಧಿಕ ಘಟ್ಟಿಯಾಗುತ್ತದೆ. ಬಹಳ ಘಟ್ಟಿಯಾಗಿರ ಬೇಕಾದ ಸೂಜಿ, ಉಳಿ, ಅರ ಮುಂತಾದ ಜೀನಸುಗಳು ಉಕ್ಕಿನಿಂದ ಮಾಡಲ್ಪಡುವವು.

"ಉಳಿ ಸಣ್ಣದಾದರೂ ಮರ ಕಡಿಯೋದು ಬಿಡದು,, ಎನ್ನುತ್ತಾರೆ.



## 9. COPPER, BRASS

# ೯. ತಾಂಬ್ರ, ಹಿತ್ತಾಳಿ

"ಕಾಸು ಬಿಟ್ಟವ ದೇಶ ಬಿಟ್ಟಾನು.,,
ಗಾದೆ.

ತಾಂಬ್ರ ಕೆಂಪು ಬಣ್ಣದ್ದು; ಅದು ಬಹು ದೇಶಗಳಲ್ಲಿ ಪ್ರಾಪ್ತಿಸುತ್ತದೆ. ಇಂಗ್ಲಾಂಡಿನಲ್ಲಿ ತಾಂಬ್ರದ ಗನಿಗಳು ಬಹಳ. ಅಲ್ಲಿಯ ತಾಂಬ್ರದಲ್ಲಿ ಗಂಧಕ ಬೆರಿಕೆಯಾಗಿದೆ; ಆದರೆ ಅದನ್ನು ಗನಿಗಳಿಂದ ತೆಗದ ತರುವಾಯ ಕಾಸಿ, ನಿರ್ಮಲ ಮಾಡುವರು. ಔಸ್ಟ್ರೇಲಿಯ ದ್ವೀಪದಲ್ಲಿ ಸಹ ಕೆಲವು ಕಾಲಕ್ಕೆ ಮೊದಲು ತಾಂಬ್ರದ ಗನಿಯ ಕಂಡು ಕೊಂಡಿದ್ದಾರೆ. ಈ ಲೋಹವನ್ನು ಬೆಳ್ಳಿಯಂತೆ ಸಾಗ ಬಡಿದು, ಸಣ್ಣ ರೇಕುಗಳನ್ನೂ ಸಣ್ಣ ಕಂಬಿಗಳನ್ನೂ ಮಾಡ ಬಹುದು. ಈ ಲೋಹವು ಬಹಳವಾಗಿ ದೊರಕುವದರಿಂದ ಅದರ ಕ್ರಯ ಕಡಿಮೆಯಾಗಿರುತ್ತದೆ; ಹಲತೂಕ ಅಪರಂಜಿಯನ್ನು ಕೊಟ್ಟು, ಸಾವಿರ ಹಲತಾಂಬ್ರವನ್ನು ಕೊಂಡು ಕೊಳ್ಳ ಬಹುದು. ತಾಂಬ್ರದ ಪಾತ್ರೆಗಳಿಗೆ ಹುಟ್ಟುವ ಕಿಲುಬು ವಿಷವಾದದರಿಂದ ಅವುಗಳಿಗೆ ತವರದಿಂದ ಕಲಾಯಿ ಮಾಡಿ, ಅವುಗಳನ್ನು ಬಳಸ ಬೇಕು. ಹಾಗೆ ಮಾಡದೆ, ಅಂಥಾ ಪಾತ್ರೆಗಳಲ್ಲಿ ಅಟ್ಟ ಅಡಿಗೆ ಉಂಡವರಲ್ಲಿ ಅನೇಕರು ಮೃತಿ ಹೊಂದಿದ್ದಾರೆ.

"ಕಿಲುಬಿನ ಬಟ್ಟಲಲ್ಲಿ ಹುಳೀ ಕಲಸಿ ಉಣ್ಣ ಬಹುದೇ?,,

ಎಂಬ ಗಾದೆ ರೂಢಿಯಾಗಿದೆ. ತಾಂಬ್ರದ ತಗಡಿನಲ್ಲಿ ದುಡ್ಡು, ದುಗ್ಗಾಣಿ, ರೂವಿ, ಕಾಸು ಮೊದಲಾದವುಗಳನ್ನು ಮಾಡುವರು; ಮತ್ತು ನಾವೆಗಳ ಹಾರಗಡೆಗೆ ತಾಂಬ್ರದ ತಗಡುಗಳನ್ನು ಮಡಾಯಿಸಿದರೆ ಹಡಗುಗಳು ನೀರಿಗೂ ಹುಳಕ್ಕೂ ಬೇಗ ಕೆಡುವದಿಲ್ಲ.

ಹಿತ್ತಾಳಿಯು ಹೊಂಬಣ್ಣವುಳ್ಳ ಸುಂದರವಾದ ಲೋಹವಾಗಿದ್ದರೂ ಕೀಳು ಲೋಹವಾಗಿದೆ. ಸತುವೂ ತಾಂಬ್ರವೂ ಬೆರಿಸೋಣದರಿಂದ ಹಿತ್ತಾಳಿ ಉಂಟಾಗುತ್ತದೆ. ಎರಕದವರು ಇದರಿಂದ ದೀಪಸ್ತಂಭ, ಗಂಗಾಳ, ಚಂಬು, ತಪ್ಪಲೆ ಮೊದಲಾದದ್ದನ್ನು ಮಾಡುವರು.

ತಾಂಬ್ರವನ್ನೂ ತವರವನ್ನೂ ಹಾಳಿತವಾಗಿ ಬೆರಸಿದರೆ ಕಂಚಾಗುವದು; ಅದನ್ನು ಕರಗಿಸಿ, ಘಂಟೆ ಮೊದಲಾದ ಎರಕದ ನಗಗಳನ್ನು ಮಾಡುವರು. ತಾಂಬ್ರ, ತವರಗಳನ್ನು ಮತ್ತೊಂದು ಹಾಳತೇ ಮೇಲೆ ಬೆರಸಿದರೆ ಫಿರಂಗಿಗಳನ್ನು ಎರೆಯ ತಕ್ಕದ್ದೊಂದು ಲೋಹ ಹುಟ್ಟುತ್ತದೆ.



# 10. PRECIOUS STONES

# ೧೦. ರತ್ನಗಳು

"ನವರತ್ನವಾದರೂ ಕನಕಕ್ಕೆ ಅಪೇಕ್ಷಿಸುತ್ತದೆ."
ಗಾದೆ.

ಅಥವಾ

"ನಿರಾಶ್ರಯಾ ನ ಶೋಭಂತೇ ಪಂಡಿತಾ ವನಿತಾ ಲತಾಃ |
ಅಮೌಲ್ಯಮಪಿ ಮಾಣಿಕ್ಯಂ ಹೇಮಾಶ್ರಯಮಪೇಕ್ಷತೇ" ||

ಅಂದರೆ:

ಆಶ್ರಯವಿಲ್ಲದ ಪಂಡಿತರೂ ಸ್ತ್ರೀಯರೂ ಬಳ್ಳಿಗಳೂ ಶೋಭಿಸುವದಿಲ್ಲ;
ಅಮೂಲ್ಯವಾದ ಮಾಣಿಕ್ಯವಾದರೂ ಹೇಮವನ್ನಪೇಕ್ಷಿಸುತ್ತದೆ.

ರಮ್ಯವಾಗಿಯೂ ವಿನೋದಕರವಾಗಿಯೂ ಇರುವ ಹೆಚ್ಚು ಬೆಲೆಯ ಕಲ್ಲುಗಳು ಕೆಲವಿರುವವು. ಅವುಗಳಿಗೆ ರತ್ನವೆಂತ, ಹೆಸರು. ಅವುಗಳಲ್ಲಿ ವಜ್ರವು (diamond) ಬಹಳ ಕಾಠಿಣ್ಯವಾಗಿರುವದರಿಂದ ಮಿಕ್ಕ ರತ್ನಗಳನ್ನು ಕೊಯ್ಯು ಸಾಧ್ಯವಾದದ್ದೂ ಹೆಚ್ಚು ಕ್ರಯ ಉಳ್ಳದ್ದೂ ಆಗಿರುವದು. ವಜ್ರಗಳನ್ನು ಮಸಿದು ಅವಕ್ಕೆ

ಒಪ್ಪ ಕೊಡ ಬೇಕಾದರೆ ವಜ್ರಗಳ ಪುಡಿಯಿಂದಲೇ ತಿಕ್ಕ ಬೇಕು; ಅದರಿಂದ ಬಹಳ ಮಿಂಚು ಬರುತ್ತದೆ. ಅವುಗಳಲ್ಲಿ ಕೆಲವು ಅರಸಿನಛಾಯೆಯಾಗಿಯೂ ಕೆಲವು ಕೆಂಪು ಛಾಯೆಯಾಗಿಯೂ ಕೆಲವು ನೀಲಛಾಯೆಯಾಗಿಯೂ ಕೆಲವು ಕಪ್ಪು ಛಾಯೆಯಾಗಿಯೂ ಇರುವವು. ವಜ್ರವು ಪಟ್ಟೆಗಳ ಕೆತ್ತಿದ ಬಿಳೀ ಗಾಜಿನ ಹಾಗೆ ಕಾಣಿಸದೆ, ಬಹಳವಾಗಿ ಹೊಳೆಯುವದು. ಇಂಗ್ಲಾಂಡು ದೇಶದ ರಾಣಿಯವರ ಬಳಿಯ ಬಹಳ ದೊಡ್ಡದಾದ ಕೋಹಿನೂರೆಂಬ ಒಂದು ವಜ್ರವಿರುತ್ತದೆ. ಅದಕ್ಕೆ ಸಮಾನವು ಲೋಕದಲ್ಲಿ ಶಿಕ್ಕಲಿಲ್ಲ; ಅದು ಹೆಚ್ಚು ಕಡಿಮೆಯಾಗಿ ಅರ್ಧ ಕೋಳಿಮೊಟ್ಟೆಯ ಷಾತ್ರವಾಗಿದೆ; ಎರಡು ಕೋಟಿ ರೂಪಾಯಿಯ ಕ್ರಯದ್ದಾಗಿದಂತೆ. ವಜ್ರವು ಇದ್ದಲಿಯ ಜಾವ ಉಳ್ಳದ್ದು, ಅಥವಾ ಇದ್ದಲಿ ಬೇರೆ ಸ್ಥಿತಿಯಲ್ಲಿದ್ದದ್ದು; ಹ್ಯಾಗಂದರೆ ವಜ್ರವನ್ನು ತಂದು, ಕಠಿಣವಾದ ಬೆಂಕಿಯಿಂದ ಸುಟ್ಟರೆ ಇದ್ದಲಿ ಸುಟ್ಟ ಹಾಗಾಗುವದು. ವಜ್ರವು ಹಿಂದು ದೇಶ ಮೊದಲಾದ ಕೆಲವು ಸ್ಥಳಗಳಲ್ಲಿ ಮುಖ್ಯವಾಗಿ ಶಿಕ್ಕುತ್ತದೆ.

ಜೇಡಿಮಣ್ಣು ಜಾವವುಳ್ಳ ರಕ್ತವರ್ಣದ ಪದ್ಮರಾಗವು (ruby) ವಜ್ರಗಳಿಗೆ ಸುಮಾರು ಸಮಾನವಾಗಿ ಕ್ರಯ ಬೀಳುವದು; ಲಂಕಾದ್ವೀಪದಲ್ಲಿಯೂ ಬ್ರಹ್ಮ ದೇಶದಲ್ಲಿಯೂ ಹುಟ್ಟುವದು. ನೀಲದ (sapphire) ಕ್ರಯವು ಮೊದಲು ಹೇಳಿದ ಎರಡು ರತ್ನಗಳಿಗಿಂತ ಕಡಿಮೆಯಾಗಿರುವದು. ಇದು ಹಿಂದು ದೇಶದಲ್ಲಿಯೂ ಲಂಕಾದ್ವೀಪದಲ್ಲಿಯೂ ಇರುವ ನದಿಗಳಲ್ಲಿ ದೊರಕುವದು. ಪದ್ಮರಾಗಗಳೂ ನೀಲಗಳೂ ಇವೆರಡರ ಉತ್ಪತ್ತಿ ಜೇಡಿಮಣ್ಣಿನಿಂದಲೇ. ಮರಕತವೆಂಬುವದು (emerald) ಬಹು ರಮ್ಯವಾದ ಪಚ್ಚೆ ರತ್ನವು. ಕ್ರಯ ಹೆಚ್ಚುಳ್ಳ ಪಚ್ಚೆಗಳು ದಕ್ಷಿಣ ಅಮೆರಿಕದಿಂದ ಬರುವವು.

ವಜ್ರ, ಮಾಣಿಕ (ruby or carbunkle), ಮರಕತ, ನೀಲ, ಗೋಮೇಧಿಕ (onyx or topaz), ಪುಷ್ಯರಾಗ (topaz) ವೈಡೂರ್ಯ (lapis lazuli), ಹವಳ (coral), ಮುತ್ತು (pearl) ಇವುಗಳನ್ನು ನವರತ್ನಗಳೆಂದು ಹೇಳುವರು. ಮುತ್ತುಗಳು ಮುಖ್ಯವಾಗಿ ಅಹುಮುದ್ಜು ದ್ವೀಪದ ಹತ್ತರವೂ ಲಂಕೆಯ ಹತ್ತರವೂ ಸಮುದ್ರದ ಚಿಪ್ಪೆಗಳೊಳಗೆ ಶಿಕ್ಕುತ್ತವೆ.





ಲಂಕಾದ್ವೀಪದ ಬಳೀಲಿ ಮುತ್ತು ಹಿಡಿಯುವ ಹಡಗಿನವರು ಈ ಚಿತ್ರದಲ್ಲಿ ಕಾಣುತ್ತಾರೆ. ಅವರು ಸೊಂಟಕ್ಕೆ ಹಗ್ಗ ಕಟ್ಟಿ ಕೊಂಡು, ನೀರೊಳಗೆ ಮುಳುಗಿ, ಮುತ್ತುಚಿಪ್ಪುಗಳನ್ನು ಪುಟ್ಟಿಯೊಳಗೆ ತುಂಬಿಸಿ, ಮೇಲಕ್ಕೆ ಜಿಗ್ಗಿಸಿ ಕೊಳ್ಳುತ್ತಾರೆ.

# II. THE VEGETABLE KINGDOM

# ೨. ಸ್ಥಾವರವರ್ಗವು

## 11. ROOTS ETC.

## ೧೧. ಬೇರಿತ್ಯಾದಿಗಳು

"ಬೇರು ಹಾೞದ ಮೇಲೆ ಮರದ ಯೋಚನೆ ಯಾಕೆ?"

ಗಾದೆ.




ಅಂಜೂರ ಮರಕ್ಕೂ ಅತ್ತಿ ಮರಕ್ಕೂ ಹೂವಾಗುವದಿಲ್ಲವೆಂತ, ಅನೇಕರು ನೆನಸುತ್ತಾರೆ; ಆದರೆ ಅದರದರ ಹೂವು ಕಾಯಿಯೊಳಗೆ ಆಗುವದು. ಈ ಚಿತ್ರದಲ್ಲಿ A (ಅ) ಎಂಬ ಸೌಗ್ಞೆ ಇರುವದು ಅಂಜೂರದ ಕಾಯಿ; B (ಬ) ಎಂಬ ಗುರುತಿರುವದು ಕೊಯಿದ ಒಂದು ಹೋಳು; a (ಅ) ಗುರುತು ಇರುವದು ಹೋಳಿನೊಳಗಣ ಹೂವುಗಳಲ್ಲಿ ಒಂದು; b (ಬ) ಗುರುತು ಇರುವದು ಹೂವಿನಲ್ಲಿ ಆದ ಬೀಜವನ್ನು ತೋರಿಸುತ್ತದೆ.

ಒಂದು ತರದ ಜೀವವು ಸ್ಥಾವರಗಳಿಗೆ ಉಂಟು; ಆದರೆ ಬುದ್ಧಿಯೂ ಪಂಚೇಂದ್ರಿಯಗಳೂ ಇಲ್ಲ. ಅವು ಮೊಳತ ಸ್ಥಳದಲ್ಲಿಯೇ ನಿಂತು ಬೆಳೆಯುವವು. ಬೀಜ ಹಾಕಿದ ಮೇಲೆ ಅದು ಭೂಮಿಯಲ್ಲಿ ಬೇರು ಬಿಡುವದು;

ಅಂಥ ಬೇರಿನಿಂದ ಪಕ್ಕೆಗಳಲ್ಲಿ ಬೇರೆ ಅನೇಕ ಬೇರುಗಳು ನಾಲ್ಕು ಕಡೆಯಲ್ಲಿಯೂ ಹರಿಯುವವು; ಅದರಿಂದ ವೃಕ್ಷಗಳಿಗೆ ನಿಲ್ಲಲಿಕ್ಕೆ ಬಲ ಉಂಟಾಗುವದು. ಬೇರಿನ ತುದಿಗಳು ನೂಲಿನ ಹಾಗೆ ಸಣ್ಣವಾಗಿ, ಹತ್ತಿಯ ಹಾಗೆ ಮೆತ್ತಗಾಗಿರುವವು. ಬೇರುಗಳ ಮುಖದಿಂದಲೇ ಗಿಡಗಳಿಗೆ ನೀರು ಸಿದ್ಧ ಮಾಡಿದ ಸಾರವು ಉಂಟಾಗುವದು. ತೊಗಟೆಯು ಮರಗಳಿಗೆ ಹಾದಿಕೆಯ ಹಾಗೆ ಅದೆ; ಅದು ಹೋದರೆ ಗಿಡ ಕೆಟ್ಟು ಹೋಗುವದು.

ಬೀಜವು ಹೊಟ್ಟಿನೊಳಗೆ ಆಗಲಿ ಚಿಪ್ಪಿನಲ್ಲಿ ಆಗಲಿ ಇರುವದು. ಭೂಮಿಯಲ್ಲಿ ನೆಟ್ಟ ಬೀಜ ತ್ವಾವಕ್ಕೆ ಉಬ್ಬಿ, ಮೊಳಕೆ ಬಂದು, ಬೆಳೆಯುವದು. ಮೊಳಕೆಯ ಮೊದಲನೇ ಮೇವು ತಿರುಳೇ. ನೀರು ಸ್ಥಾವರಗಳ ಬೆಳವಣಿಗೆ ಬೇಕಾದದ್ದು; ಅದು ಭೂಮಿಯಲ್ಲಿಯೂ ಗಾಳಿಯಲ್ಲಿಯೂ ಇರುವ ವೃಕ್ಷಾಹಾರ ಕರಗಿಸಿದರೆ ಹೊರ್ತು ಆ ಆಹಾರ ವೃಕ್ಷಕ್ಕೆ ದಕ್ಕದು. ವಿದ್ವಾಂಸರು ಸುಮಾರು ೨೦೦೦೦೦ ಸ್ಥಾವರಜೀವಿ ಜಾತಿಗಳನ್ನು ಎಣಿಸುತ್ತಾರೆ.



ಹಣ್ಣು ಗೊಂಚಲಾದ ಒಂದು
ದ್ರಾಕ್ಷೇ ಬಳ್ಳಿ.

# 12. TREES ETC.

# ೧೨. ಮರ ಸಸ್ಯಾದಿಗಳು



ಈ ಚಿತ್ರವು ಪ್ರಸಿದ್ಧಿಯಾದ ಇಪ್ಪೆಮರ ತೋರಿಸುತ್ತದೆ;
ಅದರ ಎಣ್ಣೆ ಬಹು ಕ್ಷೇಮಕರವಾದದ್ದು.

ತರುಜಾತಿಯಲ್ಲಿ ಫಲವೃಕ್ಷಗಳು ಶ್ರೇಷ್ಠವು. ಬಾಳೆಹಣ್ಣು, ಹಲಸಿನ ಹಣ್ಣು, ಮಾವಿನ ಹಣ್ಣು, ಕಿತ್ತಲೇ ಹಣ್ಣು, ಬಾದಾಮಿ, ದಾಳಿಂಬ, ಬ್ಯಾಲದ ಹಣ್ಣು, ಪನ್ನೇರಳ ಹಣ್ಣು, ನೆಲ್ಲಿಕಾಯಿ, ನಿಂಬೇ ಹಣ್ಣು, ತೆಂಗಿನ ಕಾಯಿ,



ಮೇಲೆ ಬರೆದ ಇಪ್ಪೇ ಮರದ ಎಲೆ, ಹೂವು, ಕಾಯಿ
ಈ ಚಿತ್ರದಲ್ಲಿ ದೊಡ್ಡದಾಗಿ ಕಾಣುತ್ತದೆ.

ಖರ್ಜೂರ, ಶೀಬೇ ಹಣ್ಣು, ತಾಳೀ ಹಣ್ಣು ಮೊದಲಾದವು ಬಹಳ ರುಚಿಯಾಗಿಯೂ ಶ್ರಮ ತಣಿಸುವವುಗಳಾಗಿಯೂ ಇರುತ್ತವೆ.

ತೇಗಿನ ಮರ, ಕರಿ ಮರ, ಬೀಟೀ ಮರ, ಆಲದ ಮರ, ಅರಳೀ ಮರ, ಇಪ್ಪೇ ಮರ, ಗಂಧದ ಮರ, ದೇವದಾರುಮರ, ಬಿದರು ಮೊದಲಾದವುಗಳು ಬಹು ಕೆಲಸಗಳಿಗೆ ಬರುವವು. ಹ್ಯಾಗಂದರೆ ಅವುಗಳಿಂದ ಮೇಜು, ಕುರ್ಚಿ, ಪೆಟ್ಟಿಗೆ, ಮಂಚ, ಹಡಗು ಮೊದಲಾದವುಗಳನ್ನು ಮಾಡುವರು. ಆಲದ ಮರದ ಮೇಲಿನಿಂದ ಅನೇಕ ಬೇರುಗಳು ನೆಲಕ್ಕೆ ಇಳಿದು, ಬಲಿತು, ಸುತ್ತಿಕೊಂಡು, ಬೆಳೆಯುವವು. ಅಂಥ ಮರದ ಕೆಳಗೆ ಸಾವಿರ ಜನವಾದರೂ ಕೂತು ಕೊಳ್ಳ ಬಹುದು.

ಬದನೇಕಾಯಿ, ಹೀರೇಕಾಯಿ, ಕುಂಬಳಕಾಯಿ, ಸೋರೇಕಾಯಿ, ಬೆಂಡೇಕಾಯಿ, ನುಗ್ಗೇಕಾಯಿ, ನೆಲವರೇಕಾಯಿ, ಹಾಗಲಕಾಯಿ, ಸೌತೇಕಾಯಿ ಮುಂತಾದ ಕಾಯಿ ಪಲ್ಯಗಳೂ ಉರ್ಲುಗಡ್ಡೆ, ಗೆಣಸು, ಶ್ಯಾಮೇ ಗಡ್ಡೆ, ನೀರುಳ್ಳಿ, ಬೆಳ್ಳುಳ್ಳಿ ಮುಂತಾದ ಕಂದಮೂಲಗಳೂ ಅಗಸೇ ಸೊಪ್ಪು, ಹರಿವೇ ಸೊಪ್ಪು, ಹೊನ್ನಗಣ್ಣೀ ಸೊಪ್ಪು, ಬಸಳೇ ಸೊಪ್ಪು, ಚಕ್ಕೋತ್ರಿನ ಸೊಪ್ಪು ಮುಂತಾದ ಸೊಪ್ಪುಗಳೂ ಭತ್ತ, ಸಜ್ಜೆ, ಜೋಳ, ರಾಗಿ, ಸಾಮೆ, ಗೋಧಿ, ಎಳ್ಳು, ಅವರೆ, ಕಡಲೆ, ತೊಗರಿ, ಹೆಸರು, ಉದ್ದು ಮುಂತಾದ ಧಾನ್ಯಗಳೂ ಮೆಣಸು, ಮೆಣಸಿನ ಕಾಯಿ, ಅರಸಿನ, ಮೆಂತೆ, ಜೀರಿಗೆ, ಕೊತ್ತುಂ



ಹಿಂದು ಪಶ್ಚಿಮ ತೀರದಲ್ಲಿ ಇಂಗ್ಲಿಷರು ಅಲ್ಲಲ್ಲಿ ಬೆಳಿಸಿದ ಚಬುಕುಮರದ ಜಾತಿಯಲ್ಲಿ ದೇವದಾರು ಶೇರುತ್ತದೆ. ಹಿಮಾಲಯ ಮತ್ತು ಲೀಬನೋನು ಪರ್ವತಗಳು ದೇವದಾರುಗಳಿಂದ ಕೀರ್ತಿಗೊಂಡವೆ. ಕಡಿದು ಕಡಿಮೆಯಾದ ಲೀಬನೋನಿನ ಕೆಲವು ಈ ಚಿತ್ರದಲ್ಲಿ ತೇರಿನಾಕಾರವಾಗಿ ಕಾಣುತ್ತವೆ.

ಬರಿ, ಸಾಸಿವೆ ಮುಂತಾದ ಸಂಬಾರಗಳೂ ಲವಂಗ, ಜಾಯಿಕಾಯಿ, ಏಲಕ್ಕಿ, ಪತ್ರೆ ಮುಂತಾದ ಗಂಧಸರುಕುಗಳೂ ಭೋಜನಪದಾರ್ಥಗಳಾಗಿ ಅವೆ.

ಪುಷ್ಪಗಳಲ್ಲಿ ಮಲ್ಲಿಗೆ, ಗುಲಾಬಿ, ಶ್ಯಾವಂತಿಗೆ, ಕೇತಕಿ, ಪಾರಿಜಾತ, ಜಾಜೀ ಹೂವು ಮುಂತಾದವುಗಳು ಸುಗಂಧವುಳ್ಳವುಗಳಾಗಿವೆ. ತಾವರೆ, ನೈದಲೆ ಮುಂತಾದ ಜಲಪುಷ್ಪಗಳು ಪರಿಮಳವಿಲ್ಲದವುಗಳಾದಾಗ್ಯೂ ಕಣ್ಣುಗಳಿಗೆ ಅತಿ ರಮ್ಯವಾಗಿರುತ್ತವೆ. ಪಚ್ಚೇ ತೆನೆ, ಮರುಗ, ದವನ ಮುಂತಾದದ್ದನ್ನು ಮುಡಿದು ಕೊಳ್ಳುವರು; ಗಂಧವನ್ನು ತೇದು ಪೂಸಿ ಕೊಳ್ಳುವರು.

ಬೇಸಾಯಕ್ಕೆ ಅತಿ ಯೋಗ್ಯವಾದ ನೆಲದಲ್ಲಿ ಭತ್ತದ ಪೈರು ಆಗುವದು. ಅದಕ್ಕೆ ಹೊಳೆಯ ನೀರು, ಕೆರೆಯ ನೀರು ಸಹಾ, ಬೇಕಾದರೆ ಬಿಡುತ್ತಾರೆ. ಪೈರು ಮಾಡುವದು ಹ್ಯಾಗಂದರೆ: ಮೊದಲು ಗದ್ದೆಯನ್ನು ಉತ್ತು, ಗೊಬ್ಬರ ಹಾಕಿ, ಮಳೆ ಬರುವ ಸಮಯವನ್ನು ನೋಡಿ, ಬೀಜವನ್ನು ಬಿತ್ತುವರು. ಅದು ಮೊಳತು, ಸಸಿಗಳಾದ ಮೇಲೆ ಸಿದ್ಧ ಮಾಡಿದ ಬೇರೆ ಗದ್ದೆಗಳಲ್ಲಿ ನಟ್ಟು, ನೀರು ಕಟ್ಟುವರು; ಕೆಲವು ದಿವಸದ ಮೇಲೆ ಕಳೆ ತೆಗಿಯುವರು. ಆ ಬಳಿಕ ಪೈರು ವೃದ್ಧಿ ಹೊಂದಿ, ತೆನೆ ಬಿಟ್ಟು, ಕಾಳುಗಳು ಹುಟ್ಟುವವು. ಹೀಗೆಯೇ ಪೈರು ಬೆಳದನಂತರ ಒಕ್ಕಲಿಗರು ಬಂದು, ಕುಡುಗೋಲುಗಳಿಂದ ಕೊಯ್ದು, ಅರಿಕಟ್ಟುಗಳನ್ನು ಕಟ್ಟಿ, ಕಣಗಳಿಗೆ ತೆಗೆದು ಕೊಂಡು ಹೋಗಿ, ಚನ್ನಾಗಿ ಹರಡಿ, ಎತ್ತುಗಳಿಂದ ತುಳಿಸಿ, ಹುಲ್ಲನ್ನೂ ಭತ್ತವನ್ನೂ ಬೇರೆ ಮಾಡಿ, ಹುಲ್ಲನ್ನು ಬಣವೆ ಹಾಕಿ, ಭತ್ತವನ್ನು ಕಣಜಗಳಲ್ಲಿ ಕೂಡಿಸಿಡುವರು.

ಶುಂಠಿ, ವತ್ಸನಾಭಿ, ತುಳಸಿ, ಸಣ್ಣ ರಾಶ್ಮೆ, ದುಂಪರಾಷ್ಟ್ರ, ಕಟುಕರೋಹಿಣಿ ಮುಂತಾದವು ಔಷಧಿಯ ಜೀನಸುಗಳು.

ಕಸಿ ಎಂಬ ಉಪಾಯದಿಂದ ಮಾವು ಮೊದಲಾದ ಹಲವು ಮರಗಳಲ್ಲಿ ಅತಿ ಮಧುರವಾದ ಹಣ್ಣು ಫಲಿಸುವ ಹಾಗೆ ಮಾಡುತ್ತಾರೆ. ಅದು ಹ್ಯಾಗಂದರೆ — ಒಳ್ಳೇ ಜಾತೀ ಮರದ ಒಂದು ಕೊಂಬೆಯನ್ನು ಕೊಯಿದು ಕೊಂಡು ಬಂದು, ತಕ್ಕ ಹಾಗೆ ಕೆತ್ತಿ, ಕಾಡುಗಿಡದ ಬುಡವನ್ನಾಗಲಿ ಒಂದು ಕೊಂಬೆಯನ್ನಾಗಲಿ ಸ್ವಲ್ಪ ಶೀಳಿ, ಶೀಳಿನಲ್ಲಿ ಆ ಕೊಂಬೆಯನ್ನು ತೊಗಟೆ ತೊಗಟೆಗೆ ಶೇರುವ ಹಾಗೆ ಯುಕ್ತವಾಗಿರಿಸಿ, ಶೀಳನ್ನು ಜೇಡಿಮಣ್ಣಿನಿಂದ ಮುಚ್ಚಿ, ಬಾಳೇ ನಾರು ಮುಂತಾದ್ದರಿಂದ ಚನ್ನಾಗಿ ಕಟ್ಟಿ, ಕಟ್ಟಿದಲ್ಲಿ ಸ್ವಲ್ಪ ಮಣ್ಣನ್ನೂ ಸಗಣಿಯನ್ನೂ ಬಳಿಯ ಬೇಕು. ಈ ಪ್ರಕಾರ ಬೆಳಸಿದ ಕೊಂಬೆಯಲ್ಲಿ ಆಗುವ ಫಲಗಳು ಬೇರೆ ಶೀಯಾದ ಮರಗಳಲ್ಲಿ ಫಲಿಸುವ ಹಣ್ಣುಗಳ ಹಾಗೆಯೇ ಮಧುರವಾಗಿರುವವು.

"ಅರಾವಪ್ಯುಚಿತಂ ಕಾರ್ಯ್ಯಮ್ ಆತಿಥ್ಯಂ ಗೃಹಮಾಗತೇ |
ಛೇತ್ತುಃ ಪಾರ್ಶ್ವಗತಾಂ ಛಾಯಾಂ ನೋಪಸಂಹರತೇ ದ್ರುಮಃ" ||

ಅಂದರೆ: ಮನೆಗೆ ಬಂದ ಶತ್ರುವಿಗಾದರೂ ಉಪಚರವನ್ನು ಉಚಿತವಾಗಿ ಮಾಡ ತಕ್ಕದ್ದು; ಕಡಿಯುವವನ ಮೇಲೆ ಬಿದ್ದ ನೆರಳನ್ನು ಮರವು ಹಿಂದೆಗೆಯದ ಹಾಗೆ.



## 13. DESCRIPTION OF A GARDEN

## ೧೩. ವನಾಂತರವರ್ಣನೆ

(ಹಿಂದು ಕವಿತ್ವವಾದ ಅನುಭವಶಿಖಾಮಣಿಯದು)



"ಮಲೆಯಾಳವು, ಮಹಾರಾಷ್ಟ್ರ, ಮಾಳವ—
ದಾಳಗೆ ಈ ಕಾಶ್ಮೀರ ದೇಶಕೆ
ಇಳೆಯೊಳೆಲ್ಲಿಯು ಸರಿಯಗಾಣೆನು; ರತ್ನಗಿರಿನಗರಾ ||
ಚಲುವ ಲಂಕಾಪುರದಕಿಂದಲಿ
ಹಲವು ಇಮ್ಮಡಿ ಕೋಟೆ, ಕೊತ್ತಳ,
ಹುಲಿಮುಖದ್ವಾರಗಳಿಂದಲ್ಲಿ ರಾಜಿಸುತ್ತಿಹುದೂ. ||೧||
ಸುತ್ತ, ವಳೆಯದಿ ವನಗಳಿಹವು;
ಮತ್ತೆ ವರ್ಣಿಗಿದ್ದಂಥ ಗಿಡುಗಳು
ಯತ್ತದತ್ತರ ಚಿಗಿತು, ಪರ್ಣಕುಸುಮಗಳ ಚಲುವಿಂದಾ; ||
ಯೆತ್ತ ನೋಡಲು ಫಲವು ಇಲ್ಲದ,
ದತ್ತಹೀನದ ತರುಗಳೆಲ್ಲಾ
ಮತ್ತೆ ಫಲವಾಗಿಹವು, ರಾಜನ ಧರ್ಮಗುಣದಿಂದಾ. ||೨||
ಸುತ್ತ ವಳೆಯವು ಕುಸುಮ ಚೆಲುವಿಂ,
ಸುತ್ತ ವಳೆಯದಿ ವನಗಳಿಹವು;
ದತ್ತಹೀನದ ತರುಗಳೆಲ್ಲವು ಕಾತು, ಫಲವಾಹವೂ. ||
ಮತ್ತಿ, ಮಾಲದ ಬೇವು, ಬೋರೆಯು,
ಮತ್ತೆ ಬೆಳವಲ, ಕಂಚಿ, ನಿಂಬಿಯು,
ದತ್ತದಾಳಿಂಬರದ ವನಗಳು ರಾಜಿಸಿಹವು ಉನ್ನತಿಯಲೀ. ||೩||
ಹಬ್ಬಿದ ಮೆಳೆಸೀಗಿಯು,
ಕೊಬ್ಬಿದಂಥ ಗಜುಗು ಕಮಲಸಖ—
ನಬ್ಬರದಿ ಬೆಳದಿಹವು, ಮಗಿಮಾವುಗಳು ಫಲವಾಗೀ. ||
ಉಬ್ಬಿನಿಂದಲಿ ಬೆಳದ ಮರಕೆಯು
ಹಬ್ಬಿ ಕೊಂಡಿಹ ದ್ರಾಕ್ಷೆ ಬಳ್ಳಿಯು,—

ಸರ್ಬಗುಣಸಂಪನ್ನ ರಾಜನ ಧರ್ಮನಡೆಗಳಿಗೇ. ||೪||
ನಂದಿ, ಶಾವಂತಿಗೆಯು, ಮಲ್ಲಿಗೆ,
ಚಂದದ ಸುರಹೊನ್ನೆ, ಸಂಪಿಗೆ—
ಯಿಂದಲೊಪ್ಪಿಹುದು ಆ ಇಂಪಾದ ಶಾಲೇ; ||
ಹೊಂದ್ಯೆಸೆವ ಚೆಲ್ವಂತ ತರುಗಳ
ಚಂದ ಚಂದದ ಪತ್ರಿಪುಷ್ಪದ
ಅಂದವನು ಬಂಣಿಸುವ ಕವಿಯಾರವನ್ ಅವನಿಯೊಳಗೇ? ||೫||
ಜಂಬುನೇರಲು, ಜೇನುತರುಗಳು,—
ಕೊಂಬು ಕೊನೆಗಳು ಎಲ್ಲ ಚಿಗಿತು,—
ಇಂಬ್ಬಿಡಿದು ಕೊಂಡಿಹವು; ಕದಳಿಯ ಫಲಗಳಾಗಿಹವೂ. ||
ನಿಂಬೆ, ಕಂಚಿಯು, ಹಲಸು, ಫಲದಾ—
ಳಿಂಬ, ಅಶ್ವತ್ತಾಲ ಮರಗಳು
ತುಂಬಿಹವು ಪರ್ಣದಲಿ, ಕುಸುಮದಿ, ಕಾಯಿಪಣ್ಣಿಂದಾ. || ೬||
ಕಿತ್ತಳೆಯು, ತೆಂಗಡಕೆ, ಬಂನಿಯು,
ಉತ್ತತ್ತಿಯು, ಬಸುರಿಯು, ಹುಣಿಸೆಯು,
ಅತ್ತಿ, ಆರೆಯು, ಬೋನಗಾರಿಯು, ಬೋರೆ ಮೊದಲಾಗೀ ||
ಮತ್ತೆ ಆ ವನದೊಳಗೆ; ಪರಿಪರಿ
ಹತ್ತು ಬಗೆ ತರುಲತೆಗಳಿಂದಲಿ
ಅತ್ಯಧಿಕವನವಾಗಿ, ಮೆರವದನೇನ ಬಂಣಿಸುವೇ? ||೭||
ಮತ್ತೆ ತರುಗಳು ಕೊಳದ ಸುತ್ತಲು
ಒತ್ತಿ, ಕೊನೆ ಕೊಂಬುಗಳು ಕೂಡಿಯೇ,—
ಮತ್ತೆ ಉನ್ನತ ದೇವಾಲಯುಗಳ ಸಿಕರದಾತೆರದೀ ||
ಮತ್ತೆ ಶೋಭಿಸುತಿಹವು; ತೋಟವ—
ನೊತ್ತಿ, ನಾನಾ ಜೇನಸದಲತೆ
ಸುತ್ತಿ ಹಬ್ಬಲ,—ಸುತ್ತುಗಟ್ಟಿದ ಕೋಟೆಯುಂತೆಸೆಯೇ. ||೮||
ಮತ್ತೆ ಕೊಳಗಳ ನೋಡ ಸಾಲದು;
ಮತ್ತೆ ರವಿಶಶಿಕಾಂತಕಲ್ಲಿಲಿ
ಉತ್ತಮದ ಸೋಪಾನವಿರ್ದವು; ವುದಕದೊಳಗೆಲ್ಲಾ ||
ಮತ್ತೆ ಕಮಲಗಳರಳಿಹವು;
ಉತ್ತಮದ ಸುಳಿಘಾಳಿ ಬೀಸಲು,—
ಚಿತ್ತರದಿ ತಲೆದೂಗುವವು ರಾಜಂಗೆ ಬೆರಗಾಗೀ. ||೯||
ಮತ್ತೆ ಕೊಳದ ಮುಂದುಗಡೆಯಲಿ
ವತ್ತಿ ಹೊಯ್ವಳು ಭೀಮರತಿಯು;
ಉತ್ತುಮೋತ್ತಮ ನೀರು ಕೊಳಕೆ ಸಲೆಯಾಗೀ ||

ವತ್ತಿ, ಬಾಹುದು, ಭಾರಿಸುತ್ತಲಿ;
ಯೆತ್ತ ನೋಡಲು ಕಾಳವು ತುಂಬಿ,
ವತ್ತಿ, ತುಳುಕುತ, ಜಲವು ಹರಿದು ವನಕೆ ಪೋಗುವದೂ. ||೧೦||
ಅಲ್ಲಿಗಲ್ಲಿಗೆ ಭಾವಿ, ಕೆರೆಗಳು;
ಅಲ್ಲಿಗಲ್ಲಿಗೆ ಭತ್ತಗದ್ದೆಯು;
ಅಲ್ಲಿಗಲ್ಲಿಗೆ ಸರೋವರಗಳು, ವನಗಳಿರುತಿಹವೂ;
ಅಲ್ಲಿಗಲ್ಲಿಗರವಟ್ಟಿಗೆಗಳು;
ಅಲ್ಲಿಗಲ್ಲಿಗೆ ಅನ್ನಛತ್ರವು;
ಅಲ್ಲಿಗಲ್ಲಿಗೆ ಮಠವು, ಮನೆಗಳು, ಗುಡಿ, ದೇವಾಲ್ಯಗಳೂ.,, ||೧೧||

## 14. GRAINS

## ೧೪. ಧಾನ್ಯಗಳು

"ಧಾನ್ಯ ಎಲ್ಲದಕ್ಕಿಂತ ಮಾನ್ಯ.,,
ಗಾದೆ.



ಯಹೂದಿ ಇತ್ಯಾದಿ ಅತ್ತಾಗಿನ ದೇಶಗಳಲ್ಲಿ ಬೆಳೇ ಕಾವಲಿಗಾಗಿ ಕುಂಡ್ರುವ ಹಂದರವೂ ಉಳುವ ನೇಗಿಲೂ ಇಲ್ಲಿ ಕಾಣುತ್ತದೆ.

ನಾ ದೇಶಗಳಲ್ಲಿ ನಾನಾ ವಿಧಗಳಾದ ಧಾನ್ಯಗಳು ಬೆಳೆಯುವವು. ಆಯಾ ಧಾನ್ಯದ ಗಿಡಗಳಿಗೆ ಎಲೆಗಳ ಆಕಾರವು ಬೇರೆ ಬೇರೆಯಾಗಿದೆ. ಧಾನ್ಯವು ಹುಲ್ಲಿನ ಜಾತಿಯದು. ಈ ದೇಶ ಮೊದಲಾದ ಉಷ್ಣ ಪ್ರದೇಶಗ



"ಬೀಸುವ ಕೈ ತಿಂದರೆ ನಡೆದ್ರು ಕಾಲ."
ಗಾದೆ.

ಳಲ್ಲಿ ಚತ್ತ, ರಾಗಿ, ಜೋಳ ಮೊದಲಾದ ಧಾನ್ಯಗಳು ಹೆಚ್ಚಾಗಿ ಬೆಳೆಯುತ್ತವೆ. ಹಿಂದುಸ್ಥಾನದಲ್ಲಿ ಚತ್ತ ಸರ್ವಜನರಿಗೂ ಉತ್ತಮ ಆಹಾರವಾಗಿರುತ್ತದೆ. ಈ ಪೈರಿಗೆ ಬಿಸಲು ಬಹಳ ಬೇಕಾಗುವದರಿಂದ ಅತಿಶೀತಪ್ರದೇಶವಾದ ಇಂಗ್ಲಾಂಡಿನಲ್ಲಿ ಚತ್ತದ ಬೆಳೆಯಾಗುವದಿಲ್ಲಾ. ಸಾಮೆಯೂ ಜೋಳವೂ ಹಿಂದು ತಪ್ಪಲಪ್ರದೇಶಗಳಲ್ಲಿ ಚತ್ತದ ಪೈರಿಗಿಂತ ಚನ್ನಾಗಿ ಬೆಳದು, ವಿಶೇಷವಾಗಿ ಫಲ ಕಾಡುತ್ತದೆ. ಇದರ ಕಡ್ಡಿಯನ್ನು ಚತ್ತದ ಹುಲ್ಲಿನ ಹಾಗೆ ಎತ್ತುಗಳು ತಿನ್ನುತ್ತವೆ. ಗೋಧಿ ಎಲ್ಲಾ ಭೂಖಂಡಗಳಲ್ಲಿಯೂ ಆಗುತ್ತದೆ. ಮಿಕ್ಕ ಹಿಂದು ದೇಶಕ್ಕಿಂತ ಉತ್ತರ ಭಾಗದಲ್ಲಿಯೂ ದಕ್ಷಿಣ ಭಾಗದಾಳಗಣ ಮೇಲ್ಸೀಮೆಯಲ್ಲಿಯೂ ವಿಶೇಷವಾಗಿ ಗೋಧಿಯ ವ್ಯವಸಾಯ ಮಾಡುತ್ತಾರೆ. ವಿಲಾಯತಿ ಜನರೂ ಉತ್ತರ ಅಮೆರಿಕದವರೂ ಹೆ

ಚ್ಚಾಗಿ ಗಾಂಧಿಯಿಂದಲೇ ಜೀವನ ಮಾಡುತ್ತಾರೆ. ಈ ದೇಶಕ್ಕೆ ಬಂದು ಇರುವಂಥಾ ವಿಲಾಯತಿಯವರು ಸಹ ಗಾಂಧಿ ಬಹಳ ಇಚ್ಛಿಸುತ್ತಾರೆ. ಇದರಲ್ಲಿ ಜವೆಗಾಂಧಿ ಮೊದಲಾದ ವಿಧ ಉಂಟು. ಬೇರೆ ಗಾಂಧಿಯ ಹಾಗೆ ಇದನ್ನು ಸಹ ಹಲವರು ರಾಟ್ಟಿ ಸುಡುತ್ತಾರೆ; ಮತ್ತು ಇಂಗ್ಲಿಷ ಮುಂತಾದ ದೇಶಗಳಲ್ಲಿ ಇದರಿಂದ ಬೀರೆಂಬ ಪಾನವನ್ನು ಮಾಡುತ್ತಾರೆ.

ಮೇಲೆ ಹೇಳಿದ ನಾನಾ ವಿಧವಾದ ಧಾನ್ಯಗಳು ರುಚಿಕರವಾಗಿಯೂ ಪುಷ್ಟಿ ಕರವಾಗಿಯೂ ಇರುತ್ತವೆ. ಇವುಗಳ ದೆಸೆಯಿಂದ ನಿರ್ಮಾಣಿಕನಾದ ದೇವರ ಮ ಮತೆ ಬಹಳವಾಗಿ ಪ್ರಕಟವಾಗುತ್ತದೆ.



## 15. THE COCOANUT AND PALMYRA

## ೧೫. ತೆಂಗಿನ ಮರವು, ತಾಳೇ ಮರವು

"ಗಂಡು ಹೆತ್ತವಗೆ, ತೆಂಗು ನೆಟ್ಟವಗೆ ಕಡಿಮೆ ಏನು?
ಗಾದೆ.

ಈ ದೇಶದಲ್ಲಿ ತೆಂಗಿನ ಮರವು ಬಹಳ ಪ್ರಯೋಜನವಾದದ್ದು. ತೆಂಗಿನ ಶಿಪ್ಪೆಯ ನಾರಿನಿಂದ ಸೇದುವ ಹಗ್ಗ ಮೊದಲಾದವುಗಳನ್ನು ಮಾಡುತ್ತಾರೆ; ಅದರ ಎಲೆಗಳನ್ನು ಹೆಣೆದು, ಮನೆಮಾಡುಗಳಿಗೆ ಹಾದಿಸುತ್ತಾರೆ; ಮತ್ತು ಅವುಗಳಿಂದ ಚಾಪೆಗಳನ್ನು ಸಹ ಹೆಣೆಯುತ್ತಾರೆ. ತೆಂಗಿನ ಕಾಯಿ ರುಚಿಕರವಾದದ್ದು; ಅದು ಎಳೇದಾಗಿರುವಾಗ ಅದರಲ್ಲಿ ನೀರು ತುಂಬಾಗಿದ್ದು, ಬಲಿಯುತ್ತಾ, ಬಲಿಯುತ್ತಾ ಇಂಗುತ್ತದೆ; ಮೇಲೋಗರ ಮುಂತಾದ ಭೋಜನಪದಾರ್ಥಗಳಲ್ಲಿ ಅದನ್ನು ಬೆರಸುತ್ತಾರೆ. ಎಳೇ ಕಾಯಿಗೆ ಎಳೇ ನೀರೆಂದೂ, ನೀರು ಸ್ವಲ್ಪವಾದರೂ ಇಲ್ಲದ ಕಾಯಿಗೆ ಕಾಬರಿ ಎಂದೂ, ಹೆಸರು. ಕಾಬರಿಯನ್ನು ಗಾಣದಲ್ಲಿ ಹಾಕಿ, ಎಣ್ಣೆ ಇಳಿಸಿ, ಒಡೆ, ಗಾರಿಗೆ ಮುಂತಾದ ಕಜ್ಜಾಯಗಳಿಗೂ ದೀಪಕ್ಕೂ ಪ್ರಯೋಗಿಸುತ್ತಾರೆ. ತೆಂಗಿನ ಹಾಂಬಾಳೆಯಿಂದ ಸೀಯಾದ ಹೆಂಡವನ್ನು ತೆಗದು, ಅದರಿಂದ ಒಂದು ತರದ ಸಾರಾಯವನ್ನೂ ಬೆಲ್ಲವನ್ನೂ ಮಾಡುತ್ತಾರೆ. ಮರವು ಮನೆ ಮುಂತಾದವುಗಳನ್ನು

ಕಟ್ಟುವ ಕೆಲಸಕ್ಕೆ ಬರುತ್ತದೆ. ಅದರ ಎಲೇ ಕಡ್ಡಿಗಳಿಂದ ಬರ್ಲು ಮಾಡುತ್ತಾರೆ. ಇನ್ನು ಅನೇಕ ಪ್ರಕಾರ ತೆಂಗಿನ ಮರದ ಎಲ್ಲಾ ಅಂಶಗಳು ಪ್ರಯೋಜನವಾಗಿವೆ.

ತಾಳೇ ಮರವು ಮಳಲು ಮಿಶ್ರವಾದ ಭೂಮಿಯಲ್ಲಿ ವೃದ್ಧಿ ಹೊಂದುವದು. ಎಳೇ ತಾಳೇ ಕಾಯಿಗಳ ತಿರಳೂ ಸೀಯಾದ ಅದರ ಹೆಂಡವೂ ಬಹಳ ಉಪಯೋಗವಾಗಿವೆ. ಹೆಂಡ ತೆಗೆಯುವ ಮಡಿಕೆಯ ಒಳಗಡೆಯಲ್ಲಿ ಸುಣ್ಣವನ್ನು ಬಳಿದು ಇಳಿಸುವ ಹೆಂಡವು ತಾಳೇ ಸಾರವೆನ್ನಲ್ಪಡುವದು. ಅದನ್ನು ಅಟ್ಟು, ಬೆಲ್ಲವನ್ನೂ ಒಂದು ಬಗೆಯ ಕಲ್ಲುಸಕ್ಕರೆಯನ್ನೂ ಮಾಡುತ್ತಾರೆ. ತಾಳೇ ಮರದಿಂದ ಮಾಡಿದ ಗಳಗಳೂ ಪಾಡೆಗಳೂ ತೆಂಗಿನ ಮರವ ಹಾಗೆಯೇ ಮನೆ ಮೊದಲಾದವುಗಳನ್ನು ಕಟ್ಟುವ ಕೆಲಸದಲ್ಲಿ ಪ್ರಯೋಗಿಸಲ್ಪಡುತ್ತವೆ.



## 16. COFFEE, TEA

## ೧೬. ಕಾಫಿಬೀಜವು, ಚಾಎಲೆಯು

“ಕಾಪಿ ಸಂತಾಪವ ಪರಿಹರಿಸಿ,
ಕೋಪಕ್ಕಾಸ್ಪದ ಕೊಡಿಸದೆ, ಕಾಯುವ
ರೂಪವಹಪರೂಪವನೌಷಧಿ ಆಮೂಲಫಲಭಾರದಿಂ ಬೊಗ್ಗಿಹುದು.||
ಆ ಪಡಲ್ಲಬಸೀ ವನದಿಂ—
ದೀ ಪರಮೋತ್ತಮ ಹಿಂದೂ ಸೀಮೆಗೆ
ತಾ ಹೊರಡುವೆ, ಕೊಡುವೆನಾರೋಗ್ಯವೆಂದು, ಬಂದು, ನಿಂದುದು ಸಹ್ಯಾದ್ರಿಯಲಿ. ||೧||
ಚಾ ರಾಗರಸಂ ಬಿಡುವದು ಬಿಸಿ
ನೀರಾಗೆ, ಬೆರಸಲು ಗೋರಸೇಕ್ಷು—
ಸಾರಾರೋಗ್ಯ ಸುಖಕ್ಕದು ಯೋಗ್ಯವಹುದು, ಮಾಡುವದು ನಿರಾಲಸ್ಯ.||
ದೂರಾದ ಚೀನಾ ಬಿಟ್ಟ್ಯಮಗಿರಿ—
ಯಾರಾಮದೊಳ್ ವಿಶ್ರಮಿಸ್ಯುಪ—
ಕಾರಾಗಿದೆ ಬಹು ಜನರಿಗೆ; ಲಾಭವಾಯಿತು ಚಾಪ್ರಿಯರಿಂಗಿಲ್ಲಿ.„|| ೨ ||

ಕಾಫಿಗಿಡವು ಕಶಿ ಇಲ್ಲದೆ ನಾಲ್ವತ್ತು ಅಡಿ ಉದ್ದವಾಗುವದು. ಅದರ ಎಲೆಗಳು ಜೋಡುಜೋಡಾಗಿರುತ್ತವೆ. ಕೊಂಬೆಗಳಲ್ಲಿ ಹುಟ್ಟುವ ಹೂವುಗಳು ಮಲ್ಲಿಗೆಹೂವಿನ ಹಾಗೆ ಇದ್ದು, ಸುವಾಸನೆಯುಳ್ಳವುಗಳಾಗಿವೆ. ಅವುಗಳ ಹಣ್ಣುಗಳಲ್ಲಿ ಬೀಜವು ಎರಡು ಬೇಳೆಯಾಗಿದೆ. ಸುತ್ತಲೂ ಸುಂದರವಾಗಿ ಕೆಂಪು ಹರಿದ ಪಕ್ವವಾದಂಥ ಕಾಫಿಫಲಗಳೆಲ್ಲಾ ಕೊಯ್ದು, ಕೂಡಿಸಿ, ಒಂದು ವಿಧದ ಯಂತ್ರದಲ್ಲಿ ಹಾಕಿ, ಬೀಜವೂ ಶಿಪ್ಪೆಯೂ ಬೇರೆಯಾಗ ಮಾಡಿ, ಆ ಬಳಿಕ ಚನ್ನಾಗಿ ತೊಳೆದು, ಒಣಗಿಸಿ, ಕುಟ್ಟಿ, ಬೇಳೆಯನ್ನು ಹೊಟ್ಟಿನಿಂದ ಪ್ರತ್ಯೇಕ ಮಾಡುವರು.

ಕಾಫಿಬೀಜಗಳು ಹಸಿಯಾಗಿರುವಾಗ್ಯೆ ರುಚಿ ಇಲ್ಲ; ಇವನ್ನು ಹುರಿದ ಮೇಲೆ ಬಹಳ ರುಚಿಯುಂಟಾಗುವದು. ಆದದರಿಂದ ಅವನ್ನು ಮೊದಲು ಹುರಿದು, ಆ ಬಳಿಕ ಕುಟ್ಟಿ, ಪುಡಿ ಮಾಡಿ, ಇಟ್ಟು ಕೊಂಡು, ಅದರ ಮೇಲೆ ಕುದಿಯುವ ನೀರು ಹಾಕಿ, ತಿಳ ಕೊಂಡ ನೀರನ್ನು ಮತ್ತೊಂದು ಪಾತ್ರೆಗೆ ಬಗ್ಗಿಸಿ ಕೊಂಡು, ಹಾಲು ಸಕ್ಕರೆ ಬೆರಸಿ, ಕುಡಿಯುವರು. ಇದರಿಂದ ಆಲಸ್ಯವೂ ಛಳಿಯೂ ಪರಿಹಾರವಾಗುತ್ತವೆ.

ಕಾಫಿಯು ಹಬಸಿ, ಅರಬಿ, ಅಮೆರಿಕ ದೇಶಗಳಲ್ಲಿಯೂ ಲಂಕೆ, ಜಾವಾ ಮೊದಲಾದ ದ್ವೀಪಗಳಲ್ಲಿಯೂ ಹೆಚ್ಚಾಗಿ ಬೆಳಿಯುವದು. ಹಿಂದು ದೇಶದೊಳಗಣ ಕೆಲವು ಪರ್ವತಪ್ರದೇಶಗಳಲ್ಲಿ ಸಹ ಅದರ ಒಳ್ಳೇ ಪೈರಾಗುತ್ತದೆ. ಹಬಸಿ ಮತ್ತು ಅರಬಿ ದೇಶವು ಅದಕ್ಕೆ ಮೂಲಸ್ಥಾನವಾಗಿದೆ. ಅದನ್ನು ೧೬೫೨ನೇ ವರುಷದಲ್ಲಿ ಮುಟ್ಟಮೊದಲು ಇಂಗ್ಲಾಂಡಿಗೆ ತಕ್ಕೊಂಡು ಹೋದರು. ವಿಲಾಯತಿಯವರೆಲ್ಲರು ಕಾಫಿನೀರನ್ನು ವಿಶೇಷವಾಗಿ ಸೇವನೆ ಮಾಡುತ್ತಾರೆ.

ಇದಲ್ಲದೆ ಅವರು ಚೀನಾ, ಜಾಪಾನು ದೇಶಗಳಲ್ಲಿಯೂ ಹಿಂದು ದೇಶದ ಉತ್ತರ ಭಾಗದಲ್ಲಿಯೂ ಉತ್ಪನ್ನವಾಗುವಂಥಾ ಚಾಎಲೆಯ ನೀರನ್ನು ಸಹ ಕುಡಿಯುತ್ತಾರೆ. ಚಾಪೊದೆಯ ಹೂವುಗಳು ಕಾಡುಗುಲಾಬೀ ಪುಷ್ಪಗಳ ಹಾಗೆ ಬಿಳುಪಾಗಿಯೂ ಎಲೆಗಳು ದಾಳಿಂಬದ ಎಲೆಯಂತೆಯೂ ಇರುತ್ತವೆ. ಚಾಪೊದೆಯ ಎಳೇ ಸೊಪ್ಪನ್ನು ಸಂವತ್ಸರಕ್ಕೆ ಮೂರು ಸರ್ತಿ ತರದು, ಒಟ್ಟಹಾಕಿ, ಬಳಿಕ ಕಬ್ಬಿಣದ ಬಾನೆಗಳಲ್ಲಿರಿಸಿ, ಸ್ವಲ್ಪ ಹುರಿದು, ಭಳಸಿ ಕೊಳ್ಳುವರು. ಚೀನಾ ದೇಶದ ಮೊದಲನೇ ಬೆಳೆಯ ಶ್ರೇಷ್ಠ ಚಾವು ರಾಜಚಾವೆನ್ನಿಸಿ ಕೊಂಡು, ಪರದೇಶಕ್ಕೆ ಹೋಗುವದು ಅಪರೂಪ; ಎರಡನೇ ಬೆಳೆಯದು ವಿಲಾಯತಿಗೆ ಹೋಗಿ, ಉತ್ತಮ ಚಾವೆಂಬ ಹೆಸರಾಗಿ ಮಾರಲ್ಪಡುತ್ತದೆ; ಮೂರನೇ ಬೆಳೆಯದು ಮಧ್ಯಮ ಚಾವಾಗಿದೆ.

ಚಾವು ಇಂಗ್ಲಿಷ ದೇಶಕ್ಕೆ ೧೬೧೦ನೇ ಸಂವತ್ಸರದಲ್ಲಿ ಪ್ರಥಮತಾ ವೈಯಲ್ಪಟ್ಟಿತು. ಈಗ ಲಂಡನ್ ಪಟ್ಟಣದಲ್ಲಿ ರಾತ್ಲ ಒಂದಕ್ಕೆ ೨ ರೂಪಾಯಿ ಕ್ರಯವಾಗುವ ಚಾ ಎಲೆಯು ೧೬೬೬ನೇ ಸಂವತ್ಸರದಲ್ಲಿ ೩೦ ರೂಪಾಯಿಗಳಿಗೆ ವಿಕ್ರಯಿಸಲ್ಪಟ್ಟಿತಂತೆ. ವಿಲಾಯತಿಯವರಿಗೆ ವರುಷಕ್ಕೆ ಸುಮಾರು ೪೦೦೦೦೦೦೦ ಶೇರು ಬೇಕಾಗುವದು.

ಒಂದು ಸೌಟು ಚಾಎಲೆ ತಂದು, ಒಂದು ಪಾತ್ರೆಯಲ್ಲಿ ಇರಿಸಿ ಕೊಂಡು, ಕುದಿದುಕ್ಕುವ ಬಿಸಿ ನೀರನ್ನು ಹಾಕಿ, ಸ್ವಲ್ಪ ತಡದು, ಮತ್ತೊಂದು ಪಾತ್ರೆಗೆ ಆ ನೀರನ್ನು ಹೊಯ್ದು ಕೊಂಡು, ಸಕ್ಕರೆ ಹಾಲು ಬೆರಸಿ, ಕುಡಿಯುತ್ತಾರೆ. ಇದು ಸಹಾ ಕಾಫಿಯ ಹಾಗೆಯೇ ದೇಹಕ್ಕೆ ಆರೋಗ್ಯವಾಗಿ, ಸೋಮಾರಿತನ ಪರಿಹರಿಸಿ, ಜಾಗರವನ್ನು ಹುಟ್ಟಿಸುತ್ತದೆ.

## 17. TOBACCO, ARECANUT

## ೧೭. ಹೊಗೆಸೊಪ್ಪು, ಅಡಿಕೆ

"ಅಡಿಕೆ ಉಡಿಯಲ್ಲಿ ಹಾಕ ಬಹುದು, ಮರವಾದ ಮೇಲೆ ಕೂಡದು."

ಗಾದೆ.

ಹೊಗೆಸೊಪ್ಪು ಹಿಂದು ದೇಶದಲ್ಲಿ ಹೆಚ್ಚಾಗಿ ಸಾಗುವಳಿ ಆಗುತ್ತದೆ. ಅದರ ಗಿಡವು ಹೆಚ್ಚುಕಡಿಮೆಯಾಗಿ ೨ ಮೊಳ ಎತ್ತರವಿರುವದು. ಅದು ಬಲಿತ ಕೂಡಲೇ ಕೊಯ್ದು, ಎರಡೆರಡಾಗಿ ಧಾರದಲ್ಲಿ ಪೋಣಿಸಿ, ನೆರಳಿನಲ್ಲಿ ಒಣಗಿಸಿ, ಆರಿದ ಬಳಿಕ ಅದನ್ನೆಲ್ಲಾ ಶೇರಿಸಿ, ಕಟ್ಟುಗಳ ಕಟ್ಟಿ, ನಾನಾ ದೇಶಗಳಿಗೆ ಕಳುಹಿಸಿ, ವಿಕ್ರಯಿಸುವರು. ಕೆಲವರು ಹೊಗೆಸೊಪ್ಪನ್ನು ತಂದು, ಬತ್ತಿ ಸುತ್ತಿ ಕೊಂಡು, ಶೇದುವದೂ ಕೆಲವರು ನಶ್ಯ ಮಾಡಿಕೊಂಡು, ಹಾಕಿ ಕೊಳ್ಳುವದೂ ಕೆಲವರು ಬಾಯಿಯೊಳಗೆ ಹಾಕಿ ಕೊಂಡು ಕಡಿಯುವದೂ ವಾಡಿಕೆಯಾಗಿದೆ. ಬಹಳ ಹೊಗೆಸೊಪ್ಪು ಪ್ರಯೋಗಿಸುವವರಿಗೆ ಪಿತ್ತವೇರುವ ಕಂಟಕವಾಗುವದು.

ಅಡಿಕೇ ಮರವು ತೆಂಗಿನ ಮರ ಮೊದಲಾದ ತೃಣವೃಕ್ಷಗಳ ಹಾಗೆ ಉದ್ದವಾಗಿದ್ದು, ತುದಿಯಲ್ಲಿ ಎಲೆಗಳು ಹುಟ್ಟಿ, ಅಡಿಕೆಗಾನೆಗಳನ್ನು ಬಿಡುವದು. ಪ್ರತಿಸಂವತ್ಸರವೂ ಲಂಕಾದ್ವೀಪದಿಂದ ಈ ದೇಶಕ್ಕೆ ಎರಡು ಲಕ್ಷ ರೂಪಾಯಿಗಿಂತ ಹೆಚ್ಚು ಅಡಿಕೆಯನ್ನು ತೆಗದು ಕಾಂಪು ಬಂದು, ಮಾರುತ್ತಾರೆ; ಹೀಗೆಯೇ ದಕ್ಷಿಣ ದೇಶಗಳಿಂದ ಸಹ ಹೆಚ್ಚಾಗಿ ತರುತ್ತಾರೆ.

ಈ ಅಡಿಕೆಗಳನ್ನು ಹಣ್ಣು ಆದ ಮೇಲೆ ತೆಗದು, ಒಣಗಿಸಿ ಆಗಲಿ, ಎಳೇದಾಗಿರುವಾಗ ತೆಗದು, ಹೋಳುಗಳನ್ನು ಮಾಡಿ ಆಗಲಿ, ಮಾರುತ್ತಾರೆ. ಕೆಲವರು ಎಳೇ ಅಡಿಕೆಗಳನ್ನು ಬೇಯಿಸಿ, ಚೂರುಗಳನ್ನು ಮಾಡಿ, ಒಣಗಿಸಿ, ವಿಕ್ರಯಿಸುತ್ತಾರೆ. ಅಡಿಕೇ ಮರವು ಘಟ್ಟಿಯಾದದ್ದಲ್ಲ; ಅದರ ಸಲುವಾಗಿ ಒಳ್ಳೇ ಮನೆ ಕಟ್ಟುವದಕ್ಕಾಗುವದಿಲ್ಲ.

ಈ ದೇಶದಲ್ಲಿ ಅನೇಕ ಜನರು ವೀಳ್ಯದೆಲೆಗೆ ಸುಣ್ಣವನ್ನು ಹಚ್ಚಿಸಿ, ಅಡಿಕೆಗಳ ಸಂಗಡ ಕೂಡಿ ಅಗಿದು, ಕೆಂಪಾದ ಒಗರುನೀರನ್ನು ಉಗುಳುತ್ತಾರೆ. ವೀಳ್ಯದೆಲೆ, ಅಡಿಕೆ, ಸುಣ್ಣ ಈ ಸಾಮಗ್ರಿಯು ತಾಂಬೂಲವೆನ್ನಲ್ಪಡುವದು. ತಾಂಬೂಲ ಹಾಕುವದರಿಂದ ನಾಲಿಗೆ ಥಪ್ಪವೂ ಮದಡೂ ಆಗಿ, ಮಾತುಗಳನ್ನು ಶುದ್ಧವಾಗಿ ಉಚ್ಚರಿಸುವದಕ್ಕೆ ಅಭ್ಯಂತರ ಉಂಟಾಗುವ ಕಾರಣ ಈ ದುರಭ್ಯಾಸದಲ್ಲಿ ಪ್ರವೇಶಿಸದಿದ್ದರೆ ಎಷ್ಟೋ ಉತ್ತಮ!

"ಅಡಿಕೆಗೆ ಹೋದ ಮಾನ ಆನೆ ಕೊಟ್ಟರೆ ಬಂದೀತೇ?,,

## 18. COTTON

## ೧೮. ಹತ್ತಿಯು

"ಅರಳಿ ತಾನಿಂಗ್ಲಿಷ ಸೀಮೆಗೆ
ತೆರಳಿ, ಬಹು ಜನರಂ ನೋಡಿ, ಶೃಂ—
ಗರಿಸಿ ಕೊಂಡ ಬಳಿಕ ಬಹು ತರದೈಶ್ವರ್ಯವ ಪಡೆದು, ||
ಮರಳಿ, ತಾ ಹೊರಮಟ್ಟ ದೇಶವ
ಮರಿಯದೆ, ತಿರಿಗಿದಂತೆ ತೋರ್ಪುದು;
ಪರಿಪರಿಯಲಿ ದೇವನೇಮ ಪೂರೈಸುವರೆಷ್ಟುಪಕಾರ ಮಾಳ್ಪುದು! ನೋಡೆಂದಾ.,,||



ಈ ಚಿತ್ರದಲ್ಲಿ ಮಿಸ್ರ ದೇಶದಲ್ಲಿಯೂ ಯಹೂದಿ
ದೇಶದಲ್ಲಿಯೂ ಆಗುವ ಹತ್ತೀ ಗಿಡದ ಹೂವು ಕಾಯಿ ಎಲೆಗಳು
ತೋರುತ್ತವೆ.

ಹತ್ತಿಯಲ್ಲಿ ಬಿಳೀ ಹತ್ತಿ, ಕೆಂಪು ಹತ್ತಿ, ಬೂರುಗದ ಹತ್ತಿ ಎಂದು ಮೂರು ವಿಧವು. ಮೇಲೆ ಹೇಳಿದ ಒಂದನೇ ಎರಡನೇ ತರದ ಹತ್ತಿ ಚಿಕ್ಕ ಗಿಡಗಳಲ್ಲಿ ಹುಟ್ಟುವದು; ಅದರ ಕಾಯಿ ಕಪ್ಪಾಗಿದ್ದು, ಅದರಲ್ಲಿರುವ ಬೀಜಗಳು ಹತ್ತಿಯನ್ನು ಕೂಡಿ ಕೊಂಡು ಇರುವವು.

ಬೂರುಗವೃಕ್ಷಗಳಲ್ಲಿ ಹುಟ್ಟುವ ಹತ್ತಿ ಬೂರುಗದ ಹತ್ತಿ ಎನ್ನಲ್ಪಡುವದು. ಇದರ ಕಾಯಿ ಗಜಬಾಳೆಯಂತೆ ಹಚ್ಚಗಾಗಿಯೂ ಸುಂದರವಾಗಿಯೂ ಇರುವದರಿಂದ ಪಕ್ವವಾದರೆ ಮಧುರವಾದ ತಿರಳು ತಿನ್ನುವದಕ್ಕೆ ಶಿಕ್ಕುವದೆಂದೆಣಿಸಿ, ಗಿಣಿಗಳು ಆಶೆಯಿಂದ ಕಾದು ಇದ್ದು, ಕಾಯಿಗಳು ಒಣಗಿ ಒಡದು ಹತ್ತಿಯು ಘಾಳಿಯಿಂದ ಹಾರಿ ಹೋಗುವದನ್ನು ನೋಡಿ, ಕಡೆಗೆ ನಿರಾಶೆಯಾಗಿ ಹೋಗುವವೆಂದು, ಜನರು ಹೇಳುತ್ತಾರೆ. ಅದಕ್ಕೆ

"ಬೂರುಗದ ಮರ ಗಿಣಿ ಕಾದ ಹಾಗೆ,,

ಎಂಬ ಗಾದೆ ಹುಟ್ಟಿತು. ಈ ಹತ್ತಿ ಬಹಳ ಮೃದುವಾಗಿರುವದರಿಂದ ಸುಪ್ಪತ್ತಿಗೆ, ದಿಂಬು ಮೊದಲಾದವುಗಳಿಗೆ ಬಹಳ ಉಪಯೋಗಿಸುವರು.

ಬೂರುಗದ ಹತ್ತಿಯು ಅತಿ ಮೃದುವಾಗಿದ್ದರೂ ನೂತು ಬಟ್ಟೆ ಮಾಡುವದಕ್ಕೆ ಆಗುವದಿಲ್ಲ; ಆದರೆ ಚಿಕ್ಕ ಗಿಡಗಳಲ್ಲಿ ಹುಟ್ಟುವ ಆ ಬೇರೆ ತರದ ಹತ್ತಿಯಿಂದ ನಾನಾವಿಧ ವಸ್ತ್ರಗಳು ಆಗುವ ಕಾರಣ ಹೆಚ್ಚಾಗಿ ಬೆಳಿಸುತ್ತಾರೆ. ತಿರುನೆಲ್ವೇಲಿಯ ಅರಳೆಯನ್ನು ಬಂಡಿಯ ಮೇಲೆ ಹಾಕಿ, ಕೂತ್ತಿಕುಡಿ ಎಂಬ ಸಮುದ್ರತೀರದ ಪಟ್ಟಕ್ಕೆ ತೆಗೆದು ಕೊಂಡು ಹೋಗಿ, ಸ್ವಲ್ಪ ಎಕ್ಕಿ, ಹತ್ತೀ ಯಂತ್ರದಲ್ಲಿ ಮೊಟ್ಟೆಗಳನ್ನು ಹಾಕಿ, ಅಡಕ ಮಾಡಿ ಕಟ್ಟಿ, ಇತರ ದೇಶಗಳಿಗೆ ಕಳುಹಿಸುತ್ತಾರೆ. ಪಶ್ಚಿಮ ತೀರದಲ್ಲಿ ಸದಾ ಶಿವಗಡದಲ್ಲಿ ಹತ್ತೀ ಯಂತ್ರ ವಿಡುವ ಆಲೋಚನೆಯಲ್ಲಿದ್ದಾರೆ. ತಿರುನೆಲ್ವೇಲಿಯಲ್ಲಿಯೂ ಮಹಾರಾಷ್ಟ್ರದಲ್ಲಿಯೂ ಈ ವರೆಗೆ ಆದ ಅರಳೆಯು ಉತ್ತರ ಅಮೇರಿಕ ದೇಶದ ಅರಳೆಯಂತೆ ಊಚಿತಲ್ಲವಾದ್ದರಿಂದ ಅದಕ್ಕೆ ಅರ್ಧ ಕ್ರಯ ಮಾತ್ರ ಬೀಳುತ್ತದೆ; ಯಾತರಿಂದಂದರೆ: ಅಮೇರಿಕ ದೇಶಸ್ಥರು ಬಹಳ ಜಾಗ್ರತೆಯಾಗಿ ಪೈರು ಮಾಡುವದಲ್ಲದೆ ಪೈರು ಮಾಡಿದ ಮೇಲೆ ಸಹ ಎಚ್ಚರಿಕೆಯಿಂದ ಬೀಜ ತೆಗೆಯುತ್ತಾರೆ. ಆದದರಿಂದ ಇಂಗ್ಲಿಷ ದೇಶದ ವರ್ತಕರು ಅಮೇರಿಕದ ಅರಳೆಯನ್ನು ಹೆಚ್ಚಾಗಿ ಕೊಂಡು ಕೊಳ್ಳುತ್ತಿದ್ದರು. ಆದರೆ ಅವರು ಹಿಂದು ದೇಶದಿಂದ ಬರುವ ಅರಳೆಯನ್ನು ಸಹ ಕೊಂಡು ಕೊಂಡು, ಎಕ್ಕಿ, ನೂತು, ಹಲವು ತರದ ಬಟ್ಟೆಗಳನ್ನು ನೇಯಿದು, ಹಿಂದು ದೇಶಕ್ಕೆ ಕಳುಹಿಸಿ, ಸ್ವಲ್ಪ ಕ್ರಯಕ್ಕೆ ಮಾರುವದರಿಂದ ಇಂಗ್ಲಾಂಡಿನಲ್ಲಿ ಮಾಡಿದ ಬಟ್ಟೆಯನ್ನು ಅಷ್ಟವೆಂದು, ಅನೇಕ ಹಿಂದು ಜನರು ಕ್ರಯಕ್ಕೆ ತಕ್ಕೊಂಡು, ಹೊದ್ದು ಕೊಳ್ಳುತ್ತಾರೆ. ಹಿಂದು ಜನರು ಹತ್ತಿ ಬೆಳಿಸುವದರಲ್ಲಿಯೂ ಕೊಯಿದು ಕೊಳ್ಳುವದರಲ್ಲಿಯೂ ಶುದ್ಧ ಮಾಡುವವರಲ್ಲಿಯೂ ವಿಲಾಯತಿಯವರಿಂದ ಬುದ್ಧಿ ಕಲಿತು ಕೊಳ್ಳಬೇಕು; ಕಲಿತು ಕೊಂಡ ಮೇಲೆ ಈ ಶ್ರೇಷ್ಠ ವ್ಯಾಪಾರಚೀನಸಿನಿಂದ ಅವರ ಗಂಟು ದೊಡ್ಡದಾಗುವದು. ಇಂಗ್ಲಿಷ ವರ್ತಕರಿಗೆ ಸಂವತ್ಸರಕ್ಕೆ ೧೮ ಲಕ್ಷ ದೊಡ್ಡ ಅರಳೇ ಕಟ್ಟುಗಳು ಬೇಕಾಗುತ್ತಾ ಅವೆ.

ಹತ್ತಿಯು ರೇಶ್ಮೆಯಷ್ಟು ಊಚಿತು ಅಲ್ಲದಿದ್ದರೂ ಅದರಿಂದ ಶ್ಯಾನೆ ಲಾಭ ಬರುತ್ತದೆ. ತಿರುನೆಲ್ವೇಲಿಯ ಅರಳೆಯು ವಿಶೇಷವಾಗಿ ಚೀನಾ ದೇಶಕ್ಕೆ ಸಾಗುತ್ತದೆ. ಹತ್ತೀ ಬೀಜ ದನಗಳಿಗೆ ಹಾಕುವದರಿಂದ ಹಾಲು ವೃದ್ಧಿಯಾಗುತ್ತದೆ.

# 19. SUGAR

# ೧೯. ಸಕ್ಕರೆಯು

"ಬೆಲ್ಲವಿಲ್ಲದಿದ್ದರೆ ಬೆಲ್ಲದಂಥ ಮಾತು ಇಲ್ಲವೇ?,,
ಗಾದೆ.

ಸಕ್ಕರೆ ಕಬ್ಬಿನಿಂದ ಹುಟ್ಟುವದು. ಕಬ್ಬಿನ ಜಲ್ಲೆ ಹೆಚ್ಚು ಕಡಿಮೆ ೬ ಮೊಳ ಇರುವದು. ಅದು ಈ ದೇಶದಲ್ಲಿಯೂ ಬೆಳೆಯುತ್ತದೆ. ಕಬ್ಬಿನಲ್ಲಿ ರಸದಾಳೆ ಎಂತಲೂ ಪಟಾಪಟಿ ಎಂತಲೂ ಕತೇಣಿಕಬ್ಬೆಂತಲೂ ಕರಿ ಕಬ್ಬು ಎಂತಲೂ ನಾಲ್ಕು ವಿಧವಾಗಿದ್ದರೂ ರಸವು ಶೀಯ್ಯಾಗಿದ್ದು, ಎಲ್ಲವುಗಳಿಂದ ಬೆಲ್ಲ ಸಕ್ಕರೆ ಮುಂತಾದವುಗಳಾಗುತ್ತವೆ. ಕಬ್ಬು ಪೈರು ಮಾಡುವ ವಿಧವು ಹ್ಯಾಗಂದರೆ: ಕಬ್ಬಿನ ಜಲ್ಲೆಯ ಬೀಜಕ್ಕಾಗುವ ಗೆಣ್ಣುಗಳನ್ನು ಕತ್ತರಿಸಿ, ನೆಟ್ಟು, ಗೊಬ್ಬರ ಮುಂತಾದ್ದನ್ನು ಹಾಕಿ, ಆರೈಕೆ ಮಾಡಿದರೆ ಹನ್ನೆರಡು ತಿಂಗಳಲ್ಲಿ ಬಲಿಯುವದು. ತರುವಾಯ ಜಲ್ಲೆಗಳನ್ನು ಬುಡದಲ್ಲಿ ಕೊಯ್ದು, ಗಾಣಕ್ಕೆ ಕೊಡಲು,—ಅದರಲ್ಲಿ ನೆಟ್ಟಗೆ ನಿಲ್ಲಿಸಿರುವ ಕಬ್ಬಿಣದ ಲಟ್ಟಣಿಗೆಗಳ ನಡುವೆ ಶೇರಿ, ನರುಕಿ, ಶಿಪ್ಪೆ ಆಚೆ ಕಡೆಗೆ ಬಿದ್ದು, ರಸವು ಕೆಳಗಿರಿಸಿರುವ ಹರವಿಯಲ್ಲಿ ಬೀಳುವದು. ಆ ಮೇಲೆ ಆ ರಸವನ್ನು ದೊಡ್ಡ ಕೊಪ್ಪರಿಗೆಯಲ್ಲಿ ಹೊಯ್ದು, ಒಲೆಯ ಮೇಲಿಟ್ಟು, ಬೇಯಿಸಿ, ಇತರವಾದ ಬೋನೆಗಳಲ್ಲಿ ಬೊಗ್ಗಿಸಿ ಕೊಳ್ಳುವರು; ಅದು ಆರಿ ಘಟ್ಟಿಯಾಗುವದು. ಅದಕ್ಕೆ ಬೆಲ್ಲವೆಂದು ಹೆಸರು. ಆ ಬೆಲ್ಲವನ್ನು ಪುನಹ ಕಾಸಿ, ಶುಚಿ ಮಾಡಿ, ಬಿಳೀ ಸಕ್ಕರೆ ಮಾಡುವರು. ಅದು ಹ್ಯಾಗಂದರೆ: ಬೆಲ್ಲವನ್ನೂ ಸ್ವಲ್ಪ ಸ್ವಲ್ಪ ನೀರನ್ನೂ ಬೆರಸಿ, ಎತ್ತಿನ ಎಲುಬುಗಳ ಮಸೀ ಪುಡಿಯನ್ನು ಹಾಕಿ, ಬೇಯಿಸಿ, ಅದನ್ನು ವಸ್ತ್ರಗಾಲಿತ ಮಾಡುವರು; ಆಗ ಆ ರಸದ ವರ್ಣ ಸ್ವಲ್ಪ ಬಿಳುಪಾಗುವದು. ಆ ಮೇಲೆ ಮತ್ತು ಒಲೆಯಲ್ಲಿಟ್ಟು, ಬೇಸಿ, ಕೋಳೀ ತತ್ತಿಯೊಳಗಣ ಬಿಳೀ ರಸ ಹಾಕಿದರೆ ಕಸವೆಲ್ಲಾ ಇದರಲ್ಲಿ ಶೇರಿ, ರಸ ನಿರ್ಮಲವಾಗುವದು. ಅದು ಆರಿದ ಬಳಿಕ ಬೆಳ್ಳಗಾಗಿಯೂ ಶುಭ್ರವಾಗಿಯೂ ಇರುವದು. ಅದಕ್ಕೆ ಬಿಳೀ ಸಕ್ಕರೆ ಎಂತ ಹೆಸರು.

"ಎಲ್ಲ ದೋಷ ಬೆಲ್ಲದಲ್ಲಿ ಪರಿಹಾರ,,
ಎಂತ ಹೇಳಿದರೆ ಸಮವೋ?

# III. THE ANIMAL KINGDOM

# ೩. ಜಂತುವರ್ಗವು

## 20. THE PRINCIPLE OF LIFE AND THE BODY

## ೨೦. ಜೀವವು, ದೇಹವು

“ತೆಗ ಕಂಭಗಳ್ಕಾಲ್, ಕೈ ಕಾಲುಗಳಂತೆ,
ತಾಗಲು ಗುಡಾರ, ನರಗಳ ಹುರಿ
ಬಿಗಿದಿರ್ಪುದು, ತರತರದಲಿ ಸುತ್ತಿರ್ಪುದು ಸಡಲಾಗದಂತೆ; ||
ಮುಗಬೆಂನ ಕಡೆ ಬಾಗಿಲುಗಳು,
ಜುಗಕಣ್ಕಿವಿಗಳು ಕಿಂಡಿಗಳು,
ಬಗೆಬಗೆ ಬಂಣಗಳಿಂದಾಪ್ಪುವದು, ಬೇಕಾದೆಡೆಗೆ ವೈಯರೆ ಸುಲಭ.” ||

ಜೀವ ಎಂಥಾದ್ದೆಂದು, ಹೇಳ ಕೂಡದು; ಅವಯವಗಳಿಂದುಂಟಾಗುವ ಚೇಷ್ಟೆಗಳ ಮೇಲೆಯೂ ಶ್ವಾಸದ ಮೇಲೆಯೂ ಜೀವ ಇರುತ್ತದೆಂದು, ತಿಳಿದು ಬರುತ್ತದೆ. ಅದು ದೇಹವೆಲ್ಲಾ ವ್ಯಾಪಿಸಿ, ರಕ್ತದಲ್ಲಿ ವಿಶೇಷವಾಗಿ ಉಂಟೆಂದು, ಬುದ್ಧಿವಂತರು ಊಹಿಸುತ್ತಾರೆ.

ಶರೀರದಲ್ಲಿ ಇರುವ ಸಮಸ್ತ ಧಾತುಗಳಿಗೂ ಬೆನ್ನೆಲುಬಿನಲ್ಲಿರುವ ಮೂಳೆಗೂ ಕಪಾಲದಲ್ಲಿರುವ ಮೆದುಳಿಗೂ ಸಂಬಂಧ ಉಂಟು. ನಾವು ಆಘ್ರಾಣಿಸುವ ವಾಯುವು ಶ್ವಾಸಕೋಶವನ್ನು ಹೊಕ್ಕು, ಕಲ್ಮಷವುಳ್ಳ ರಕ್ತವನ್ನು ನಿರ್ಮಲ ಮಾಡುವದು; ಮಲಿನ ದ್ರವ್ಯವು ಶ್ವಾಸವನ್ನು ಬಿಡುವಾಗ ಹೊರಗೆ ಬರುವದು. ಕಲ್ಮಷರಹಿತವಾದ ರಕ್ತವು ಹೃದಯವನ್ನು ಹೊಕ್ಕು, ಅಲ್ಲಿಂದ ಹರಿದು, ತಿರಿಗಿ ದೇಹವೆಲ್ಲಾ ವ್ಯಾಪಿಸುವದು; ಹೀಗೆಯೇ ಒಂದು ತಾಸುಹೊತ್ತಿನಲ್ಲಿ ೪೦೦೦ ಆವರ್ತಿ ಹೃದಯದಲ್ಲಿ ಹೊಕ್ಕು ಹೊರಡುವದು. ಈ ಪ್ರಕಾರದ ಆವರ್ತನೆಗಳಿಂದಲೇ ಗುಂಡಿಗೆ ಸಾರ್ವದಾ ಬಡ ಕೊಳ್ಳುತ್ತದೆ.

ಬೆಳಕು ದೃಷ್ಟೇಂದ್ರಿಯನರಕ್ಕೆ ತಾಗುವದು, ಶ್ರೋತ್ರೇಂದ್ರಿಯನರಕ್ಕೆ ಶಬ್ದವು ಬಡಿಯುವದು; ಕಿವಿ ಕಣ್ಣುಗಳಲ್ಲಿ ಶಬ್ದ ತೇಜಸ್ಸುಗಳು ಪ್ರವೇಶಿಸಿ, ಅವುಗಳ ಸಂಬಂಧ

ವುಳ್ಳ ನರದ್ವಾರಗಳಿಂದ ಹಾಕ್ಕು, ಮೆದುಲಿನಲ್ಲಿ ಶೇರುವವು; ಆಗ್ಯೆ ಆಯಾ ಇಂದ್ರಿಯಗಳಿಗೆ ಪ್ರವೃತ್ತಿ ಉಂಟಾಗುತ್ತದೆ; ಆದದರಿಂದ ಮನಸ್ಸಿಗೆ ವಾಸಸ್ಥಾನವು ಮೆದುಲೆಂಮು, ಹೇಳುವರು.

ಸಾಧನೆಯಿಂದ ಶರೀರದ ಹಾಗೆಯೇ ಬುದ್ಧಿಗೆ ಸಹ ಬಲ ಬರುವದು. ಬುದ್ಧಿಯ ಬಲವು ದೇಹಬಲಕ್ಕಿಂತ ಬಹಳ ಪ್ರಯೋಜನಕರವಾಗಿದೆ; ಅದು ಇಲ್ಲದೆ ಹೋವರೆ ಆನೆ ಸಿಂಹ ಮೊದಲಾದ ದೊಡ್ಡ ಮೃಗಗಳನ್ನು ವಶ ಮಾಡಿ ಕೊಳ್ಳುವದು ಅಸಾಧ್ಯವಾಗಿರುವದು.



ಇಲ್ಲಿ ತೊಗಲು ಮಾಂಸ ನರಗಳು ತೆಗೆದ ಮನುಷ್ಯಾಕಾರವು ತೋರುತ್ತದೆ.

ದೇಹವು ಗೃಹದ ಹಾಗೆ ಇರುವಂಥಾದ್ದು. ಎಲುಬುಗಳು, ನರಗಳು, ಮಾಂಸವು, ಮಜ್ಜೆವು ಮೊದಲಾದವುಗಳಿಂದ ಅದು ಕಟ್ಟಿ ಅದೆ. ಕಂಬಗಳು, ತೊಲೆಗಳು,

ಗಳುಗಳು ಗೃಹವನ್ನಾಧರಿಸುವ ಹಾಗೆ ಎಲುಬುಗಳು ದೇಹಕ್ಕಾಧಾರವಾಗಿರುತ್ತವೆ. ಆ ಎಲುಬುಗಳಲ್ಲಿ ಸುಣ್ಣ ಹೆಚ್ಚಾಗಿರುವದು.

ಮೇಲಿನ ತೆಳ್ಳನ ಚರ್ಮಕ್ಕೂ ಘಪ್ಪ ಚರ್ಮಕ್ಕೂ ನಡುವೆ ಒಂದು ವಿಧವಾದ ಶ್ಲೇಷ್ಮ ಇರುವದು; ಇದರಿಂದ ಸರ್ವ ಜಂತುಗಳಿಗೂ ನಾನಾ ವರ್ಣ ಉಂಟಾಗುತ್ತದೆ. ಮೇಲ್ಭಾಗಲು ಬಹಳ ತೆಳುವಾಗಿದ್ದದರಿಂದ ಆ ಶ್ಲೇಷ್ಮ ಹಾರಗೆ ಕಾಣುತ್ತದೆ. ಹಾಲೆಕಾಗೆಯ ಕಾಲಿನ ಬೆರಳುಗಳಲ್ಲಿರುವ ಶ್ಲೇಷ್ಮ ಕಪ್ಪಾಗಿರುವದು; ನವಲಿನ ಕಾಲಿನಲ್ಲಿರುವಂಥಾದ್ದು ಬಿಳುಪು; ನೀರುಕಾಳಿಯಲ್ಲಿರುವಂಥಾದ್ದು ಹಸುರು; ಹದ್ದಿನಲ್ಲಿಯದು ಹಳದಿ ವರ್ಣದ್ದು; ಕಾಕ್ಕರೆಯ ಕಾಲುಬೆರಳಲ್ಲಿ ಇರುವದು ನೀಲವರ್ಣದ್ದು; ಕಾಡುಕಾಳಿಯಲ್ಲಿರುವಂಥಾದ್ದು ಕೆಂಪು.

ಹೀಗೆ ಆ ಶ್ಲೇಷ್ಮ ವರ್ಣದಲ್ಲಿ ಭೇದವಾಗಿರುವದರಿಂದಲೇ ಮನುಷ್ಯರು ವರ್ಣಭೇದವನ್ನು ಹಾಂದಿದ್ದಾರೆ. ಆ ಶ್ಲೇಷ್ಮ ಬಿಸಲಿನಿಂದ ಭೇದ ಹಾಂದುತ್ತದೆ. ಚರ್ಮದಲ್ಲಿ ಉಗುರುಗಳು, ಕೂದಲುಗಳು, ಕೋಡುಗಳು ಹುಟ್ಟುವವು.

ಸಕಲ ಜಂತುಗಳಿಗೂ ಜೀರ್ಣಕೋಶವಿರುವದು. ತಿನ್ನುವ ಪಧಾರ್ಥಗಳೆಲ್ಲಾ ಅಲ್ಲಿ ಸೇರಿ, ಅದರಲ್ಲಿಯ ರಸದಿಂದ ಕರಗಿ, ರಕ್ತವಾಗಿ, ನಾಡಿಗಳ ದಾರಿಯಲ್ಲಿ ದೇಹವೆಲ್ಲ ವ್ಯಾಪಿಸುವವು. ಆ ಅನ್ನಕೋಶರಸವು ಪಧಾರ್ಥಗಳನ್ನು ಕರಗಿಸುವದಕ್ಕೆ ಅತಿ ಚುರುಕಾಗಿದೆ.

ರಕ್ತದಲ್ಲಿ ಸ್ವಲ್ಪ ಸ್ವಲ್ಪ ಕಬ್ಬಿಣ ಇರುವದು. ಅದರಿಂದ ರಕ್ತಕ್ಕೆ ಬಣ್ಣ ಬರುತ್ತದೆ. ತಕ್ಕಷ್ಟು ಕೈಕಷ್ಟ ಮಾಡುವವರ ದೇಹದಲ್ಲಿ ರಕ್ತವು ಕ್ರಮವಾಗಿ ಆವರ್ತಿಸಿ, ದೇಹಕ್ಕೆ ಸೌಖ್ಯವನ್ನು ಹುಟ್ಟಿಸುವದು. ಹಾಗೆ ಆವರ್ತಿಸದೆ, ರಕ್ತವು ಅಭ್ಯಂತರ ಪಡುವ ಪಕ್ಷದಲ್ಲಿ ನಾನಾವಿಧವ್ಯಾಧಿಗಳು ಉಂಟಾಗುವವು.



# 21. ON THE FIVE SENSES ETC.

# ೨೧. ಪಂಚೇಂದ್ರಿಯಗಳು

"ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ತು |
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ||
ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್.„ |

ಅಂದರೆ:

ತನ್ನನ್ನು ರಥಿಕನೆಂತ ತಿಳು ಕೋ, ಶರೀರವನ್ನು ರಥವೆಂತ;
ಬುದ್ಧಿಯನ್ನು ಸಾರಥಿಯೆಂತ ತಿಳು ಕೋ, ಮನಸ್ಸನ್ನು ಕಡಿವಾಣವೆಂತ;
ವಿಷಯಗಳಲ್ಲಿ ನಡೆಯುವ ಇಂದ್ರಿಯಗಳನ್ನು ಕುದುರೆಗಳೆನ್ನುತ್ತಾರೆ.—

ತ್ವಕ್, ಚಕ್ಷು, ಶ್ರೋತ್ರ, ರಸನ, ಘ್ರಾಣವೆಂಬವುಗಳು ಪಂಚೇಂದ್ರಿಯಗಳಾಗಿವೆ; ಸ್ಪರ್ಶ, ರೂಪ, ಶಬ್ದ, ರಸ, ಗಂಧ ಅವುಗಳಿಗೆ ವಿಷಯಗಳು. ಪಂಚೇಂದ್ರಿಯಮೂಲಕವಾಗಿ ಮನಸ್ಸಿಗೆ ಉಂಟಾಗುವ ತಿಳುವಳಿಕೆ ಇಂದ್ರಿಯಜ್ಞಾನವೆನ್ನಲ್ಪಡುವದು. ಅಂಥ ಇಂದ್ರಿಯಗಳ ಕಾರಣವಿಲ್ಲದೆ, ಸುಖ ದುಖ್ಖಗಳು ಮೊದಲಾದವುಗಳನ್ನು ಮನಸ್ಸಿನಿಂದಲೇ ಅನುಭವಿಸಿ ಕೊಳ್ಳುವದು ಮಾನಸಜ್ಞಾನವೆನ್ನಲ್ಪಡುವದು.

ಇಂದ್ರಿಯಜ್ಞಾನವು ಚಿತ್ರದ ಹಾಗೆ ನಾನಾ ವಿಷಯಗಳನ್ನು ಆತ್ಮದ ಎದುರಿಗೆ ತರುವದು. ಹೋದ ಕಾಲದಲ್ಲಿ ಇಂದ್ರಿಯಗಳ ವಿಷಯವಾಗಿದ್ದದ್ದನ್ನು ನೆನಸುವಾಗ ನೆನಸಿದಂಥ ವಿಷಯದ ಸ್ವರೂಪವಿಂಥಾದ್ದೆಂದು, ತಿಳಿಯುವದು. ಅದಕ್ಕುದಾಹರಣೆಗಳು: ಆನೆಯನ್ನು ನೋಡಿದವನು ಅದರ ರೂಪವನ್ನು ಗ್ರಹಿಸಿ ಇದ್ದಾನೆ; ಆದದರಿಂದ ಆನೆಯನ್ನು ನೆನಸಿ ಕೊಂಡಾಗ ಅದರ ರೂಪವಿಂಥಾದ್ದೆಂದು, ಮನಸ್ಸಿಗೆ ತೋರುವದು; ಆ ಮೇರೆಗೆ ಹುಳಿಹಣ್ಣು ತಿಂದವನು ಅದನ್ನು ನೆನಪು ಮಾಡಿದಾಗ ಅದರ ರುಚಿ ಇಂಥಾದ್ದೆಂದು, ಅವನ ಮನಸ್ಸಿಗೆ ತಿಳಿಯುವದು.

ಇಂದ್ರಿಯಗಳಿಗೂ ಮೆದಲಿಗೂ ಸಂಬಂಧ ಉಂಟು; ಆ ಮೆದಲು ಅಂಡಾಕಾರವುಳ್ಳದ್ದಾಗಿ, ತಲೆಬುರುಡೆಯೊಳಗೆ ಭದ್ರವಾಗಿ ಅದೆ. ಬೆನ್ನೆಲುಬಿನೊಳಗಣ ಮಜ್ಜೆವು ಮೆದಲಿಗೆ ಕೂಡಿ ಅದೆ. ಮೆದಲು ಮಜ್ಜೆಗಳಿಂದ ಅದರದರ ಪದಾರ್ಥಕ್ಕೆ ಸಮಾನವಾದ, ಇಂದ್ರಿಯಗಳ ಪ್ರವೃತ್ತಿಗಾದ ನರಗಳು ಹೊರಟು, ಸಕಲ ಅಂಗಗಳಲ್ಲಿ ಹರದು ಹೋಗಿವೆ; ಅವುಗಳಲ್ಲಿ ಒಂದು ತರದವು ಶರೀರವನ್ನಾಡಿಸುವದಕ್ಕೆ, ಮತ್ತೊಂ

ದು ತರದವು ಇಂದ್ರಿಯಗಳಿಗೆ ಗೋಚರವಾದದ್ದನ್ನು ಮನಸ್ಸಿಗೆ ಒಯ್ಯುವದಕ್ಕೆ ಅವೆ. ಮನುಷ್ಯನ ಮೆದಲು ಮಿಕ್ಕ ಜಂತುಗಳ ಮೆದಲಿಗಿಂತ ದೊಡ್ಡದಾಗಿ ಇರುವದು.

ಹಿಂತಲೆಗಡೆ




ಹಣೆಗಡೆ

ಇದು ಮೇಲ್ಗಡೆ ತೆಗೆದ ತಲೆಬುರುಡೆಯ ಹೋಳು.

ಇ ಇ ಇ ಇ ಎಂಬದಕ್ಕೆದುರಿಗೆ ಮೆದಲು ಕಾಣುತ್ತದೆ. ಅ ಎಂಬ ಗುರುತಿಗೆದುರಿನ ದೊಡ್ಡ ತೂತಿನಿಂದ ಬೆನ್ನಿನ ಮಜ್ಜೆಕ್ಕೂ ಮೆದಲಿಗೂ ಸಂಬಂಧವಾಗುತ್ತದೆ. ಕಾಣುವ ಬೇರೆ ತೂತುಗಳಿಂದ ಮೆದಲಿನ ನರಗಳು ತಮ್ಮ ತಮ್ಮ ಸ್ಥಳಕ್ಕೆ ಹೊರಟು ಹೋಗುತ್ತವೆ.

ಒಂದು ಎರಡು ಇಂದ್ರಿಯಸ್ಥಾನ ಅಂದರೆ ಕಣ್ಣು, ಕಿವಿ, ಬಾಯಿ ತಪ್ಪಿದವನಿಗೆ ಮಿಕ್ಕ ಇಂದ್ರಿಯಗಳು ಒಂದು ವೇಳೆ ಬಹಳ ಬಲವಾಗಿರುವವು; ಕುರುಡನಿಗೆ ಸ್ಪರ್ಶನವು ಬಹಳ ಚನ್ನಾಗಿ ತಿಳಿಯುವದು, ಕಿವಡನಿಗೆ ರೂಪವು ಚನ್ನಾಗಿ ತಿಳಿಯುವದು.

ಸಕಲ ಜಂತುಗಳಿಗೂ ಹೆಚ್ಚು ಕಡಿಮೆಯಾಗಿ ಸ್ವಾಭಾವಿಕ ಬುದ್ಧಿ ಉಂಟು.

ಸ್ವಾಭಾವಿಕ ಬುದ್ಧಿ ಎಂದರೆ ಹುಟ್ಟುಬುದ್ಧಿ. ಇದರಿಂದಲೇ ಹಸುವಾಗಲಿ ಮೇಕೆಯಾಗಲಿ ತಾನು ಈದ ಮರಿಯಲ್ಲಿ ಮಮತೆ ಇಟ್ಟು, ಮೊಲೆಯುಣ್ಣಿಸಿ, ಕಾಪಾಡುತ್ತಿರುವವು; ಪಕ್ಷಿಗಳು ಗೂಡು ಕಟ್ಟಿ, ಮೊಟ್ಟೆಗಳಿಟ್ಟು, ಮರಿಗಳ ಮಾಡಿ, ರಕ್ಷಿಸುವವು; ಇದಲ್ಲದೆ ಜೇನುಹುಳಗಳು ಗೂಡು ಕಟ್ಟಿ, ಜೇನನ್ನು ಶೇರಿಸುವವು; ಜಾಡಹುಳವು ತನ್ನಿಂದ ಹುಟ್ಟಿದ ನೂಲಿನಿಂದ ಒಂದು ವಿಧದ ಬಲೆಯನ್ನು ಹೆಣೆದು, ತನಗೆ ಆಹಾರವಾಗಿರುವ ನೊಣ ಮುಂತಾದವುಗಳನ್ನು ಹಿಡಿದು ತಿನ್ನುವದು. ವೃಕ್ಷಗಳಿಗೆ ಸ್ವಾಭಾವಿಕ ಬುದ್ಧಿ ಉಂಟೆನ್ನ ಕೂಡದಿದ್ದರೂ ಸ್ವಭಾವ ಉಂಟೆನ್ನ ಶಕ್ಯದ್ದಾಗಿದೆ. ಇದರಿಂದ ಬೀಜಗಳು ಮೊಳತು, ಮಣ್ಣನ್ನು ಛೇದಿಸಿ, ಮೇಲೆ ಬರುವವು; ಬೇರುಗಳು ಕಲ್ಲು ಇರುವ ಸ್ಥಳಕ್ಕೆ ಬಂದು, ಆ ದಿಕ್ಕಿಗೆ ಹೋಗದೆ, ಮಣ್ಣುಭೂಮಿಯಲ್ಲಿ ಹರಿಯುವವು. ಸ್ವಾಭಾವಿಕ ಬುದ್ಧಿಯಿಂದಲೇ ಮೇಕೆಮರಿಯು ಹುಟ್ಟಿದ ಕೂಡಲೆ ಹಾಲು ಕುಡಿಯ ತೊಡಗುತ್ತದೆ; ಕೋಳಿಮರಿಗಳು ಕಲ್ಲುಗಳನ್ನು ಬಿಟ್ಟು, ನುಚ್ಚನ್ನೇ ತಿನ್ನುವವು; ಕಾಗೆಮರಿಯು ತನ್ನ ತಾಯಿಕಾಗೆ ಕೊಟ್ಟ ಹುಳಗಳನ್ನು ತೆಗದು ಕೊಂಡು ತಿನ್ನುವದು; ಆನೆಗಳಿಗೂ ನಾಯಿಗಳಿಗೂ ಕುದುರೆಗಳಿಗೂ ಈ ಹುಟ್ಟುಬುದ್ಧಿ ಹೆಚ್ಚಾಗಿರುವದು; ನಾಯಿಗಳು ಮನುಷ್ಯರಿಗೆ ಅನೇಕ ವಿಷಯಗಳಲ್ಲಿ ಸಹಾಯ ಮಾಡಿ, ಕಾಪಾಡುವವು. ಬಾತಿನ ಮರಿಗಳು, ಕೋಳಿಗಳು ಕಾವಿಗೆ ಕೂತ ಮೊಟ್ಟೆಗಳಲ್ಲಿ ಜನ್ಮಸಿದ್ದಾಗ್ಯೂ, ನೀರು ನೋಡುತ್ತಲೇ ಮಿಕ್ಕ ಬಾತುಗಳ ಹಾಗೆ ಅದರಲ್ಲಿ ಪ್ರವೇಶಿಸಿ, ಈಜಾಡುವವು. ಇದಲ್ಲದೆ ಈ ಹುಟ್ಟುಬುದ್ಧಿಯ ಶಕ್ತಿಯಿಂದಲೇ ಸಕಲ ಜಂತುಗಳು ತಮಗೆ ಯುಕ್ತವಾದ ಆಹಾರ ಯಾವದೆಂದು, ತಿಳಿದು ಕೊಂಡು, ಅವುಗಳನ್ನೇ ಹಿಡಿದು ತಿನ್ನುವವು.

ಮನುಷ್ಯರು ತಾವು ಸಂಪಾದಿಸಿದ ಜ್ಞಾನದಿಂದಲೂ ಸಾಧನಾಭ್ಯಾಸ ಮಾಡುವದರಿಂದಲೂ ಯುಕ್ತವಾದ ಪದಾರ್ಥಗಳನ್ನು ಸಂಪಾದಿಸಿ ಕೊಂಡು, ಬೇಯಿಸಿ, ಉಣ್ಣುವರು. ಧಾನ್ಯಗಳು, ಕಾಯಿಪಲ್ಯಗಳು, ಹಣ್ಣುಗಳು ಮೊದಲಾದ ಉದ್ಭಿಜ್ಜ ಪದಾರ್ಥಗಳನ್ನೂ ಮಾಂಸ, ಹಾಲು, ಮೊಸರು, ತುಪ್ಪ, ಮೊದಲಾದ ಪುಷ್ಟಿಕರ ಪದಾರ್ಥಗಳಲ್ಲಿ ಮನಸ್ಸು ಬಂದದ್ದನ್ನೂ ಭಕ್ಷಿಸುವರು. ಮೃಗಶರೀರಗಳ ಸಂರಕ್ಷಣೆಗೆ ಕೂದಲುಗಳೂ ಪಕ್ಷಿಗಳಿಗೆ ಗರಿಗಳೂ ಮತ್ಸ್ಯಗಳಿಗೆ ಹೊಪಸುಗಳೂ ಇರುವವು. ಇಂಥಾ ಹೊದಿಕೆ ಮನುಷ್ಯರಿಗೆ ಇಲ್ಲದದರಿಂದ ತೊಗಲು, ಉಣ್ಣೆ, ಪಟ್ಟೆ ಮೊದಲಾದವುಗಳ ವಸ್ತ್ರವನ್ನು ತೊಟ್ಟು ಕೊಳ್ಳುವರು. ಜೀವ ಆತ್ಮಗಳುಳ್ಳ ಮನುಷ್ಯರಿಗೆ ಹುಟ್ಟುಬುದ್ಧಿಯೂ ಸಾಧಕಜ್ಞಾನವೂ ಇರುತ್ತವೆ. ಸಾಧಕಜ್ಞಾನವಂದರೆ ವಿದ್ಯೆಯಿಂದಲೂ ಸಂಗದಿಂದಲೂ ಕಲಿತು ಕೊಂಡು, ನೆನಪಿನಲ್ಲಿಟ್ಟು ಕೊಳ್ಳುವಂಥಾದ್ದು.

# 22. ON SLEEP ETC.

# ೨೨. ನಿದ್ರೆ ಮೊದಲಾದದ್ದು

“ಇರಳು ಮನೆಯೊಳು ಮಲಗಿ, ನಿದ್ರೆಯ
ಭರದಲೆದ್ದವ ಮೆಲ್ಲಮೆಲ್ಲನೆ
ಕರವಿ ಕಂಭವ ಹುಡುಕಿ, ತಡವರಿಸುತ್ತ, ಭೀತಿಯನೂ ||
ಹೊರಡಿಸುವಂತೆ—ಪೂರ್ವಾಜ್ಞಾನವು
ಹರಿಯೆ, ದಿಂಡುಗೆಟ್ಟವ—
ನರಿತು ಸತ್ವವ, ಭಯುವ ಕಳೆವನು; ಜ್ಞಾನದಾದಿಯು ಇಂತೆಂದು ನಿಶ್ಚೈಸೂ.,, ||

ಮನುಷ್ಯರಿಗೆ ಜೀವಕಾಲದಲ್ಲಿ ಎರಡು ಮುಖ್ಯ ಅವಸ್ಥೆಗಳಿರುವವು: ಜಾಗರವು, ನಿದ್ರೆಯು; ಇವು ಮಿಕ್ಕ ಜಂತುಗಳಿಗೂ ಇರುವವು. ನಿದ್ರೆಯಿಂದ ಸೌಖ್ಯವು ಉಂಟಾಗುತ್ತದೆ; ಆದದರಿಂದ ದೇವರು ಸಕಲ ಜಂತುಗಳಿಗೂ ನಿದ್ರೆ ಮಾಡುವದಕ್ಕೆ ಒಂದು ಕಾಲವನ್ನು ನೇಮಿಸಿದ್ಧಾನೆ. ಸಿಂಹ, ಹುಲಿ, ಗೂಬೆ ಮೊದಲಾದ ಜಂತುಗಳು ಹಗಲುಹಾತ್ತು ನಿದ್ರೆ ಮಾಡಿ, ರಾತ್ರೇ ಕಾಲದಲ್ಲಿ ಮೇವು ಹುಡುಕಲಿಕ್ಕೆ ಹೋಗುವವು.

ಜಾಗರದ ಅವಸ್ಥೆಯಲ್ಲಿರುವಾಗ ಇಂದ್ರಿಯಗಳ ವ್ಯಾಪಾರ ಬುದ್ಧೀ ವಶದಲ್ಲಿ ನಡೆಯುವದು; ಸುಷುಪ್ತಿಕಾಲದಲ್ಲಿ ಇಂದ್ರಿಯಗಳೂ ಆತ್ಮವೂ ಶಾಂತಿ ಪಡುವವು. ಒಳ್ಳೇ ನಿದ್ರೆಯಿಂದ ವೃತ್ತಿಗಾಗಿ ದಣಿದ ದೇಹಾತ್ಮಗಳ ಶ್ರಮ ಆರುವದು. ನಿದ್ರೆಯಲ್ಲಿ ಮಂದನಿದ್ರೆ, ಸ್ವಪ್ನನಿದ್ರೆ, ಗಾಢನಿದ್ರೆ ಎಂದು, ಮೂರು ವಿಧವು. ಇವುಗಳಲ್ಲಿ ಗಾಢನಿದ್ರೆಯು ಮರಣದ ಹಾಗಿದ್ದರೂ ಪ್ರಾಣವಾಯು ಯಥಾಪ್ರಕಾರ ಸಂಚರಿಸುತ್ತಿರುವದು. ನಾಡಿಗಳು ಚಲಿಸದೆ, ಶ್ವಾಸ ಬಾರದೆ ಹೋದರೆ ಮರಣ ಉಂಟಾಗುವದು. ಕೆಲವರು ನಿದ್ರೆ ಹೋದಾಗ ಮಾತುಗಳಾಡುವದೂ ಹಾಸಿಗೆಯಿಂದ ಎದ್ದು, ಬೇರೆ ಬೇರೆ ಸ್ಥಳಗಳಿಗೆ ನಿದ್ದೆಗಣ್ಣಿನಿಂದ ಹೋಗುವದೂ ಉಂಟು. ಅಂಥವರನ್ನು ಎಚ್ಚರಿಸ ಬಾರದು; ಯಾಕಂದರೆ ಅವರು ಹೆದರಿ, ನಷ್ಟ ಪಟ್ಟಾರು. ಮನುಷ್ಯರಂತೆ ಬೇರೆ ಜಂತುಗಳೂ ಮುರ್ಛೆಯಾಗಿ ಬೀಳುವದುಂಟು. ಕೆಲವು ಜಂತುಗಳು ಮೂರು, ನಾಲ್ಕು ತಿಂಗಳು ನಿದ್ರೆ ಮಾಡುವವು; ಕಲ್ಲಿನೊಳಗೆ ಬಹು ಕಾಲ ಇದ್ದ ಕಪ್ಪೆಗಳು ಹೊರಗೆ ಬಿಡಿಸಲ್ಪಟ್ಟು ಬಂದು, ಜೀವಿಸಿದವು.

# 23. ON SOUNDS, LANGUAGE ETC.

# ೨೩. ಶಬ್ದ, ಭಾಷೆಗಳು

"ಸುಲಿದ ಬಾಳೆಯ ಹಂಣಿನಂದದಿ,
ಕಳಿದ ಸಿಗುರಿನ ಕಬ್ಬಿನಂದದಿ,
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ದಾ ||
ಲಲಿತವಹ ಕಂನಡದ ನುಡಿಯಲಿ
ತಿಳಿದು, ತನ್ನಾಳು ತನ್ನ ಮೋಕ್ಷವ
ಘಳಿಸಿ ಕೊಂಡರೆ ಸಾಲದೆ? ಸಂಸ್ಕೃತದಲೇನುಂಟೂ?" ||

ಮತ್ತು

"ಪುರುಷಾಣಾಮ್ ಅನೀಚಾನಾಂ ಸಂಸ್ಕೃತಂ ಸಂಸ್ಕೃತಾತ್ಮನಾಂ" |

ಅಂದರೆ:

ಆತ್ಮಶುದ್ಧರಿಗೆ, ಅನೀಚಪುರುಷರಿಗೆ ಸಂಸ್ಕೃತವು.

ಸಹಿತ್ಯದರ್ಪಣ.

ಶಬ್ದಗಳು ನಾನಾವಿಧವಾಗಿವೆ. ಅವುಗಳಲ್ಲಿ ಕೆಲವು ಸ್ವಭಾವದ ಮೇಲೆ, ಕೆಲವು ಸಾಧನೆಯ ಮೇಲೆ ಬರುತ್ತವೆ. ಸ್ವಾಭಾವಿಕ ಧ್ವನಿ ಸಕಲ ಜಂತುಗಳಿಗೂ ಇರುವದು; ಮನುಷ್ಯರು ಮಾತ್ರ ಸಾಧನೆಯಿಂದ ತಾವು ತಿಳುಕೊಂಡ ಅರ್ಥವುಳ್ಳ ನಾನಾವಿಧವಾದ ಧ್ವನಿಗಳು ಕಲಿತು ಕೊಳ್ಳುವರು. ಕೋಗಿಲೆ ಮೊದಲಾದ ಪಕ್ಷಿಗಳು ಬಹಳ ರಮ್ಯವಾದ ಧ್ವನಿ ಮಾಡುವವು; ಗಿಣಿ ತಾನು ತಿಳಿಯದ ಮಾತು ಆಡಲಿಕ್ಕೆ ಸ್ವಲ್ಪ ಸ್ವಲ್ಪ ಕಲಿಯ ಬಹುದು. ನಾನಾ ಮೃಗಗಳು ನಾನಾವಿಧವಾಗಿ ಸ್ವಭಾವಿಕ ಶಬ್ದ ಮಾಡುವವು. ನಾಯಿ ಬೊಗಳುವದು; ಕುದುರೆಯು ಹೇಷಾರವ ಮಾಡುವದು; ಹುಂಜ ಕಾಲವರಿತು, ಕೂಗುವದು; ಮೇಕೆಯು, ತನ್ನ ಮರಿ ನೂರು ಮರಿಗಳ ನಡುವೆ ಇದ್ದು ಕೂಗಿದಾಗ್ಯೂ, ಅದರ ಕೂಗು ತಿಳಿದು ಕೊಳ್ಳುವದು.

ಸಾರಸ ಪಕ್ಷಿ ಎಂಬ ಒಂದು ಪಕ್ಷಿಯು ಬಹಳ ವಿಧಗಳ ಧ್ವನಿಯ ಕಲಿಯುವದು; ತನ್ನ ಸುತ್ತಲೂ ಚಿಕ್ಕ ಪಕ್ಷಿಗಳು ಇರುವದನ್ನು ನೋಡಿ, ಅವುಗಳ ಹಾಗೆ ಶಬ್ದ ಮಾಡುವದು; ಆಗ್ಯೆ ತಮ್ಮ ಜಾತಿಯ ಪಕ್ಷಿಯೇ ಕೂಗುತ್ತದೆಂದು, ಅವು ಭಾವಿಸಿ ಕೊಂಡು, ಸಮೀಪಕ್ಕೆ ಬಂದರೆ ಶತ್ರುಪಕ್ಷಿಗಳಾದ ಗರುಡ, ಹದ್ದು ಮೊದಲಾದವುಗಳ ಹಾಗೆ ಪುನಹಾ ಧ್ವನಿ ಮಾಡುವದಂತೆ; ಅದನ್ನು ಆ ಸಣ್ಣ ಪಕ್ಷಿಗಳು ಕೇಳಿ, ಭಯಪಟ್ಟು, ಹಾರಿ ಹೋಗುವವಂತೆ; ಹೀಗೆ ಸಾರಸಪಕ್ಷಿಯು ಸರಸವಾಡುವದು.

ಮನುಷ್ಯರು ಈಗ ಬೇರೆ ಬೇರೆ ಮಾತಾಡುತ್ತಾರೆ. ಆದಿಕಾಲದಲ್ಲಿ ಅವರೆಲ್ಲರೂ ಕೂಡಿ ಕಾಂಡು, ಒಂದು ಸ್ಥಳದಲ್ಲಿಯೇ ಇದ್ದು, ತಮಗೆ ಕೀರ್ತಿ ಬರುವ ಹಾಗೆ ಒಂದು ಗೋಪುರವನ್ನು ಕಟ್ಟ ತೊಡಗಿದಾಗ್ಯೆ ಒಂದೇ ಭಾಷೆಯವರಾಗಿದ್ದರು. ತರುವಾಯ ದೇವಾಧೀನದಿಂದ ಜನರು ಪ್ರತ್ಯೇಕಿಸಿದ ಮೇಲೆ ನಾನಾಭೇದವಾದ ಭಾಷೆಗಳು ಉಂಟಾದವು; ಮತಾಚಾರಗಳು ಭಿನ್ನವಾಗುತ್ತಾ ಬಂದವು. ಈಗ ಲೋಕದಲ್ಲಿ ನೂರೈವತ್ತಕ್ಕಿಂತ ಹೆಚ್ಚು ಭಾಷೆಗಳಾಗಿವೆ.

ಸಂಸ್ಕೃತಕ್ಕೂ ವಿಲಾಯತಿಯ ಭಾಷೆಗಳಿಗೂ ಒಂದೇ ಮೂಲ ಉಂಟು. ಸಾದೃಶ್ಯ ತೋರಿಸಲಿಕ್ಕಾಗಿಕೆಲವುಸಂಸ್ಕೃತ, ಇಂಗ್ಲಿಷ, ಜರ್ಮನಿ ಮಾತುಗಳನ್ನುಸರಿ ನೋಡತಕ್ಕದ್ದು.

| ಸಂಸ್ಕೃತ | ಇಂಗ್ಲಿಷ | ಜರ್ಮನಿ |
|---|---|---|
| ಮನುಷ್ಯ | .... | ಮನ್‍ಷ್ |
| ಮಾತೃ (ತಾಯಿ) | ಮಧರ್ | ಮುತ್ತರ್ ಅಥವಾ ಮೋತರ್ |
| ಪಿತೃ | ಫಾತರ್ | ಫಾತೆರ್ |
| ಭ್ರಾತೃ (ಸಹೋದರ) | ಬ್ರಾತರ್ | ಬ್ರೂದರ್ |
| ದುಹಿತೃ (ಮಗಳು) | ಡಾಹ್ತರ್ | ತೊಖ್ತರ್ |
| ಸೂನು (ಮಗ) | ಸನ್ | ಸೋನ್ |
| ವಿಧವೆ | ವಿಡೋ | ವಿತ್ವೆ |
| ಅಂಬೆ (ತಾಯಿ) | ಮಮ್ಮ | ಅಮ್ಮೆ |
| ಸ್ವಸೃ (ಸಹೋದರಿ) | ಸಿಸ್ತರ್ | ಸ್ವೆಸ್ತರ್ |
| ಯುವನ್ (ಯೌವನಸ್ಥ) | ಯಂಗ್ | ಯುಂಗ್ |
| ಪುರುಷ | .... | ಬುರ್ಷ |
| ಸ್ಥೂರೆ (ಹೋರಿ) | .... | ಸ್ತೀರ್ |
| ಉಕ್ಷನ್ (ಎತ್ತು) | ಒಕ್ಸ್ | ಒಕ್ಸ್ |
| ಗೋ | ಕೌ | ಕೂ, ಕೋ |
| ಮೂಷ್ (ಇಲಿ) | ಮೌಸ್ | ಮೌಸ್ |
| ನಾಮ | ನೇಮ್ | ನಾಮೆ |
| ಹೃದಯ | ಹಾರ್ಟ್ | ಹೆರ್ಟ್ಸ್ |
| ದ್ವಾರ | ದೋರ್ | ತೋರ್ |
| ತಾರೆ (ನಕ್ಷತ್ರ) | ಸ್ತಾರ್ | ಸ್ತೆರ್ನ್ |

ಇತ್ಯಾದಿ.

ಮನುಷ್ಯಭಾಷೆ ಶಬ್ದರೂಪವಾಗಿಯೂ ಲಿಖಿತರೂಪವಾಗಿಯೂ ಇರುವದು. ಮೊದಲನೇದು ಶ್ರೋತ್ರೇಂದ್ರಿಯಕ್ಕೆ ವಿಷಯವು; ಎರಡನೇದು ನೇತ್ರಗಳಿಗೆ ಗೋಚರವು.

ಸ್ವರ, ವ್ಯಂಜನಗಳು ಉಳ್ಳ ವರ್ಣಾದಿಗಳು ನಮ್ಮ ಹಾಗೆ ಚೀನಾ ದೇಶದವರಿಗೆ ಇಲ್ಲ, ಅವರ ಬರಹವು ಚಿತ್ರಗಳ ಹಾಗೆ ಇರುವದು. ಅದಕ್ಕುದಾಹರಣೆಯು:



ಹಳೇ ಚೀನಿ ಅಕ್ಷರಗಳು. ಮಿಸ್ರ ದೇಶದ ಪೂರ್ವಾಕ್ಷರಗಳು.

ಈ ಚೀನಿ ಗುರುತುಗಳ ಅರ್ಥವೇನಂದರೆ,

ಮೇಲಿನ ಸಾಲಿನ ಎಡಗಡೆ ಹಿಡಿದು ಬಲಗಡೆಗೆ ಹೋಗುತ್ತಾ ಒಂದೊಂದು ಹೇಳುವ: ಮೊದಲನೇದು ತೋಟ, ಎರಡನೇದು ಗುಡುಗು, ಮೂರನೇದು ಹಲ್ಲುಗಳು, ನಾಲ್ಕನೇದು ಮಂಜು (ಅದು ಸೂರ್ಯನಿಂದಿಳಿಯುವಂತೆ ಕಾಣುತ್ತದೆ), ಐದನೇದು ಮುಖ, ಆರನೇದು ಬಾಯಿ, ಏಳನೇದು ಮೇಲ್ಮಾಳಿಗೆ, ಎಂಟನೇದು ಟೊಂಗಿ, ಒಂಭತ್ತನೇದು ತೊಲೆಗಳು, ಹತ್ತನೇದು (ಸೂರ್ಯಚಂದ್ರಗಳ ರೂಪ) ಪ್ರಕಾಶ, ಹನ್ನೊಂದನೇದು ಮೀನು, ಹನ್ನೆರಡನೇದು (ನೀರಿನ ಶಳವು ತಡವಿದಂತೆ ಕಾಣುತ್ತದೆ) ವಿಪತ್ತು, ಹದಿಮೂರನೇದು (ಏನೂ ಹಿಡಿವ ಕೈಯಾಕಾರ) ನಡಿಸುವದು, ಹದಿನಾಲ್ಕನೇದು ಹುಲ್ಲು, ಹದಿನೈದನೇದು ಅಕ್ಕಿ ಎಂದು ಬರೆಯಲಿಕ್ಕೆ ಬರುತ್ತದೆ. ನಮ್ಮ ಕಾಲದಲ್ಲಿ ಈ ರೂಪಗಳು ಅನೇಕ ಪ್ರಕಾರ ಬದಲಾಗಿವೆ.

ಇಂಥ ಸಂಜ್ಞೆಗಳನ್ನು ಕೂಡಿ, ವಾಕ್ಯಗಳೂ ಸಮಾಸಪದಗಳೂ ರಚಿಸುತ್ತಾರೆ. ಇಷ್ಟು ವಿಚಿತ್ರವಾಗಿರುವ ಈ ಭಾಷೆಯನ್ನು ಕಲಿಯುವದು ಬಹಳ ಪ್ರಯಾಸವಾಗಿರುತ್ತದೆ.



ಈ ಚಿತ್ರದಲ್ಲಿ ಮಿಸ್ರ ದೇಶದ ಹಳೇ ಬರಹವಿರುವ ಎರಡು ಕಲ್ಲುಕಂಭಗಳು ಅವೆ. ಅವು ಕ್ಲೇಯೋಪತ್ರಳೆಂಬ ರಾಣಿಯ ಸೂಜಿಗಳೆನ್ನಿಸಿ ಕೊಂಡು, ಸಿಕಂದ್ರಿಯಾ ಪಟ್ಟಣದಲ್ಲಿವೆ.



## 24. BRUTES

## ೨೪. ಮೃಗಗಳು

“ಮೊದಲೆ ಮರ್ಕಟ, ಮೇಲೆ ಮದ್ಯದ
ಮದವ್ಯಥೆಯು ಹಿಡಿದಿರೆ, ವೃಶ್ಚಿಕ
ತುದಿಯ ಕಾಲಿಗೆ ಕಚ್ಚಿದರೆ ಕುಣಿದಾಡುವಂದದೀ;||
ಅಧಿಕ ಧನ, ಸಂಪತ್ತು, ಯವ್ವನ—
ವದಗಿರಲು, ವನಿತಾದಿ ವಿಷಯಾ—
ಸ್ಪದ ನೆನಸಿ, ಒಳವರಿಯದವಗಾನಂದವೆಂತೆ? ಎಂದಾ,,||



ಕಾಡುಗತ್ತೆ.

ಮೃಗಗಳಲ್ಲಿ ಸಿಂಹವು ಬಹಳ ಧೈರ್ಯವೂ ಪರಾಕ್ರಮವೂ ಉಳ್ಳದ್ದಾಗಿಯೂ, ಆನೆಯು ಅತಿ ಪುಷ್ಟಿಯಾಗಿಯೂ, ನರಿಯು ಬಹು ತಂತ್ರ ಉಳ್ಳದ್ದಾಗಿಯೂ, ಕಪಿಯು ಬಹಳ ಚೇಷ್ಟೆಯುಳ್ಳದ್ದಾಗಿಯೂ ಅವೆ. ಜಿಂಕೆಯ ಕಣ್ಣು ಬಹಳ ಸುಂದರವು; ಸಂವತ್ಸರಕ್ಕೆ ಒಮ್ಮೆ ಅದರ ಕೋಡುಗಳು ಉದರುತ್ತವೆ. ತೋಳವು ಹೊಟ್ಟೆಬಾಕತನ ಉಳ್ಳದ್ದು; ಅದರ ಮಾಂಸವನ್ನು ಮಿಕ್ಕ ಮೃಗಗಳು ಭಕ್ಷಿಸವು. ಆನೆಯ ಕಿವಿಗಳು ಮೊರದ ಹಾಗೆ ಇರುವವು; ಅವುಗಳಿಂದ ಕಂಣುಗಳನ್ನು ಒರಸಿ ಕೊಳ್ಳುತ್ತದೆ. ಮೊಲವು ಕಿವಿಗಳನ್ನು ಹಿಂದಕ್ಕೆ ಮುಂದಕ್ಕೆ ಆಡಿಸುತ್ತಿರುವದು; "ಮೊಲದ ಕಣ್ಣು ಬೇಟೆಗಾರಗೆ ಮುದ್ದೇ"? ಒಂಟೆಯು ನೀರು ಇರುವ ಸ್ಥ



ಅರಬಿ ಒಂಟೆ.

ಳಕ್ಕೆ ಒಂದು ಘಳಿಗೆಯ ದಾರಿ ದೂರ ಇರುವಾಗಲೇ ಘ್ರಾಣೇಂದ್ರಿಯದಿಂದ ನೀರು ಇರುವದೆಂದು, ತಿಳಿದು ಕೊಳುತ್ತದೆ; ಅದು ಕೆಲವು ದಿನ ನೀರು ಕುಡಿಯದೆ ಇರ ಬಹುದು. ಕತ್ತೆ ಸುಂದರವಲ್ಲದಿದ್ದರೂ ಬಹಳ ಶೀವ್ರವಾಗಿ ನಡೆಯದಿದ್ದರೂ ಹಾರೆ

ಹೊತ್ತು, ಬೇಗ ದಣಿಯದಿರುವದರಿಂದ ಬಹಳ ಪ್ರಯೋಜನ ಉಳ್ಳದ್ದಾಗಿದೆ; ಹೋದ ದಾರಿ ಚನ್ನಾಗಿ ನೆನಪು ಮಾಡುವದು; ಕಾಲು ಎಚ್ಚರವಾಗಿ ಇಡುವದು.

"ಕತ್ತೇ ಮೊಲೆಯಲ್ಲಿ ಖಂಡುಗ ಹಾಲಿದ್ದರೇನು?"

ಎಂತ ಹಾಸ್ಯಕ್ಕಾಗಿ ಹೇಳಿದರೂ ಕ್ಷಯರೋಗಿಗಳು ಅದನ್ನು ಕುಡಿದು, ಬಹಳ ಹಿತವೆಂದು ತಿಳುಕೊಳ್ಳುತ್ತಾರೆ.

ನಾಯಿಗಳು ಮನೆಗಳಲ್ಲಿ ಒಳ್ಳೇ ಕಾವಲಿಗಳಾಗಿರುತ್ತವೆ;

"ಕಚ್ಚುವ ನಾಯಿ ಬೊಗಳದು, ಬೊಗಳುವ ನಾಯಿ ಕಚ್ಚದು."

ಬೆಕ್ಕು ಸಹಾ ಮನೆಯದ್ದಾಗಿದೆ; ಯಜಮಾನನಿಗೆ ಸ್ವಲ್ಪ, ಮನೆಗೆ ಬಹಳ ಪ್ರೀತಿ ಮಾಡುವದು. ಅದು ಮರಗಳನ್ನು ಹತ್ತುವದು; ಕತ್ತಲಲ್ಲಿಯೂ ಅದಕ್ಕೆ ಕಣ್ಣು ಕಾಣುತ್ತದೆ; ಉನ್ನತ ಸ್ಥಳದಿಂದ ದುಮುಕುವದಕ್ಕೆ ಪ್ರಯತ್ನಿಸಿದರೆ ಘಾಯ ತಗಲದ ಹಾಗೆ ಕಾಲುಗಳನ್ನು ಕೆಳಮುಖಕ್ಕೆ ಮುದುರಿ ಕೊಂಡು, ದುಮುಕುತ್ತದೆ; ಅದು ಇಲಿಗಳನ್ನು ಉಪಾಯಗಳಿಂದ ಹಿಡಿದು, ಕೊಂದು, ತಿನ್ನುವದು; ಹಾಲು ಕದ್ದು, ಕುಡಿಯುವದು; ನಾಲಿಗೆಯಿಂದ ದೇಹವನ್ನು ನೆಕ್ಕಿ, ಮಲಿನವನ್ನು ಹೋಗಲಾಡಿಸುವದು. ನೀರುನಾಯಿ, ಮೊಸಳೆ ಮೊದಲಾದ ಜಂತುಗಳು ನೀರಿನಲ್ಲಿಯೂ ನೆಲದಲ್ಲಿ



ಇದು ಒಂದು ಜಾತೀ ಹಲ್ಲಿ (Gecko). ಅದರ ಕಾಲಿನ ರಸ ಕೈಗೆ ತಾಗಿದರೆ ಗುಳ್ಳೆಯಾಗುತ್ತವೆ.

ಯೂ ವಾಸ ಮಾಡುವವು. ಮೊಸಳೆ ಮಳಲಿನಲ್ಲಿ ಮೊಟ್ಟೆ ಇಕ್ಕುತ್ತದೆ; ಬಿಸಲಿನ ಕಾವಿನಿಂದ ಆ ಮೊಟ್ಟೆಗಳಲ್ಲಿ ಮರಿಗಳಾಗುವವು; ಹಾವುಗಳೂ ಮುಂಗಲಿಗಳೂ ಮೊಸಳೆಯ ಮೊಟ್ಟೆಗಳನ್ನು ಕದ್ದು ತಿನ್ನುತ್ತವೆ. ಮೊಸಳೆಮರಿಗಳು ಮೊಟ್ಟೆಯಿಂದ ಹೊರಗೆ ಬರುತ್ತಲೇ ಮೆಲ್ಲ ಮೆಲ್ಲನೇ ಹೋಗಿ, ನೀರು ಶೇರುವವು. ಮೊಸಳೆಯು ಎಮ್ಮೆಯ ಹಾಗೆ ನೀರಿನಲ್ಲಿ ಬಿದ್ದು ಇರುವದು. ಅದರ ಬೆನ್ನಿನ ಚರ್ಮವು ಅತಿ ಘ



ಕೊಂಬುಮೃಗ.

ಟ್ಟಿಯಾಗಿರುವದರಿಂದ ತುಪಾಕಿಗುಂಡು ಸಹಾ ಘಾಯ ಮಾಡದು. ಆನೆಗಿಂತ ಸ್ವಲ್ಪ ಸಣ್ಣದಾದ ರಿನಾಜರಸ್ ಎಂಬ ಕೊಂಬುಮೃಗದ ಚರ್ಮವು ಸಹ ಗುಂಡಿಗೆ ಪೆಟ್ಟು ಹತ್ತದಷ್ಟು ಘಟ್ಟಿಯಾಗಿರುತ್ತದೆ. ನೀರುನಾಯಿಗಳು ನದಿತೀರದಲ್ಲಿ ವಿಚಿತ್ರವಾಗಿ ಅಂತಸ್ತುಗಳ ಗೂಡುಗಳನ್ನು ಕಟ್ಟಿಕೊಳ್ಳುತ್ತವೆ. ಮೇಕೆ, ಎತ್ತು, ಕುರಿ ಮೊದ



ಅರಬಿ ಕಾಡುಗುರಿ.

ಲಾದ ನಾಡುಮೃಗಗಳನ್ನು ಜನರು ಹಿಂಡುಹಿಂಡಾಗಿ ಇಟ್ಟುಕೊಂಡು, ಸಾಕುತ್ತಾರೆ. ಸಿಂಹ ವ್ಯಾಘ್ರ ಮೊದಲಾದ ದುಷ್ಟ ಮೃಗಗಳು ಒಂಟಿಯಾಗಿ ಸಂಚರಿಸಿ, ಬೇಟೆ ಆಡುತ್ತವೆ. ಕಣ್ಕಪಟೆ ಮತ್ತು ತೊಗಲುಬಾವಲಿ ಮೃಗವೆಂತಾಗಲಿ ಪಕ್ಷಿಯೆಂತಾಗಲಿ ಹೇಳ ಕೂಡದು; ಗರಿಗಳಿಂದ ಕೂಡಿರದ ತೆಳು ತೊಗಲಿನ ರೆಕ್ಕೆಗಳು ಅವ

ಕ್ಕೆ ಉಂಟು; ಅವಕ್ಕೆ ಹಲ್ಲು ಇರುವದರಿಂದ ನರಿಗಳ ಹಾಗೆ ಕಡಿದು, ತಿನ್ನುತ್ತವೆ. ಮೃಗಗಳ ಹಾಗೆ ಮರಿಗಳನ್ನು ಈದು, ಹಾಲು ಕೊಟ್ಟು, ಕಾಪಾಡಿ, ಹಾರುವ ಸಮಯದಲ್ಲಿ ಕೋತಿಗಳ ಹಾಗೆ ಮರಿಗಳನ್ನು ಪಕ್ಕೆಗಳಲ್ಲಿ ತೆಗದು ಕೊಂಡು, ಹೋಗುವವು. ತೊಗಲುಬಾವಲಿ ಕಾಲುಗುರಿನಿಂದ ಮರದ ಕೊಂಬೆಯನ್ನು ಹಿಡಿದು ಕೊಂಡು, ತಲೆ ಕೆಳಗಾಗಿ ನೇತಾಡುವದು; ಹಗಲಿನಲ್ಲಿ ಸುಮ್ಮಗಿದ್ದು, ರಾತ್ರಿಯಲ್ಲಿ ಮೇವು ಹುಡುಕ ಹೋಗುವದು. ಕಣ್ಣಪಟೆ ಹಾಳುಸ್ಥಳಗಳಲ್ಲಿ ಹಗಲು ಕಳೆದು, ರಾತ್ರೇಲಿ ಹುಳಗಳನ್ನು ಹುಡುಕಿ, ತಿನ್ನುವದು; ತೊಗಲುಬಾವಲಿ ಮುಖ್ಯವಾಗಿ ಹಣ್ಣುಗಳನ್ನು ತಿಂದು, ತೋಪುಗಳಲ್ಲಿ ವಾಸಿಸುವದು. ಬಹಳ ಛಳಿ ಆಗುವಲ್ಲಿ ಕಣ್ಣಪಟೆ ಹೆಚ್ಚು ಕಡಿಮೆಯಾಗಿ ನಾಲ್ಕು ತಿಂಗಳ ವರೆಗೆ ಮರಗಳ ಪೊಟ್ರೆಗಳಲ್ಲಿಯೂ ಹಾಳುಬೀಡುಗಳಲ್ಲಿಯೂ ಇದ್ದು, ಆಹಾರ ತಿನ್ನದೆ, ನಿರ್ಜೀವಪ್ರಾಣಿಗಳಂತೆ ಮೈ ಮರದಿರುವದು.



## 25. THE LION

## ೨೫. ಸಿಂಹವು

"ಸಿಂಹವು ಸಂಹರಿಸಲಾರದೋ?"
ಗಾದೆ.

ಸಿಂಹವು ಬೆಕ್ಕಿನ ಜಾತಿಯೊಳಗಣದು. ಅದು ದಪ್ಪವಾಗಿದ್ದು, ಹೆಚ್ಚು ಕಡಿಮೆಯಾಗಿ ಎಂಟು ಅಡಿ ಉದ್ದವೂ ಮೂರು ಅಡಿ ಎತ್ತರವೂ ಇರುತ್ತದೆ. ಅದರ ಬಣ್ಣ ಒಂದು ತರದ ಹಳದೀ ಕೆಂಪಾಗಿದೆ; ಅದರ ತಲೆ ದೊಡ್ಡದಾಗಿ, ಕತ್ತಿನಲ್ಲಿ ಉದ್ದವಾದ ಕೂದಲುಗಳಿರುವವು; ಅಂಥ ಕೂದಲು ಹೆಣ್ಣು ಸಿಂಹಕ್ಕೆ ಇಲ್ಲ. ಅದರ ಚಿಕ್ಕ ಕಾಲುಗಳು ಬಹಳ ಘಟ್ಟಿಯಾಗಿ, ಉದ್ದ ಉಗುರುಗಳು ಡೊಂಕಾಗಿ ಇರುವವು. ಒಂದು ಕುಪ್ಪಳು ಕುಪ್ಪಳಿಸಿ, ಆನೆ ಕುದುರೆ ಮೊದಲಾದವುಗಳನ್ನು ಕೊಲ್ಲುವದು; ಬೆಕ್ಕು ಇಲಿಯನ್ನು ಹಿಡಿದು ಕೊಂಡು ಹೋಗುವ ಹಾಗೆ ಸಿಂಹವು ಬಹಳ ಸುಲಭವಾಗಿ ಒಂ

ದು ಎತ್ತನ್ನು ಹಿಡಿದು ಕೊಂಡು, ಹೋಗುವದು. ಹಿಂದು ದೇಶದಲ್ಲಿ ಸಿಂಹಗಳು ಅಪರೂಪವಾಗಿವೆ, ಸಿಂಧು ದೇಶದಲ್ಲಿ ಆಗಿಂದಾಗ್ಯೆ ಒಂದು ಶಿಕ್ಕುತ್ತದೆ. ಅಫ್ರಿಕ ಖಂಡದಲ್ಲಿ ಈಗಲೂ ಬಹಳ ಅವೆ.




ಆಸ್ಯದ ಸಿಂಹ.

ಸಿಂಹವು ಗವಿಯಲ್ಲಿರುವಾಗ್ಯೆ ಬಹಳ ಸಾಧುವಾಗಿಯೂ ಗಂಭೀರವಾಗಿಯೂ ಇರುವ ಹಾಗೆ ಕಾಣಿಸುವದು; ಘರ್ಜಿಸುವಾಗ್ಯೆ ಕೆದರುಗೂದಲನ್ನು ಝಾಡಿಸುತ್ತಾ, ಹ

ಲ್ಲುಗಳನ್ನು ತೋರಿಸುತ್ತಾ, ಬಾಲದಿಂದ ಬೆನ್ನು ಬಡ ಕೊಳ್ಳುತ್ತಾ, ಕಣ್ಣುಗಳು ಬೆಂಕಯ ಕಿಡಿಗಳ ಹಾಗೆ ಕೆಂಪೇರಿ, ತೇಗುವದು; ಅದರ ಘರ್ಜನೆಯು ಮೇಘಘರ್ಜನೆಗಳ ಹಾಗೆ ಇರುವದು. ಹಗಲುಹೊತ್ತು ಕಾಡಿನಲ್ಲಿ ಸುಮ್ಮನೆ ಬಿದ್ದು ಇದ್ದು, ರಾತ್ರೆಯ ಹೊತ್ತು ಆಹಾರದ ನಿಮಿತ್ತವಾಗಿ ತಿರುಗಾಡುತ್ತಾ, ಮೃಗಗಳನ್ನು ಕೊಳ್ಳೆ ಮಾಡುವದು. ಆಹಾರಕ್ಕೆ ತಕ್ಕ ಕಾಡ್ಗುರಿ ಮೇಕೆ ಮುಂತಾದ ಮೃಗಗಳನ್ನು ನೋಡಿದರೆ ತನ್ನ ಸಮೀಪಕ್ಕೆ ಬರುವ ವರೆಗೂ ನೆಲದಲ್ಲಿ ಬಾಗ್ಗಿ ಕೊಂಡು, ಸಮೀಪಕ್ಕೆ ಬರುತ್ತಲೆ ಒಂದೇ ಹಾರು ಹಾರಿ, ಹಿಡಿದು ಕೊಳ್ಳುವದು; ಹೀಗೆ ಕೆಲವು ಸಮಯದಲ್ಲಿ ೨೦ ಅಡಿ ದೂರಕ್ಕೆ ಹಾರುವದು. ಎರಡು ಮೂರು ಸಾರಿ ಹಾರಿ, ಮೃಗ ಶಿಕ್ಕದೆ ಹೋದರೆ, ಸ್ತಬ್ಧವಾಗಿ ನೆಲದಲ್ಲಿ ಬಿದ್ದು ಕೊಂಡು, ಬೇರೆಯಾವದಾಗಲಿ ಮೃಗವು ಬರುವದೇನೋ? ಎಂದು ಹೊಂಚಿ ಕೊಂಡು, ಅದು ಬರುತ್ತಲೆ ಹಿಡಿದು ಕೊಳ್ಳುತ್ತದೆ. ಆನೆಯು ಬಹಳ ದೊಡ್ಡದಾಗಿ ಬಲಿಷ್ಟವಾಗಿದ್ದರೂ ಸಿಂಹವನ್ನು ನೋಡಿದರೆ ಭಯ ಪಟ್ಟು, ಓಡಿ ಹೋಗುವದು. ಹುಲಿಯ ಹಾಗೆ ಸಿಂಹ ಮರ ಹತ್ತುವದಿಲ್ಲ. ಮರಿಯಾಗಿದ್ದಾಗ ಮನುಷ್ಯರು ಪಾಟ ಮಾಡಿದ ಸಿಂಹವು ಬೆಕ್ಕಿನ ಹಾಗೆ ಆಡುತ್ತಿರುವದು. ಈಗ ಲೋಕದಲ್ಲಿ ಮುಂಚಿನಷ್ಟು ಸಿಂಹವಿಲ್ಲ; ಪೂರ್ವದಲ್ಲಿ ರೂಮ ಪಟ್ಟಣದ ಒಬ್ಬ ಅರಸನು ಆಟಕ್ಕಾಗಿ ೪೦೦ ಸಿಂಹಗಳನ್ನು ಇಟ್ಟು ಕೊಂಡನು.

ಹಿಂದು ದೇಶದಲ್ಲಿ ಬಹು ಕಡಿಮೆಯಾದ ಸಿಂಹಗಳ ಸುದ್ದಿಯ ಒಂದು ಮಾತು ಕೇಳಿರಿ. ತೀಮೂರ್ ಎಂಬ ಪ್ರಸಿದ್ಧ ಪಾದಶಾಹನು ಕ್ರಿಸ್ತಶಕದ ೧೩೯೮ನೇ ವರುಷದಲ್ಲಿ ದಿಲ್ಲಿಯ ಲೂಟಿ ಮಾಡಿ, ತನ್ನ ದೇಶಕ್ಕೆ ತಿರಿಗಿ ಹೋಗುತ್ತಿರಲು, — ಚಂದ್ರಭಾಗನದಿಯ ಪಶ್ಚಿಮ ತೀರದಲ್ಲಿ ಒಂದು ಸಿಂಹ ಅವನೆದುರಿಗೆ ಬಂತು; ಆಗ ಅವನ ಹತ್ತರದ ಶೈಖನು ಅದನ್ನು ಕೊಂದು ಬಿಟ್ಟನು. ಈಚೆ ೧೮೧೦ನೇ ವರುಷದಲ್ಲಿ ಹಾಸಿ ಪಟ್ಟಿಪ್ರಾಂತ್ಯದೊಳಗೆ ಒಂದು ಗಂಡು, ಒಂದು ಹೆಣ್ಣು ಸಿಂಹ ಕೊಲ್ಲಲಾಯಿತು. ೧೮೩೦ನೇ ವರುಷದಲ್ಲಿ ಖಂಬಾಯತ್ ಕೊಲ್ಲೀ ಮೇಲ್ಗಡೆ ಕಾಪ್ತನ್ ಸ್ಮೀ ಒಂದೇ ತಿಂಗಳೊಳಗೆ ೧೧ ಸಿಂಹಗಳನ್ನು ಸಂಹರಿಸಿ, ಒಂದು ಚರ್ಮವನ್ನು ಇಂಗ್ಲಾಂಡಿಗೆ ಕಳುಹಿಸಿದನು. ಅದರ ಮೇಲೆಯೂ ಆ ಕಾಪ್ತನ್ ಥಾರೆ ಶೋಧಿಸಿದ ಎಲುಬುಗಳ ಮೇಲೆಯೂ ಗೊತ್ತಾದದೇನಂದರೆ — ಅಫ್ರಿಕದ ಸಿಂಹ ಮತ್ತು ಹಿಂದು ದೇಶದ ಸಿಂಹ ಒಂದೇ ಜಾತಿಯದು.

## 26. THE TIGER

## ೨೬. ಹುಲಿಯು

“ದುಷ್ಟ ವ್ಯಾಘ್ರನ ಕೈಯ ಮುಟ್ಟಿ, ಹಿಡಿತರ ಬಹುದು;
ಅಟ್ಟಿ ಬಹ ಮದಕರಿಯ ಕಟ್ಟ ಬಹುದು;||
ಕೃಷ್ಣಸರ್ಪನ ಹುತ್ತ ಕಲಕಿ, ಜೀವಿಸ ಬಹುದು;
ದುಷ್ಟಾತ್ಮರಾದವರ ಬಿಟ್ಟು, ಕಳೆ, ಮನವೇ!,,||



ಹುಲಿ.

ಹುಲಿಯು ಸಿಂಹದಷ್ಟು ದೊಡ್ಡದಾಗಿದ್ದು, ಕಪ್ಪು ಪಟ್ಟೆಗಳು ಬೆರೆದ ಹಳದಿವರ್ಣ ಉಳ್ಳದ್ದಾಗಿದೆ. ಇದರಲ್ಲಿ ಬೆಕ್ಕಿನ ಕೆಲವು ಗುಣಗಳು ಕಾಣಿಸುವವು. ಹುಲಿಗಳಲ್ಲಿ ನಾಲ್ಕೈದು ಭೇದಗಳಿರುತ್ತವೆ; ಅವುಗಳಲ್ಲಿ ದೊಡ್ಡ ಹುಲಿಯು ಪ್ರಧಾನವಾಗಿದ್ದು, ಹೆಬ್ಬುಲಿ ಅನ್ನಿಸಿ ಕೊಳ್ಳುತ್ತದೆ. ಮರಿಗಳನ್ನು ಹಿಡತಂದು, ಬೆಕ್ಕುಗಳ ಹಾಗೆ ಇಟ್ಟು ಕೊಂಡು, ಸಾಕುತ್ತಾರೆ.

ಹುಲಿ ಕಪಟ ಉಳ್ಳದ್ದು. ಅದಕ್ಕೆ ದೃಷ್ಟಾಂತವಾಗಿ ಒಂದು ಕಟ್ಟುಕಥೆಯನ್ನು ಹೇಳುತ್ತಾರೇನಂದರೆ: ಒಂದು ಮುದಿಹುಲಿಯು ತನ್ನ ಆಹಾರವನ್ನು ಸಂಪಾದಿಸಿ ಕೊಳ್ಳುವ ಶಕ್ತಿ ಇಲ್ಲದೆ ಇರಲಾಗಿ,—ಒಂದು ಹೊಳೆಯ ಕರೆಯಲ್ಲಿ ಸ್ನಾನ ಮಾಡಿ ಕೈಯ್ಯಲ್ಲಿ ದರ್ಭೆಹುಲ್ಲನ್ನು ಹಿಡುಕೊಂಡು ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ಬ್ರಾಹ್ಮಣನನ್ನು ನೋಡಿ, ಎಲೇ ಬ್ರಾಹ್ಮಣನೇ, ಇಗೋ ಬಂಗಾರದ ಬಳೆ ಬಂದು ತೆಗದುಕೋ ಎಂದು, ಚಿನ್ನದ ಬಳೆಯನ್ನು ತೋರಿಸಿತು. ಆ ಮಾತನ್ನು ಬ್ರಾಹ್ಮಣನು ಕೇಳಿ, ಹುಲಿಯನ್ನು ನೋಡಿ, ತನ್ನೊಳಗೆ ಹೀಗೆ ಚಿಂತಿಸಿದನು: ಈ ಬಳೆಯು ನನ್ನ ಕೋರಿಕೆಯದ್ದೇ; ಆದಾಗ್ಯೂ ವ್ಯಾಘ್ರವು ಘಾತಕಮೃಗವಾದ್ದರಿಂದ ಅದರ ಸಮೀಪಕ್ಕೆ ಹೋಗ ಬಾರದೆಂದು, ಅನ್ನುತ್ತಾರೆ; ಆದರೆ ಅನಿತ್ಯವಾದ ಪ್ರಾಣವನ್ನು ಈಗ ತಪ್ಪಿಸಿ ಕೊಂಡರೂ ಮತ್ತೊಂದು ಸಮಯದಲ್ಲಿ ಹ್ಯಾಗಾದರೂ ಸಾಯ ಬೇಕು; ಆದಪರಿಂದ ಈ ಬಳೆಗಾಗಿ ಹೋಗಿ, ಒಂದು ಪ್ರಯತ್ನ ಮಾಡಿ ನೋಡೋಣ ಎಂದು, ನಿಶ್ಚೈಸಿ ಕೊಂಡು, ಹುಲಿರಾಯನೇ, ನೀನು ಹೇಳಿದ ಹೊಂಬಳೆಯು ಎಲ್ಲಿ? ತೋರಿಸೆಂದು ಕೇಳಿದನು. ಹುಲಿಯು ಬಳೆಯನ್ನು ಕೈಯಲ್ಲಿ ಎತ್ತಿ ಹಿಡಿದು, ಇಗೋ ನೋಡೆಂದು, ಕೈ ನೀಡಿ, ತೋರಿಸಿತು. ಆಗ್ಯೆ ಬ್ರಾಹ್ಮಣನು, ನಾನು ನಿನ್ನನ್ನು ಹ್ಯಾಗೆ ನಂಬಲಿ? ಎಂತ ಹೇಳಲು,—ವ್ಯಾಘ್ರವಿಂತೆಂದಿತು: ನಾನು ನದಿಯಲ್ಲಿ ನಿತ್ಯ ಸ್ನಾನ ಮಾಡಿ ದಾನ ಕೊಡುತ್ತಿರುವ ವೃದ್ಧನು; ನನಗೆ ಉಗುರುಗಳಿಲ್ಲ; ಹಲ್ಲುಗಳು ಬಿದ್ದು ಹೋದವು; ನನ್ನಲ್ಲಿ ನಿನಗೆ ನಂಬಿಕೆ ಇಲ್ಲದಿರುವದ್ಯಾಕೆ? ಯಾಗ, ಅಧ್ಯಯನ, ದಾನ, ತಪಸ್ಸು, ಸತ್ಯ, ಧೃತಿ, ಕ್ಷಮೆ, ಅಲೋಭ ಎಂಬ ಎಂಟು ಧರ್ಮಗಳ ತಿಳಿದವನಾದದರಿಂದ ಬಹಳ ಅಪೂರ್ವವಾದ ಈ ಆಭರಣವನ್ನು ನಿನಗೆ ದಾನ ಕೊಡ ಬೇಕೆಂದು, ನೆನಸಿದೆನು; ಇದರಿಂದಲೇ ನನ್ನಲ್ಲಿ ದುರ್ಗುಣಗಳು ಇಲ್ಲವೆಂದೂ ಸದ್ಗುಣಗಳು ಇರುವವೆಂದೂ ತಿಳಿದು ಕೊಳ್ಳ ಬಹುದು, ನೋಡಪ್ಪಾ! ಬ್ರಾಹ್ಮಣನು, ವ್ಯಾಘ್ರವು ಮನುಷ್ಯರನ್ನು ಕೊಂದು ತಿನ್ನುತ್ತದೆಂದು ಲೋಕದಲ್ಲಿ ಹೇಳುತ್ತಾರೆ ಎಂದು, ಹೇಳಿದನು. ಹುಲಿಯು ಅದನ್ನು ಕೇಳಿ, ಹೀಗಂದಿತು: ನಾನು ಧರ್ಮಶಾಸ್ತ್ರವನ್ನು ತಿಳಿದವನಾಗಿದ್ದೇನೆ; ಸಾಧುಗಳು ಸ್ವಪ್ರಾಣದ ಹಾಗೆಯೇ ಇರುತ್ತಾರೆ, ಇತರರೆಂದು ಎಣಿಸ

೬*

ಲಾಗದು, ಸರ್ವ ಪ್ರಾಣಿಗಳಲ್ಲಿಯೂ ದಯವಿಡ ಬೇಕು, ಪರರ ಸುಖ ದುಖ್ಖಗಳು ತಮ್ಮ ಸುಖ ದುಖ್ಖಗಳೆಂದು, ಎಣಿಸ ಬೇಕೆಂಬದಾಗಿ ಶಾಸ್ತ್ರಗಳು ಹೇಳುತ್ತವೆ; ನೀನು ಬಹಳ ದರಿದ್ರನಾದದರಿಂದ ನಿನಗೆ ಈ ದಾನವನ್ನು ಕಾಡ ಬೇಕೆಂದು, ನೆನಸಿದ್ಧೇನೆ; ಬಡವರಿಗೆ ದಾನ ಮಾಡ ಬೇಕಲ್ಲದೆ, ಧನವಂತರಿಗಲ್ಲ; ರಾಗ ಉಳ್ಳವನಿಗೆ ಔಷಧ ಕಾಡ ಬೇಕಲ್ಲದೆ ರಾಗವಿಲ್ಲದವನಿಗೆ ಕಾಡುವದು ಅವಶ್ಯವಿಲ್ಲ; ಆದದರಿಂದ ನೀನು ಈ ಹಾಳೆಯಲ್ಲಿ ಸ್ನಾನ ಮಾಡಿ ಬಂದು, ಈ ಬಳೆಯನ್ನು ತೆಗದು ಕಾಂಡು ಹಾಗು. ಈ ವಿವೇಕದ ಮಾತುಗಳನ್ನು ಬ್ರಾಹ್ಮಣನು ಕೇಳಿ, ನಂಬಿ, ಹಾಳೆಯಲ್ಲಿ ಸ್ನಾನ ಮಾಡುವದಕ್ಕೆ ಹಾಗಿ, ಜಾರಿ, ಹೆಚ್ಚು ಕೆಸರಿನಲ್ಲಿ ಕಾಲು ಹೂಳಿ ಕಾಂಡು, ಹಾರಗೆ ಬರಲಾರದೆ, ಕಷ್ಟ ಪಡುತ್ತಿರುವಾಗ ಹುಲಿಯು ನಾಡಿ, ಹೇಳಿತು: ಬ್ರಾಹ್ಮಣನೇ ಹೆದರ ಬೇಡ, ನಿನ್ನನ್ನು ಕೆಸರಿನಿಂದ ಬಿಡಿಸುವೆನೆಂದು, ಧೈರ್ಯದ ಮಾತು ಹೇಳುತ್ತಾ, ಮೆಲ್ಲಗೆ ಹತ್ರ ಹಾಗಿ, ಅವನನ್ನು ಹಿಡಿದು ಕಾಂಡಿತು. ಆಗ ಆ ಬ್ರಾಹ್ಮಣನು ವ್ಯಾಕುಲದಿಂದ ತನ್ನಲ್ಲಿ ಹೇಳಿ ಕಾಂಡನು: ವೇದಾಧ್ಯಯನ ಮಾಡಿ ಧರ್ಮಶಾಸ್ತ್ರಗಳ ಓದಿದವರಾದರೂ ದುಷ್ಟರಾಗಿದ್ದರೆ, ಅವರ ಮಾತುಗಳನ್ನು ನಂಬ ಬಾರದು; ಅವರು ಎಷ್ಟು ಓದಿದರೂ ಅವರು ದುಷ್ಟ ಸ್ವಭಾವವನ್ನು ಬಿಡರು; ಆದರೂ ಮನುಷ್ಯರಿಗೆ ಅತ್ಯಾಶೆ ಇರ ಬಾರದು; ಈಗ ನನಗೆ ಬಂದ ಆಪತ್ತಿಗೆ ಅತ್ಯಾಶೆಯೇ ಕಾರಣವಲ್ಲವೇ? ಎಂದು ಹೇಳಿ, ತಲ್ಲಣಿಸಿದನು. ಆದರೆ ಹುಲಿಯು ಅವನ ಮಾತುಗಳನ್ನು ಲಕ್ಷ್ಯ ಮಾಡದೆ, ಅವನನ್ನು ಕಾಂದು, ಭಕ್ಷಿಸಿತು. ಆದದರಿಂದ ಕಣ್ಣಿನಿಂದ ಕಂಡರೂ ಪರಾಮ್ಮರಿಸಿ ನಾಡ ಬೇಕು. ಹಾಗೆ ಮಾಡಿದರೆ ಕೇಡು ಸಂಭವಿಸಲಾರದು. ಅತ್ಯಾಶೆ ಎಲ್ಲಾ ಕೇಡಿಗೂ ಮೂಲವಾಗಿದೆ.

"ಅತ್ಯಾಶಾ ಬಹು ದುಃಖಾಯ |
ಅತಿ ಸರ್ವ್ವತ್ರ ವರ್ಜಯೇತ್„ ||
ಅಂದರೆ:
ಅತಿ ಆಶೆಯು ಬಹಳ ದುಖ್ಖದ್ದು;
ಹೆಚ್ಚು ಎಲ್ಲಿಯೂ ಬಿಡ ಬೇಕು.

# 27. THE ELEPHANT

## ೨೭. ಆನೆಯು

“ಕರ್ತವ್ಯಾನ್ಯೇವ ಮಿತ್ರಾಣಿ ಸಬಲಾನ್ಯಬಲಾನ್ಯಪಿ |
ಹಸ್ತಿಯೂಥಂ ವನೇ ಬದ್ಧಂ ಮೂಷಕೈಃ ಪರಿಮೋಕ್ಷಿತಂ„ ||

ಅಂದರೆ:

ದೊಡ್ಡವರ, ಚಿಕ್ಕವರ ಸಹ ಸ್ನೇಹ ಮಾಡ ಬೇಕು.
ಕಾಡಿನಲ್ಲಿ ಕಟ್ಟಲ್ಪಟ್ಟ ಆನೆಹಿಂಡು ಇಲಿಗಳಿಂದ ಬಿಡಿಸಲ್ಪಟ್ಟ ಹಾಗೆ.



ಆನೆ.

ಆನೆ ಮಿಕ್ಕ ಮೃಗಗಳಿಗಿಂತ ದೊಡ್ಡದಾಗಿಯೂ ಮನುಷ್ಯರಿಗೆ ಪ್ರಯೋಜನ ಕರವಾಗಿಯೂ ಇದೆ. ಅದರ ಶರೀರವು ಘಾತ್ರವಾಗಿ, ಕಾಲುಗಳು ಕಂಬಗಳ ಹಾಗೆ ಅವೆ; ಕಣ್ಣುಗಳು ಬಹಳ ಸಣ್ಣವಾಗಿದ್ದರೂ ಬಹಳ ಸೂಕ್ಷ್ಮವಾದ ಪದಾರ್ಥಗಳನ್ನು ಸಹಾ ಚನ್ನಾಗಿ ನೋಡುತ್ತವೆ; ಕಿವಿಗಳು ಮೊರದ ಹಾಗೆ ಅಗಲವಾಗಿರುವವು; ಕುತ್ತಿಗೆ ಸಣ್ಣದಾದಾಗ್ಯೂ ಬಹಳ ಬಲ ಉಳ್ಳದ್ದಾಗಿ, ದೊಡ್ಡ ತಲೆಯನ್ನು ಹೊತ್ತು ಕೊಳ್ಳುತ್ತದೆ; ಸೊಂಡಿಲವು ವನಿಕೆಯ ಹಾಗೆ ಅದೆ; ಅದರಿಂದ ಕೊಂಬೆ ಮೊದಲಾದವುಗಳನ್ನು ಮುರಿದು ಕೊಂಡು, ಎಲೆಗಳನ್ನು ತರಿದು, ಭಕ್ಷಿಸುತ್ತದೆ; ನೊಣಗಳನ್ನು ಓಡಿಸುವದಕ್ಕೆ ಅದರಿಂದ ರೆಂಬೆಗಳನ್ನು ಚಾಮರದಂತೆ ತನ್ನ ಮೈಯ ಸುತ್ತಲೂ ತಿರುಗಿಸಿ ಕೊಳ್ಳುವದು. ಸೊಂಡಿಲದ ಸೊಳ್ಳೆಗಳಿಂದ ನೀರು ಶೇದಿ, ಬಾಯ್ಯೊಳಗೆ ಹ್ಯಾಕೊಂಡು, ಕುಡಿಯುವದು. ಸೊಂಡಿಲವು ಬಹಳ ಘಪ್ಪವಾಗಿದ್ದಾಗ್ಯೂ ಸೂಕ್ಷ್ಮವಾ

ದ ವಸ್ತುಗಳನ್ನು ಸಹಾ ಅದರ ತುದಿಯಲ್ಲಿರುವ ಬೆರಳಿನಿಂದ ಎತ್ತುವದು. ಈ ದೇಶದಲ್ಲಿ ಗಂಡುಆನೆಗಳಿಗೆ ಮಾತ್ರ ಕೊಂಬುಗಳುಂಟು. ಅಫ್ರಿಕದ ಆನೆಗಳಿಗೆ ಮುಖ್ಯವಾಗಿ ಗಡ್ಡೆ ಮೊದಲಾದವುಗಳನ್ನು ಅಗಿದು ತಿನ್ನುವ ಸ್ವಭಾವ ಇರುವದರಿಂದ ಅವಶ್ಯವಾದ ಕೊಂಬುಗಳು ಅಲ್ಲಿರುವ ಹೆಣ್ಣುಆನೆಗಳಿಗೆ ಸಹ ಅವೆ. ನೀರಿನಲ್ಲಿ ಮುಳುಗುವದು ಆನೆಗಳಿಗೆ ಬಹಳ ಸಂತೋಷಕರವು; ನದಿಗಳಲ್ಲಿಯೂ ಮಡುವುಗಳಲ್ಲಿಯೂ ಮುಳುಗುವಾಗ ಸೊಂಡಿಲದಿಂದ ನೀರೆತ್ತಿ, ಚಲ್ಲಿ ಕೊಳ್ಳುವವು.

ಪಳಗಿಸಿದ ಆನೆಯು ಬಹಳ ಸಾಧುವಾಗಿ, ವಿವೇಕ ಉಳ್ಳದ್ದಾಗಿರುತ್ತದೆ; ಅಕ್ಕಿ ತೆಂಗಿನ ಕಾಯಿ ಮೊದಲಾದವುಗಳನ್ನು ತಿನ್ನುತ್ತದೆ; ಅದು ತಿಂದು ಬಿಟ್ಟ ಬೇಲದ ಕಾಯಿ ಬುರುಡೆ ಮಾತಿಗೆ ಗಾದೆಯಾಗಿದೆ, ಏನಂದರೆ

"ಆನೆ ತಿಂದ ಬೇಲದ ಕಾಯಿ ಹಾಗೆ,,

ತನ್ನ ಹೆಗ್ಗತ್ತಿನ ಮೇಲೆ ಕೂತಿರುವ ಮಾವಟಿಗನ ಸೌಜ್ಞೆಗಳ ಮೇರೆಗೆ ಅವನ ಅಭಿಪ್ರಾಯಗಳನ್ನು ತಿಳುಕೊಂಡು, ಅಂಕುಶಪ್ರಯೋಗಕ್ಕೆ ಒಳ ಪಟ್ಟು, ನಡಿಯುವದು. ಮನುಷ್ಯರು ಹತ್ತುವದಕ್ಕೆ ಬಂದಾಗ ಮೊಣಕಾಲು ಆಧಾರ ಕೊಟ್ಟು, ಹತ್ತಿಸಿ ಕೊಳ್ಳುವದು; ಕೆಲವು ಸಮಯಗಳಲ್ಲಿ ಶಕ್ತಿ ಇಲ್ಲದವರನ್ನು ಕೈ ಹಿಡದೆತ್ತಿ, ಬೆನ್ನಿನ ಮೇಲೆ ಇಟ್ಟು ಕೊಳ್ಳುವದು.

ಅದು ನಾನಾ ವಿಧವಾದ ಕೆಲಸ ಮಾಡುವದು. ಆನೆಯು ಆರು ಕುದುರೆಗಳ ಶಕ್ತಿಯುಳ್ಳದ್ದಾದ್ದರಿಂದ ಪೂರ್ವದ ಧೊರೆಗಳು, ಫಿರಂಗಿ ತುಪಾಕಿಗಳು ಇಲ್ಲದಾಗ, ಆನೆಗಳನ್ನು ಯುದ್ಧಕ್ಕೆ ವೈಯುತ್ತಿದ್ದರು. ಅವು ಕಬ್ಬಿಣದ ಗದೆಗಳಿಂದ ಶತ್ರುಸೈನ್ಯವನ್ನು ಸದೆಬಡಿಯುತ್ತಿದ್ದವೆಂದು, ಪೂರ್ವಿಕರು ಹೇಳಿದ್ದಾರೆ. ಪ್ರಕೃತದಲ್ಲಿ ಭಾರ ಹೊರುವದಕ್ಕೆ ಉಪಯೋಗಿಸುತ್ತವೆ. ಅರಸುಗಳು ಮೊದಲಾದವರು ಅವುಗಳ ಮೇಲೆ ಅಂಬಾರಿ ಹಾಕಿ, ಕೂತು ಕೊಂಡು, ಹೋಗುತ್ತಾರೆ. ರಾಜರು ಹತ್ತುವಂಥ ಗಜಗಳಿಗೆ ಪಟ್ಟದ ಆನೆಗಳೆಂದು, ಹೆಸರು. ಆಸ್ಯ, ಅಫ್ರಿಕ ಖಂಡಗಳ ಉಷ್ಣ ಪ್ರದೇಶಗಳಲ್ಲಿರುವ ಕೆಲವು ಆನೆಗಳು ನೂರ ಇಪ್ಪತ್ತು ವರುಷ ಜೀವಿಸುತ್ತವೆ.

"ಸ್ಪೃಶನ್ನಪಿ ಗಜೋ ಹಂತಿ ಜಿಘ್ರನ್ನಪಿ ಭುಜಂಗಮಃ |
ಹಸನ್ನಪಿ ನೃಪೋ ಹಂತಿ ಮಾನಯನ್ನಪಿ ದುರ್ಜನಃ,, ||

ಅಂದರೆ:

ಮುಟ್ಟಿದರೆ ಆನೆ ಕೊಲ್ಲುತ್ತದೆ, ಮೂಸಿದರೆ ಸರ್ಪ;
ನಕ್ಕರೆ ಅರಸನು ಕೊಲ್ಲುತ್ತಾನೆ, ಮಾನ ಕೊಟ್ಟರೆ ದುರ್ಜನ.

## 28. THE CAMEL

## ೨೮. ಒಂಟೆಯು

"ಉಸುಬುಕಾಡಿಗೆ ಹಡಗದಂತದು.—
ತುಸುವು ಮಾತ್ರವೆ ದಣುವ ಚಿಂತಿಸಿ,
ಬಿಸಲಿನೊಳ್ ತೃಷೆ ತಾಳಿ ಒಂಟೆಯು ನಡದು ಜನ ಬೀಳೇ,॥
ಹಸಿಯು ಮೇವಿಲ್ಲದಿರೆ ಮುಳ್ಳನು
ಹಸಿವೆಯಲಿ ತಿನ್ನುವದು, ಕೇಳ್ರೈ
ಯೆಸದಿರುವದದು ಪಶುಗಳೊಳಗತಿ ತಾಳ್ಮೆ ಗುಣದಿಂದಾ,,॥



ಅರಬಿಯರ ಬಿಡಾರ.

ಒಂಟೆಯು ಬಹಳ ಉದ್ದವಾಗಿಯೂ ಗೂನುಬೆನ್ನಾಗಿಯೂ ಕತ್ತು ಡೊಂಕಾಗಿಯೂ ತಲೆ ಚಿಕ್ಕದಾಗಿಯೂ ಇರುವದರಿಂದ ನೋಟಕ್ಕೆ ವಿಕಾರವಾಗಿ ಕಾಣಿಸುತ್ತದೆ; ಆದರೂ ಇದು ಹಲವು ಕೆಲಸಗಳಿಗೆ ಉಪಯೋಗಿಸುವದು. ಅರಬಿಯರು ಅದರ ಹಾಲು ಕುಡಿಯುತ್ತಾರೆ; ಅದರ ಕೂದಲುಗಳಿಂದ ಒಂದು ವಿಧದ ಕಂಬಳಿಯನ್ನು ನೇಯುವರು; ಹೊರೆ ಹೊರಿಸುವರು. ಅದು ಎರಡು ಮೂರು ದಿವಸ ನೀರು ಕುಡಿಯದೆ, ನಡಿಯುವದು; ಯಾಕಂದರೆ ಅದರ ಹೊಟ್ಟೆ

ಯೊಳಗೆ ನೀರು ಹೆಚ್ಚು ಕಾಲ ಹಿಡಿಯು ತಕ್ಕ ಒಂದು ಚೀಲ ಇರುತ್ತದೆ. ಪ್ರಯಾಣದ ಆರಂಭಕ್ಕೆ ಮೊದಲಾಗಿಯೇ ತನಗೆ ಬೇಕಾದಷ್ಟು ನೀರು ಕುಡಿದು, ಚೀಲದಲ್ಲಿ ತುಂಬಿಟ್ಟು ಕೊಳ್ಳುವದರಿಂದ ಬಾಯಿ ಬೇಗ ಆರುವದಿಲ್ಲ. ಮುಳ್ಳುಗಿಡವನ್ನು ಕಂಡರೆ ಬಹಳ ಆತುರದಿಂದ ತರಿದು, ಭಕ್ಷಿಸುವದು. ಆಹಾರವು ಹುಟ್ಟದ ಉಸುಬಿನ ಅರಣ್ಯಸ್ಥಳದಲ್ಲಿ ಹಸಿವೆ ತಡಕೊಂಡು, ಕೆಲವು ದಿನಗಳು ಹೋಗುವದಲ್ಲದೆ, ಮೇವು ಶಿಕ್ಕದ ಸಮಯದಲ್ಲಿ ಹೊಟ್ಟೆಯಲ್ಲಿರುವ ಕೊಬ್ಬು ಕರಗಿ, ಅದರ ಕ್ಷುಧೆಯು ತೀರುವದು; ಆದರೆ ಸೊರಗುವದು ತಪ್ಪುವದಿಲ್ಲ.

ಒಂಟೆಯು ನಾಲ್ವತ್ತು ಮಣುವಿನ ಹೊರೆಯನ್ನು ಹೊರುವದು. ಭಾರವನ್ನು ಹೇರುವಾಗ ಮೊಳಕಾಲು ಮಡಿಸಿ, ಕೂತು ಕೊಂಡು, ಹೇರಿ ಆದ ಮೇಲೆ ಎದ್ದು ನಡಿಯುವದು. ಅದರ ಕಾಲುಗಳಿಗೆ ಘಾಯವಾಗದ ಹಾಗೆ ತೊಗಲಿನ ಬಿಲ್ಲೆಗಳನ್ನು ಕಟ್ಟುತ್ತಾರೆ. ಅದು ಬಹಳ ಸಾಧುವಾದ ಮೃಗವಾಗಿದ್ದರೂ ಶಕ್ತಿ ಮೀರಿದ ಭಾರವನ್ನು ಹೊರಿಸಿದರೆ ಕಡಿಮೆ ಮಾಡುವನಕ ಎದ್ದು ಹೋಗುವದಿಲ್ಲ, ಅಥವಾ ತನ್ನ ಮೇಲೆ ಅಂತಃಕರಣ ಹುಟ್ಟುವ ಹಾಗೆ ದುಖ್ಖಧ್ವನಿಯಿಂದ ಕೂಗುವದು. ಮಾರ್ಗಸ್ಥರು ಒಂಟೆಗಳ ಮೇಲೆ ಹತ್ತಿ ಕೊಂಡು, ಭಯಂಕರವಾದ ಅಡವಿಗಳಲ್ಲಿ ಸಹ ಬಹಳ ಸುಲಭವಾಗಿ ಹಾದು ಹೋಗುವರು. ಕೆಲವು ದೇಶಗಳಲ್ಲಿ ವರ್ತಕರು ಒಂಟೆಗಳ ಮೇಲೆ ಸರಕುಗಳನ್ನು ಹೇರಿ ಕೊಂಡು, ದೂರ ದೇಶಗಳಿಗೆ ಹೋಗುವದರಿಂದ ಅವುಗಳು ಅಡವಿಯ ನಾವೆಗಳೆನ್ನಲ್ಪಡುವವು. ಸಂತೋಷಕ್ಕಾಗಿ ಒಂಟೇ ಕೊರಳಿಗೆ ಘಂಟೆ ಕಟ್ಟುತ್ತಾರೆ, ಮತ್ತು ರಾಗ ಹಾಡುತ್ತಾರೆ.

## 29. THE HORSE

## ೨೯. ಕುದುರೆಯು

"ಕುದುರೇ ಹಿಂದಿರ ಬೇಡ, ಅರಮನೇ ಮುಂದಿರ ಬೇಡ.,,

ಗಾದೆ.

ಕುದುರೆಯು ಮೃಗಗಳೊಳಗೆ ಶ್ರೇಷ್ಟವೂ ಮನುಷ್ಯರಿಗೆ ಬಹಳ ಪ್ರಯೋಜನಕರವೂ ಆಗಿದೆ. ಅದರ ಕೂದಲು ಮೃದುವೂ ಕತ್ತು ಉದ್ದವೂ ಕತ್ತಿನ ಮೇಲಣ ಕೆದರ್ಗೂದಲು ಉದ್ದವೂ ಸ್ನಿಗ್ಧವೂ ಆಗಿರುವವು. ಅದು ಬಲಿಷ್ಟ



ಅರಬಿ ಕುದುರೆ.

ವಾದ ನಾಲ್ಕು ಕಾಲುಗಳಿಂದ ಬಹಳ ವೇಗವಾಗಿ ಓಡುವದರಿಂದ ತುರಗವೆನ್ನಿಸಿಕೊಳ್ಳುತ್ತದೆ. ಕುದುರೆಯ ಖುರವು ಗೋವಿನ ಗೊರಸಿನ ಹಾಗೆ ಎರಡು ಭಾಗವಾಗಿರದೆ, ಅಖಂಡವಾಗಿರುವದು. ವಿಶೇಷವಾಗಿ ಓಡುವಾಗ್ಗೈ ಖುರಗಳು ಸವೆಯದ ಹಾಗೆ ಕಾಲುಗಳಿಗೆ ಲಾಡವನ್ನು ಕಟ್ಟುತ್ತಾರೆ. ಕುದುರೆಯು ಸಾಧಾರಣವಾಗಿ ಹುಲ್ಲನ್ನೂ ಹುರಳಿಯನ್ನೂ ಭಕ್ಷಿಸುವದು; ಆದರೆ ಗೋವು ಮೊದಲಾದವುಗಳ ಹಾಗೆ ಮಲಕು ಹಾಕುವದಿಲ್ಲ. ಕುದುರೆಗಳನ್ನು ಬಂಡಿಗೆ ಕಟ್ಟಿ, ಹೊಡೆಯುತ್ತಾರೆ; ತಡಿ ಹಾಕಿ, ಹತ್ತಿ ಕೊಂಡು, ಸವಾರಿ ಮಾಡುತ್ತಾರೆ. ಅದಲ್ಲದೆ ವಿಲಾಯತಿಯಲ್ಲಿ ಅವನ್ನು ನೇಗಲಿಗೆ ಸಹ ಕಟ್ಟಿ, ಉಳುತ್ತಾರೆ.

ಆಸ್ಯ, ಅಮೆರಿಕ ಖಂಡಗಳ ಕೆಲವು ಕಡೆಗಳಲ್ಲಿ ಅಡವಿಯ ಕುದುರೆಗಳು ಹಿಂಡು ಗೂಡಿ, ಮೇಯುವವು. ಅವುಗಳು ಬಹಳ ಸಾಹಸ ಉಳ್ಳವುಗಳಾದಾಗ್ಯೂ ಹಿಡಿಯಲ್ಪಟ್ಟು, ಬಹಳ ಕಾಲ ಬಾಳುವದಿಲ್ಲ. ಅರಬಿ ಕುದುರೆಗಳು ಬಹಳ ಸುಂದರವಾಗಿಯೂ ಆ ಜನರಿಗೆ ಬಹಳ ಪ್ರಿಯವಾಗಿಯೂ ಅವೆ; ಅವು ಅವರ ಸಂಗಡ ಗುಡಾರಗಳಲ್ಲಿ ವಾಸ ಮಾಡುತ್ತವೆ; ಅವುಗಳ ಯಜಮಾನರು ತಲೆಗಿಂಬೆಂದು, ಅವುಗಳ ಕತ್ತಿನಲ್ಲಿ ತಲೆ ಇಟ್ಟು, ಮಲಗುವದುಂಟು. ಕೆಲವು ಜನರು ಕುದುರೆಗಳನ್ನು ಹತ್ತಿಕೊಂಡು, ಜನರಿಗೆ ವಿನೋದಾರ್ಥವಾಗಿ ಹಲವು ವಿಧದ ನೃತ್ಯವನ್ನು ಮಾಡುವಾಗ ಅವುಗಳು ಲೇಶವಾದರೂ ಮೊಂಡತನ ಮಾಡುವದಿಲ್ಲ. ಸಮರದಲ್ಲಿ ವಾದ್ಯಭೇದಗಳನ್ನು ತಿಳಿದು ಕೊಂಡು, ಅನುಕೂಲವಾಗಿ ನಡಕೊಳ್ಳುವವು.

ಪೂರ್ವ ಕಾಲದಲ್ಲಿ ಹಿಂದು ಜನರು ಕುದುರೆಯನ್ನು ಕೊಂದು, ಅಶ್ವಮೇಧವೆಂಬ ಯಜ್ಞವನ್ನು ಮಾಡುತ್ತಿದ್ದರು. ಪೂರ್ವಿಕರು ಕುದುರೆಗಳಲ್ಲಿ ಬಹಳ ಗೌರವವನ್ನಿಟ್ಟರು. ಫಾರ್ಶಿ ದೇಶವನ್ನಾಳುವದಕ್ಕೆ ಅರಸನು ಇಲ್ಲದಿರೆ, — ಪ್ರಭುಗಳೆಲ್ಲರು ಕೂಡಿ, ಒಬ್ಬನನ್ನು ಅರಸಾಗಿ ನೇಮಿಸಿ ಕೊಳ್ಳ ಎತ್ನೈಸಿ, ಯಾರ ಕುದುರೆ ಸೂರ್ಯೋದಯದಲ್ಲಿ ಮಟ್ಟ ಮೊದಲು ಹೇಷಿಸುವದೋ, ಅದರ ಯಜಮಾನನೇ ಅರಸಾಗಿರತಕ್ಕದ್ದೆಂದು, ನಿಶ್ಚೈಸಿ ಕೊಂಡಿರಲು, ದರಸನೆಂಬವನ ಕುದುರೆ ಮೊದಲು ಹೇಷಿಸಿದ್ದರಿಂದ ಅವನು ಮಿಕ್ಕವರೆಲ್ಲರಿಂದ ಪಟ್ಟಾಭಿಷೇಕ ಪಡಕೊಂಡು, ಆಳಲಾರಂಭಿಸಿದನು.

## 30. OXEN ETC.

## ೩೦. ಎತ್ತು ಇತ್ಯಾದಿಗಳು

"ಎತ್ತು ತೆಂಗಿನ ಕಾಯಿ ಬಲ್ಲುದೆ?
ಕತ್ತೆ ಕಸ್ತುರಿ ವಾಸನರಿವುದೆ?
ಬುತ್ತಿಗಳ್ಳರಿಗೇಕೆ ಸದ್ವ್ರತ ಸತ್ಯದಾಚಾರಾ?" ||



ವಿಲಾಯತೀ ಗೋವು.

ಎತ್ತು ನಾಡುಮೃಗ. ಅದಕ್ಕೆ ಮೇಲುಗಡೆಯಲ್ಲಿ ಮುಂದಿನ ಹಲ್ಲುಗಳು ಇಲ್ಲ. ಅವುಗಳು ಹುಲ್ಲು, ತೌಡು, ಹತ್ತೀ ಬೀಜ, ಹುರಳಿ, ಕಡಲೆ ಮೊದಲಾದವುಗಳನ್ನು ತಿನ್ನುವವು. ಎತ್ತು ಮುಂತಾದ ಪಶುಗಳಿಗೆ ನಾಲಿಗೆಯು, ಮೇವು ಚನ್ನಾಗಿ ಹಿಡುಕೊಳ್ಳುವದಕ್ಕೆ, ತರಕಲಾಗಿ ಇರುವದು; ಅವಕ್ಕೆ ಮಲುಕು ಹಾಕುವದಕ್ಕಾಗಿ ತಕ್ಕಂಥ ಜೀರ್ಣಕೋಶವೆಂಬ ಚೀಲವಿರುತ್ತದೆ. ಅದು ನಾಲ್ಕು ಭಾಗದ್ದು; ಮೇಲಿನದರೊಳಗೆ ಸೇರಿದ ಮೇವು ಚಂದಾಗಿ ತ್ಯಾವವಾದ ಮೇಲೆ ಅದು ಬಾಯಿಗೆ ತಿರಿಗಿ ಬಂದು, ಮತ್ತು ಇಳಿದು, ತರುವಾಯ ಕಾಲಕ್ರಮದಲ್ಲಿ ಚೀಲದ ಒಂದೊಂದು ಭಾಗದೊಳಗೆ ಹೋಗುತ್ತದೆ; ಈ ಪರಿಯಿಂದ ಮೇವಿನೊಳಗಣ ಆಹಾರ ಎಲ್ಲಾ ಪಶುವಿಗೆ ಪ್ರಾಪ್ತಿಸುತ್ತದೆ. ಒಂಟೆ, ಮೆಗ, ಆಡು, ಕುರಿ, ಎಮ್ಮೆ ಇತ್ಯಾದಿ ಕೆಲವು ಜೀವಿಗಳಿಗೆ ಅಂಥ ಜೀರ್ಣಕೋಶವದೆ. — ಎತ್ತುಗಳು ೨೦ ವರುಷಗಳಿಗಿಂತ ಹೆಚ್ಚು ಕಾಲ ಬದುಕುವದಿಲ್ಲ. ಅವು ಭಾರ ಹೊರುವದಕ್ಕೂ ಬಂಡಿ ಎಳಿಯುವದಕ್ಕೂ ಹೊಲ ಉಳುವದಕ್ಕೂ ಉಪಯೋಗಿಸುವವು. ಕೆಲವರು ಅವುಗಳ ಮೇಲೆ ಹತ್ತಿ ಕೊಂಡು, ಹೋಗುತ್ತಾರೆ. — ಗೋವು ಜನರಿಗೆ ಬಹಳ ಪ್ರಯೋಜನ ಉಳ್ಳದ್ದು. ದೊಡ್ಡ ಜಾತಿಯ ಹಸುವು ಒಂದು ಹೊತ್ತಿಗೆ ನಾಲ್ಕೈದು ಪಡಿ ಹಾಲು ಕೊಡುತ್ತದೆ; ಎಮ್ಮೆಗಳು ಹಸುಗಳಿಗಿಂತ ಹೆಚ್ಚು ಹಾಲು ಕೊಡುವವು; ವಿಲಾಯತೀ ದನಗಳು ೨೦ ಪಡಿ ಹಾಲು ಕೊಡುವವು. ಹಸುವಿನ ಹಾಲು ಶೀಯಾಗಿಯೂ ಬಹಳ ಆರೋಗ್ಯವಾಗಿಯೂ ಅದೆ. ಮೊಸರು, ಮಜ್ಜಿಗೆ, ಬೆಣ್ಣೆ ಮೊದಲಾದ ರುಚಿಕರ ಪದಾರ್ಥಗಳು ಹಾಲಿನಿಂದಲೇ ಉಂಟಾಗುತ್ತವೆ. ಹೆಪ್ಪು ಹಾಕುವದರಿಂದ ಹಾಲು ಮೊಸರಾಗುತ್ತದೆ. ಮೊಸರು ಕಡಿಯುವದರಿಂದ ಬೆಣ್ಣೆ ಉಂಟಾಗುವದು. ಆ ಬೆಣ್ಣೆಯನ್ನು ಕರಗಿಸಿದರೆ ತುಪ್ಪವಾಗುವದು. ಹೀಗೆ ಗೋವುಗಳು ಹಲುವು ಬಗೆಯಿಂದಲೂ ಮನುಷ್ಯರಿಗೆ ಆಹಾರಕ್ಕಾಗಿ ಇರುತ್ತವೆ. "ಗೋವು ಕಪ್ಪಾದರೆ ಹಾಲು ಕಪ್ಪೇ."



ಮೆಗ. ೧೦*

## 31. GOATS AND SHEEP

## ೩೧. ಕುರಿಯೂ ಮೇಕೆಯೂ

“ಹರಿಕೆಗೆಂದೇ, ತಂದ ಕುರಿತಾ—
ನರಿಯದ್, ಅಕಟಾ! ಕೊಲ್ವರೆಂಬುದ;
ಹರಿದು ಹಸುವಿಗೆ ತಳಿರ, ಮೆಲ್ಲುತ್ತಿಹುದು, ತೋರಣದಾ.॥
ನರಗುರಿಗಳದರಂತೆ ತಮಗಹ
ಮರಣವನು ತಾವರಿಯರ್; ಈ ಸಂ—
ಸರಣಭೋಗದಿ ಮಘ್ನರಾಗಿಯೆ ಮೃತ್ಯುವಶರಹರೂ.,,॥



ಸುರಿಯದ ಉದ್ದಗಿವೀ ಮೇಕೆ.

ಕುರಿಗಳೂ ಮೇಕೆಗಳೂ ನಾನಾ ವಿಧಗಳಾಗಿವೆ. ಬಾಳುಗುರಿ, ಕ್ಯಾಗುರಿ ಮೊದಲಾದವು ಕುರಿಗಳಲ್ಲಿ ಭೇದಗಳು. ಮೇಕೆಗಳಲ್ಲಿ ಕಂಚಿಮೇಕೆ ಮೊದಲಾದ ವಿಶೇಷಗಳು.

ಕುರಿಗಳು ಕಪಟವಿಲ್ಲದವುಗಳಾಗಿಯೂ ಮನುಷ್ಯರಿಗೆ ಬಹಳ ಪ್ರಯೋಜನಕರವಾದವುಗಳಾಗಿಯೂ ಅವೆ. ಕುರಿಗಳ ಉಣ್ಣೆಯಿಂದ ಕಂಬಳಿ, ಸಕಲಾತಿ ಮೊದಲಾದವುಗಳನ್ನು ನೇಯುತ್ತಾರೆ. ಕಾಶ್ಮೀರ ದೇಶದ ಕುರಿತುಪ್ಪಟದಿಂದ ನೇಯುವ ಶಾಲುಗಳು ಜಿನುಗಾಗಿಯೂ ಶ್ಯಾನೆ ಬೆಲೆಯುಳ್ಳವುಗಳಾಗಿಯೂ ಅವೆ. ಕುರಿಗಳ ಮಾಂಸವು ಬಹಳ ಆರೋಗ್ಯವಾದ ಆಹಾರವಾಗಿದೆ. ಚರ್ಮದಿಂದ ಮೊಟ್ಟೆಗಳನ್ನೂ ಪುಸ್ತಕಗಳ ರಟ್ಟುಗಳನ್ನೂ ಮಾಡುತ್ತಾರೆ. ಯಹೂದ್ಯರೂ ಬ್ರಾಹ್ಮಣರೂ ಕುರೀಯಜ್ಞ ಮಾಡುವದಿತ್ತು. "ಸ್ವರ್ಗಕಾಮೋ ಯಜೇತ" ಎಂತ ಋಗ್ವೇದದ ಬ್ರಾಹ್ಮಣ ಬೋಧಿಸುತ್ತದೆ.

ಮೇಕೆಗಳು ಗುಡ್ಡಗಳನ್ನು ಹತ್ತಲಿಕ್ಕೆ ಪ್ರೀತಿ ಮಾಡಿ, ದುಮುಕಾಡುತ್ತಿರುವವು. ಸುರಿಯ ದೇಶದ ಮೇಕೆಗಳ ಕಿವಿಗಳು ಒಂದು ಮೊಳ ಉದ್ದವಾಗಿರುವವು. ಮೇಕೇಹಾಲು ಆರೋಗ್ಯವಾದ್ದರಿಂದ ವ್ಯಾಧಿಗ್ರಸ್ಥರನೇಕರು ಅದನ್ನು ಕುಡಿಯುತ್ತಾರೆ. ಮೇಕೆಗಳು ಸಕಲ ಮೂಲಿಕೆಗಳನ್ನು ತಿನ್ನುತ್ತವೆ; ಹಟ್ಟಿಯೊಳಗಲ್ಲ, ಅಡವಿಯಲ್ಲಿ ಮೇಯುವದಕ್ಕೆ ಬಹಳ ಆಶಿಸುತ್ತವೆ.



ಪೂರ್ವದವರು ಟಗರಿನ ತಲೆಯಾಕಾರವನ್ನು ಹಿತ್ತಾಳಿಯಿಂದ ಮಾಡಿ ನಿಶಾನಿಗಳ ಕೋಲಿನ ತುದಿಗೆ ಶಿಕ್ಕಿಸುತ್ತಾ ಬಂದರು. ಅದು ಅವರಿಗೆ ಶಕ್ತಿಯ ಗುರುತು. ಈ ಚಿತ್ರದ್ದನ್ನು ಒಂದು ಸ್ಥಳದಲ್ಲಿ ಅಗಿದು ಕೊಂಡರು.

## 32. BIRDS

# ೩೨. ಪಕ್ಷಿಗಳು



"ಊರ ದಾರಿಯ ನಡವ ಮನುಜರು
ನೀರಡಿಸಿ, ಅರವಟಿಗೆಯನು ನೆರೆ
ಸಾರಿ, ತೃಷೆಯನು ಕಳೆದು, ಸೌಖ್ಯದಿ ಎಲ್ಲರೊಡ ಗೂಡೀ,||
ಬೇರವರು ತಮ ತಮ್ಮ ದಾರಿಯ
ಸಾರಿ ಹೋಹಂದದಲಿ,— ಸತಿ, ಸುತ—
ರಾರಿಗಾರೂ? ನೇಮಕಾಲವು ತೀರಲವರಿರರೂ.,,

"ಒಂದು ವೃಕ್ಷದ ಮೇಲೆ ಪಕ್ಷಿಗ—
ಳೊಂದು ನಿಮಿಷವು ಗಜಬಜಿನುತಲಿ
ಹೊಂದಿ ಕೊಂಡವು, ಮರುಳಿ ಕಂಡೆಡೆಗೈದುವಂದದಲೀ;||
ತಂದೆ ತಾಯ್ಗಳು, ಬಂದು ಬಳಗಗ—
ಳೊಂದು ನಿಮಿಷಕೆ ತೋರಿ, ತಮ ತಂ—
ಮಂದದಲಿ ತೊಲಗುವರು, ನೇಮದ ಕಾಲ ತೀರಿದಡೇ,,||



ಕಂಠಕೋಶದ ಪಕ್ಷಿ (Pelikan).

ಪಕ್ಷಿಗಳಲ್ಲಿ ಇನ್ನೂರು ವಿಧ ಉಂಟು. ಅವುಗಳ ಎಲುಬುಗಳು ಘಟ್ಟಿ ಇಲ್ಲದೆ ಟೊಳ್ಳಾಗಿ ಇರುವದರಿಂದ ಆಕಾಶದಲ್ಲಿ ಹಾರುವದು ಲಘುವಾಗುವದು. ಪಕ್ಷಿಗಳಿಗೆ ಹಲ್ಲುಗಳು ಇಲ್ಲ; ಕೊಕ್ಕಿನಿಂದ ಆಹಾರವನ್ನು ಹಿಡುಕೊಂಡು, ಭಕ್ಷಿಸುತ್ತವೆ.




ಶ್ಯಾಮಕುಕ್ಕುಟ.

ಪಕ್ಷಿಗಳಲ್ಲಿ ಶ್ಯಾಮಕುಕ್ಕುಟ (ostrich) ಬಹಳ ದೊಡ್ಡದ್ದು; ಅದರ ಕತ್ತು ಒಂಟೇ ಕತ್ತಿನ ಹಾಗೆ ಉದ್ದವಾಗಿರುತ್ತದೆ; ರೆಕ್ಕೆ ಉಳ್ಳದ್ದಾದಾಗ್ಯೂ ಹಾರಲಾರದು, ಆ

ದರೆ ಅತಿ ಶೀಘ್ರವಾಗಿ ಓಡುತ್ತದೆ. ಅದು ಹೆಚ್ಚು ಕಡಿಮೆಯಾಗಿ ೭ ಅಡಿ ಉದ್ದವಾಗುವದು. ಅದರ ತಲೆ ಬಾತಿನ ತಲೆಯಂತೆಯೂ, ಕಣ್ಣು ಮನುಷ್ಯರದರಂತೆಯೂ, ಕಂಠವು ಹಂಸೆಯ ಕಂಠದದ ಹಾಗೆಯೂ, ಕಾಲು ಒಂಟೆಯ ಕಾಲಿನ ಹಾಗೆಯೂ ಅವೆ. ಹಂದಿಯಂತೆ ಕೂಗಿ, ಬಹಳ ತಿನ್ನುತ್ತದೆ; ಕಲ್ಲು ಕಬ್ಬಿಣ ಮೊದಲಾದವುಗಳನ್ನು ನುಂಗಿ ಕಾಳ್ಳುತ್ತದೆ. ಅದರ ಮೇಲೆ ಇಬ್ಬರು ಏರಿದ್ದಾಗ್ಯೂ ಕುದುರೆಗಿಂತ ಹೆಚ್ಚು ವೇಗವಾಗಿ ಓಟ ಓಡುವದು. ಅದರದಾಂದು ಮೊಟ್ಟೆ ೩ ಸೇರು ತೂಕದ್ದಾಗುವದು. ಅಫ್ರಿಕ, ಅಮೆರಿಕ ಖಂಡಗಳಲ್ಲಿ ಅದು ಬದುಕುತ್ತದೆ.



ಪರ್ವತದ ಹದ್ದು.

ಪಕ್ಷಿಗಳಲ್ಲಿ ಹದ್ದು ರಾಜಪಕ್ಷಿ ಎನ್ನಿಸಿ ಕಾಳ್ಳುವದು. ಅದು ಬಹಳ ಉನ್ನತದಲ್ಲಿ ಹಾರ್ಯಾಡಿ, ಚುರುಕಾದ ಚಕ್ಷುವಿನಿಂದ ಕೆಳಗೆ ಕಂಡ ಬೇಟೆಯಲ್ಲಿ ಚಮತ್ಕಾರದಿಂದ ಇಳಿದು, ಹಿಡುಕಾಳ್ಳುತ್ತದೆ. ಅದು ೧೦೦ ಸಂವತ್ಸರಗಳ ವರಿಗೆ ಬದುಕುವದು.

ಧಾನ್ಯಗಳನ್ನು ತಿನ್ನುವ ಪಕ್ಷಿಗಳಿಗಲ್ಲದೆ ಮಾಂಸ ಭಕ್ಷಿಸುವ ಪಕ್ಷಿಗಳಿಗೆ ಎರಡು ಆಹಾರಕಾಶವಿಲ್ಲ. ಧಾನ್ಯ ತಿನ್ನುವವುಗಳ ಕೆಳಗಣ ಜೀರ್ಣಕಾಶ ಘಟ್ಟಿಯಾದ ನರಗಳದ್ದು; ಅವು ಹಲ್ಲಿಲ್ಲದೆ ಧಾನ್ಯ ಮೆಲ್ಲ ಕೂಡದ್ದರಿಂದ ಆ ನರಗಳು ಅದನ್ನು ತಿಕ್ಕಿ, ಸಣ್ಣದು ಮಾಡುತ್ತವೆ. ಹೆಚ್ಚು ತಿಕ್ಕ್ಯಾಟವಾಗುವ ಹಾಗೆ ಆ ಪಕ್ಷಿಗಳು ಚಿಕ್ಕ ಕಲ್ಲು, ಮಳಲು ನುಂಗುವವು. ಮೊಟ್ಟೆಚಿಪ್ಪಿಗಾಗಿ ಎಲ್ಲಾ ಪಕ್ಷಿಗಳೂ ಸ್ವಲ್ಪ ಸುಣ್ಣ ತಿನ್ನುವವು.


ನವಿಲು.

ಪಕ್ಷಿಗಳಲ್ಲಿ ನವಿಲು ಬಹಳ ಸುಂದರವಾದದ್ದು; ನಾನಾ ವರ್ಣಗಳುಳ್ಳ ರೆಕ್ಕೆಗಳನ್ನು ತೆರದು, ಅದು ನಾಟ್ಯವಾಡುತ್ತದೆ. ಜಲದಲ್ಲಿ ಈಜಾಡುವ ಪಕ್ಷಿಗಳಲ್ಲಿ ಹಂಸಗಳು ಬಿಳುಪಾಗಿಯೂ ಸುಂದರವಾಗಿಯೂ ಇರುತ್ತವೆ. ಕೋಗಿಲೆ, ಚಾತಕ, ಭರತಪಕ್ಷಿಗಳು ಮುದ್ದುಧ್ವನಿ ಗೈಯುತ್ತವೆ.

ಗಿಣಿ, ಕಾಳಿಂಗ ಮೊದಲಾದ ಕೆಲವು ಪಕ್ಷಿಗಳು ಕೆಲವು ಶಬ್ದಗಳನ್ನು ಉಚ್ಚರಿಸ ಕಲಿತು ಕೊಂಡಾಗ್ಯೂ ಕಲಿಸಿದ ಪಾಠವನ್ನು ಹೇಳುತ್ತವಲ್ಲದೆ, ಆಡುವದೇನೆಂದು ತಿಳಿಯಲಾರವು.

ಒಂದು ದಿವಸ ಮಹಮ್ಮದ ಎಂಬವನು ತನ್ನ ಪ್ರಧಾನಿಯ ಸಂಗಡ ಹಾಳು ಬಿದ್ದ ಒಂದು ಪಟ್ಣಕ್ಕೆ ಹೋಗಿ, ಒಂದು ಕೋಟೆಯ ಮೇಲೆ ಎರಡು ಗೂಬೆಗಳನ್ನು ನೋಡಿ, ಅವು ಮಾತಾಡಿ ಕೊಳ್ಳುವಂಥಾದ್ದನ್ನು ಕಿವಿಯೊಡ್ಡಿ ಕೇಳಿ ಬಂದು ತನಗೆ ಹೇಳ ಬೇಕೆಂತ, ಮಂತ್ರಿಗೆ ಆಜ್ಞಾಪಿಸಿದನು. ಆ ಪ್ರಕಾರವೇ ಮಂತ್ರಿಯು ಹೋಗಿ, ಕಿವಿಗೊಟ್ಟು, ಗೂಬೆಗಳ ಧ್ವನಿಯ ಕೇಳಿ, ಪುನಹ ಬಂದು, ಸುಲ್ತಾನನ ಸಂಗಡ ಆ ವಿಷಯ ಹೇಳ ಮನಸ್ಸಿಲ್ಲದವನ ಹಾಗೆ ಸುಮ್ಮನೆ ನಿಂತನು. ಅದನ್ನು ಸುಲ್ತಾನನು ನೋಡಿ, ಕೇಳಿದ್ದನ್ನು ಹೇಳೆಂದು, ಬಲವಂತ ಮಾಡಿದಾಗ್ಯೆ ಮಂತ್ರಿ ಇಂತೆಂದನು: ಪರಾಕೇ! ಆ ಮುದಿಗೂಬೆಗಳಿಗೆ ಎರಡು ಮರಿಗಳಿರುತ್ತವೆ; ಅವುಗಳಲ್ಲಿ ಒಂದು ಗಂಡು, ಮತ್ತೊಂದು ಹೆಣ್ಣು; ಆ ಎರಡಕ್ಕೂ ವಿವಾಹ ಮಾಡುವ ನಿಮಿತ್ತ ಪರಸ್ಪರ ಸಂಭಾಷಿಸುತ್ತಾ, ಧೊರೆಗಳು ತಮ್ಮ ಮೇಲೆ ದಯವಿಟ್ಟು, ಇಷ್ಟು ಗ್ರಾಮಗಳನ್ನು ತಮಗೆ ಕೊಡಿಸಿ ಕೊಟ್ಟವರಲ್ಲವೇ? ಎಂತ ಹೇಳಿ, ಸಂತೋಷ ಪಡುತ್ತವೆ.— ಸುಲ್ತಾನನು ಅದನ್ನು ಕೇಳಿ, ಯುದ್ಧಗಳು ಮಾಡುವದರಿಂದಲೇ ಇಷ್ಟು ಪಟ್ಣಗಳು ಹಾಳಾಗಿ ಹೋಗಿ, ಈ ಪಕ್ಷಿಗಳಿಗೆ ವಾಸಸ್ಥಾನವಾದವು; ಅದು ಕಾರಣ ಇಂಥಾ ಮಾತುಗಳು ಹೊರಡುವ ಹಾಗಾಯಿತೆಂದು, ತಿಳಿದು ಕೊಂಡು, ಯುದ್ಧ ಮಾಡುವ ಆಸಕ್ತಿಯನ್ನು ಬಿಟ್ಟು ಬಿಟ್ಟನು.

ವರುಷಕ್ಕೆ ಒಮ್ಮೆ ಪಕ್ಷಿಗಳ ಗರಿಗಳು ಬಿದ್ದು, ಹೊಸ ಗರಿಗಳು ಹುಟ್ಟುವವು. ಗರಿಗಳನ್ನು ಶುಚಿಯಾಗಿಯೂ ನುಣುಪಾಗಿಯೂ ಮಾಡಿ ಕೊಳ್ಳುವದಕ್ಕೆ ಪಕ್ಷಿಗಳು ಅವನ್ನು ಬಾಯಿಯಿಂದ ತಿಕ್ಕಿ, ಬಾಲದ ಹತ್ತರ ಹುಟ್ಟುವ ಒಂದು ತರದ ಎಣ್ಣೆಯನ್ನು ಹಚ್ಚಿ ಕೊಳ್ಳುತ್ತವೆ.



# 33. THE SWAN

# ೩೩. ಹಂಸಪಕ್ಷಿಯು

"ಹಂಸೇ ಹಾಗೆ ನಡಿಯಲಿಕ್ಕೆ ಹೋಗಿ, ಗುಬ್ಬಿ ಕುಪ್ಪಳಿಸಿ, ಬಿತ್ತು."
ಗಾದೆ.



ಹಂಸಪಕ್ಷಿಗಳು.

ಹಂಸೆ ಎಂಬದು ಒಂದು ನೀರುಗೋಳಿ; ಅದು ಗೋವೆಬಾತು ಕೋಳಿಗಿಂತೆ ಎರಡಷ್ಟು ದೊಡ್ಡದು; ಅದರ ಕೊಕ್ಕು ಕೆಂಪಾಗಿ, ಕಾಲು ಕಪ್ಪಾಗಿ ಅವೆ. ಅದು ಸರೋವರಗಳಲ್ಲಿ ಅತಿ ಸುಂದರವಾದ ಪಕ್ಷಿಯಾಗಿರುತ್ತದೆ. ನೀರಿನ ಹುಲ್ಲು ಅದರ ಆಹಾರ. ಹೆಣ್ಣು ಹಂಸೆ ಹುಲ್ಲಿನಿಂದ ಗೂಡು ಕಟ್ಟಿ, ಸ್ವಂತ ಗರಿಗಳಿಕ್ಕಿ ಮೆತ್ತಗೆ ಮಾಡಿ, ಎಂಟು ಹಸುರಾದ ಮೊಟ್ಟೆಗಳನ್ನು ಹಾಕುವದು; ಬಳಿಕ ಗಂಡು ಆ ಗೂಡಿಗೆ ಸಮೀಪಿಸುವದೆಲ್ಲಕ್ಕೂ ಎದುರಿಸುವದಕ್ಕೆ ಕಾಯುವದು. ತನ್ನ ರೆಕ್ಕೆಗಳಿಂದ ಅದು ಒಬ್ಬ ಮನುಷ್ಯನ ಕೈ ಕಾಲುಗಳನ್ನು ಹೊಡದು, ಒಡ ಮುರಿಯ ಬಹುದು. ಎಳೇ ಹಂಸೆಗಳ ಮಾಂಸ ತಿನ್ನಲಿಕ್ಕೆ ಒಳ್ಳೇದಾಗಿದೆ. ವಿಲಾಯತಿಯಲ್ಲಿ ಅಲ್ಲದೆ ಅದು ಹಿಮಾಲಯದ ಸರೋವರಗಳಲ್ಲಿಯೂ ಬದುಕುತ್ತದೆ. ಮೇಲೆ ತಂದ ಗಾದೆಯನ್ನು ಹಿಂದು ಜನರು ಹಂಸೆಯನ್ನರಿಯದೆ, ಹೇಳುತ್ತಾರೆ; ಹ್ಯಾಗಂದರೆ ಅದರ ನಡೆ ಅತಿ ವಿಕಾರವಾಗಿದೆ; ಈಜಾಡುವದರಲ್ಲಿಯೇ ಅದರ ಮಹಿಮೆ. ಅವರು ಒಂದು ಜಾತೀ ಕೊಕ್ಕರೆಯನ್ನು ಮತ್ತು ಹಂಸೆಯನ್ನು ಚಂದಾಗಿ ವಿಶೇಷಿಸುವದಿಲ್ಲ.

ಹಂಸಪಕ್ಷಿಯು ನೀರು ಬೆರದ ಹಾಲಿನಲ್ಲಿ ಹಾಲು ಮಾತ್ರವೇ ಕುಡಿದು ನೀರು ಬಿಡುತ್ತದೆಂದು, ಪುರಾಣಗಳಲ್ಲಿ ಸುಮ್ಮಗೆ ಹೇಳಿ ಅದೆ. ಹಂಸವನ್ನು ಕುರಿತು ಒಂ

ದು ಕಥೆಯನ್ನು ಹೇಳುತ್ತಾರೇನಂದರೆ: ಹಾಳೇ ತೀರದಲ್ಲಿ ಒಂದು ಕಾಕ್ಕರೆ ಕೂತು ಇದ್ದು, ಹಂಸವನ್ನು ನೋಡಿ, ಹಾಗಳಿತೆಂತೆಂದಡೆ—ನಿನ್ನ ಕಾಕ್ಕು ಕಣ್ಣುಗಳು ಬಹಳ ಕೆಂಪಾಗಿ ಇರುತ್ತವೆ, ನೀನ್ಯಾರಪ್ಪಾ? ಎಲ್ಲಿಂದ ಬಂದೆ?—ಸ್ವರ್ಗಲೋಕದಿಂದ ಬಂದೆನೆಂದು, ಹಂಸವು ಹೇಳಿದ್ದನ್ನು ಕೇಳಿ, ಕಾಕ್ಕರೆಯು, ಸ್ವರ್ಗಲೋಕದ ಯಾವ ಸ್ಥಳದಲ್ಲಿ ವಾಸಿಸುತ್ತಿ? ಆ ವಿಷಯ ಸ್ವಲ್ಪ ವಿವರವಾಗಿ ಹೇಳೆನ್ನಲು;—ಹಂಸವು, ಮಾನಸ ಸರೋವರದಲ್ಲಿ ವಾಸಿಸುತ್ತಾ ಇದ್ದೇನೆ, ಅಲ್ಲಿಯ ಜಲವು ಅತಿ ಮಧುರವಾಗಿಯೂ ನಿರ್ಮಲವಾಗಿಯೂ ಇರುತ್ತದೆ, ಅದು ಚಂಗಾರದ ತಾವರೇ ಪುಷ್ಪಗಳಿಂದಲೂ ರತ್ನಖಚಿತವಾದ ತೀರಗಳಿಂದಲೂ ಮಂದಾರವೃಕ್ಷಗಳಿಂದಲೂ ಶೋಭಿಸುತ್ತದೆಂದು ಹೇಳಲು,—ಕಾಕ್ಕರೆ ಅದನ್ನು ಕೇಳಿ, ಆ ಸರಸಿಯಲ್ಲಿ ಶಂಖಹುಳಗಳು ಇರುವವೇ? ಎಂದು ಪ್ರೀತಿಯಿಂದ ಕೇಳಿತು. ಆ ಹುಳಗಳು ಅಲ್ಲ್ಯಾಕೆ ಬಂದಾವು? ಅಲ್ಲಿ ಇಲ್ಲವೆಂದು, ಹಂಸವು ಹೇಳಿದಾಗ್ಯೆ ಬಕವು, ಶಂಖಹುಳ ಇಲ್ಲದ ಸರೋವರವು ಸರೋವರವ್ಯಾಕಾಧೀತು? ಸರೋವರವಲ್ಲವೆಂದು, ಹಾಸ್ಯ ಮಾಡಿತು. ಆದದರಿಂದ ನೀಚರು ತಮಗೆ ಪ್ರಿಯವಾದ ಪದಾರ್ಥಗಳು ಹೀನವಾಗಿದ್ದಾಗ್ಯೂ ಉತ್ಕೃಷ್ಟವಾದವುಗಳೆಂದು, ಭಾವಿಸುವರು.

## 34. THE CRANE

## ೩೪. ಬಕವು

"ನಾಳೇನೇವ ಸ್ಥಿತ್ವಾ ಪಾದೇನೈಕೇನ ಕುಂಚಿತಗ್ರೀವಃ
ಜನಯತಿ ಕುಮುದಭ್ರಾಂತಿಂ ವೃದ್ಧಬಕೋ ಬಾಲಮತ್ಸ್ಯಾನಾಂ" ||

ಅಂದರೆ:

ಮುದಿಬಕವು ಕುತ್ತಿಗೆ ಮುದುರಿಸಿ ಕೊಂಡು, ತಾವರೆದಂಟಿನ ಹಾಗೆ ಒಂದು ಕಾಲಿನಲ್ಲಿ ನಿಂತು, ಚಿಕ್ಕ ಮೀನುಗಳಿಗೆ ತಾವರೆಯ ಭ್ರಾಂತಿ ಹುಟ್ಟಿಸುತ್ತದೆ.

ಬಕದ ಕಾಲಳು ಬಹಳ ಉದ್ದವಾದದರಿಂದ ಮೀನುಗಳನ್ನು ಸುಲಭವಾಗಿ ಹಿಡಿದು, ತಿನ್ನುತ್ತದೆ; ಒಂದೇ ಕಾಲಿನಲ್ಲಿ ನಿಂತು ಕೊಂಡು, ನಿದ್ರೆ ಮಾಡುವದು; ಅದರ ನಡೆಯು ಧ್ಯಾನವುಳ್ಳ ಒಬ್ಬ ಗೃಹಸ್ಥನವರ ಹಾಗೆ. ಛಳಿ

ಗಾಲದಲ್ಲಿ ಉತ್ತರದಿಂದ ದಕ್ಷಿಣಕ್ಕೆ ಹೋಗುವದು. ಅದನ್ನು ಕುರಿತು ಒಂದು ಕಥೆ ಹೇಳುತ್ತಾರೆ—



ಬಕದ್ದೊಂದು ಜಾತಿ.

ದ್ರೋಹಚಿಂತನೆಯುಳ್ಳ ಒಂದು ಕೊಕ್ಕರೆಯು ಕೊಳದ ಪಕ್ಕದಲ್ಲಿ ಕೂತು ಕೊಂಡು, ಅದರಲ್ಲಿರುವ ಮೀನುಗಳನ್ನು ನೋಡಿ, ಹ್ಯಾಗಾದರೂ ಅವುಗಳನ್ನು ಮೋಸ ಮಾಡಿ ತನ್ನ ಸ್ಥಾನಕ್ಕೆ ತಕ್ಕೊಂಡು ಹೋದರೆ ಬಹಳ ದಿವಸದ ವರೆಗೂ ಆಹಾರಕ್ಕೋಸ್ಕರ ಶ್ರಮೆ ಪಡದೆ ಇರ ಬಹುದೆಂದು, ನೆನಸಿ, —ಅಪ್ಪಾ, ಮೀನುಗಳಿರಾ! ಈಗ ಬಹಳ ಕುಣಿದಾಡುತ್ತೀರಿ, ಇಂದೋ? ನಾಳೆಯೋ? ಬೆಸ್ತರವನು ಬಂದು, ನಿಮ್ಮನ್ನು ಹಿಡಿಯ ನಿಶ್ಚೈಸಿ ಕೊಂಡಿದ್ದಾನೆ; ಆದದರಿಂದ ಶೀಘ್ರವಾಗಿ ನಾಶವಾಗುವಿರಿ; ತಡೆಯದೆ ಬೇರೊಂದು ಸ್ಥಳ ಶೇರುವದು ವಾಸಿ ಎಂದು, ಹೇಳಿತು. ಅದನ್ನು ಕೇಳಿ, ಮೀನುಗಳೆಲ್ಲಾ ಕೊಕ್ಕರೆಯನ್ನು ನೋಡಿ, ಹೀಗೆಂದವು—ಎಲೇ ಪರಜೀವಹಿತಚಿಂತಕನೇ! ನಾವು ನಡೆಯಲಾರೆವು, ಆದದರಿಂದ ನಮ್ಮಲ್ಲಿ ಕರುಣವಿಟ್ಟು, ನಮ್ಮನ್ನು ಬೇರೊಂದು ಕೆರೆಗೆ ತೆಗದು ಕೊಂಡು ಹೋಗೆಂದು, ಪ್ರಾರ್ಥನೆ ಮಾಡುತ್ತೇವೆ. ಅದನ್ನು ಕೊಕ್ಕರೆಯು ಕೇಳಿ, ನನ್ನ ಭಾಗ್ಯಕ್ಕೇನು ಕೊರತೆ? ನನಗೆ ಆಹಾರವು ತನ್ನಷ್ಟಕ್ಕೆ ಬರುತ್ತದೆ

ಅಲ್ಲ? ಎಂದು ಮನಸ್ಸಿನಲ್ಲಿ ಹಿಗ್ಗಿ, ಒಂದೊಂದು ಮೀನನ್ನು ಕೊಕ್ಕಿನಿಂದ ಹಿಡಿದು ಕೊಂಡು ಹೋಗಿ, ತನ್ನ ವಾಸಸ್ಥಾನದಲ್ಲಿ ಶೇರಿ, ಕೆಲವನ್ನು ತಿಂದು, ಕೆಲವನ್ನು ಒಣ ಹಾಕಿ, ತಿರುಗಿ ಆ ಕೊಳದ ಏರಿಗೆ ಬಂದು, ಕೂತಿತು. ಕೊಳದೊಳಗಣ ಒಂದು ಏಡಿಯು ಕೊಕ್ಕರೆಯ ಸಮೀಪಕ್ಕೆ ಬಂದು, — ಬಕ ಮುನೀಶ್ವರರೇ? ನಾನೇನು ಪಾಪ ಮಾಡಿದ್ದೇನೆ? ನನ್ನ ಮಾತ್ರ ರಕ್ಷಿಸ ನಿಮಗೆ ಮನಸ್ಸು ಬರುವದಿಲ್ಲವೋ? ಕೃಪೆ ಮಾಡಿ, ಮೀನುಗಳ ಹಾಗೆ ನನ್ನನ್ನು ಸಹ ತಕ್ಕೊಂಡು ಹೋಗಿ, ಕಾಪಾಡ ಬಾರದೇ? ಎಂದು ಮೊರೆ ಇಟ್ಟಿತು. ಹಾಗೆಯೇ ಮಾಡುವೆನೆಂದು, ಉಪಚಾರ ಹೇಳಿ, ಕೂಡಲೇ ಮೀನು ತೆಗದು ಕೊಂಡು ಹೋದ ಪ್ರಕಾರ ಏಡಿಯನ್ನು ಸಹ ಕೊಕ್ಕಿನಲ್ಲಿ ಹಿಡಿದು ಕೊಂಡು, ಆಕಾಶಮಾರ್ಗವಾಗಿ ಹೋಗಿ, ತನ್ನ ಸ್ಥಾನಕ್ಕೆ ಸಮೀಪ ಬರಲು, — ಅಲ್ಲಿ ನೆಲದ ಮೇಲೆ ಬಿದ್ದು ಇರುವ ಮೀನುಮುಳ್ಳುಗಳ ರಾಶಿಯನ್ನು ನೋಡಿ, ಮೀನುಗಳಿಗೆ ಆದ ಗತಿಯೇ ತನಗೂ ಬರುವದೆಂದು ನೆನಸಿ, ಕೊಕ್ಕರೆಯ ಗಂಟ್ಲನ್ನು ಕಾಲುಗಳ ಸಂದಿಗೆ ಶಿಕ್ಕಿಸಿ ಕೊಂಡು, ಎರಡು ತುಂಡು ಮಾಡಿ, ತಾನೊಂದು ಕೊಳದಲ್ಲಿ ಬಿದ್ದು, ಪ್ರಾಣವನ್ನು ತಪ್ಪಿಸಿ ಕೊಂಡಿತು.

ಆದದರಿಂದ ಪರರನ್ನು ಕೆಡಿಸಿ, ತಾನು ಸುಖ ಪಡ ಬೇಕೆಂದಿರುವ ಠಕ್ಕನು ತಾನಾಗಿ ತನ್ನನ್ನು ಕೆಡಿಸಿ ಕೊಳ್ಳುತ್ತಾನೆ.

"ಪರ ಕೇಡು ತನ್ನ ಕೇಡು ಎಂದ ಹಾಗೆ."



ಮತ್ತೊಂದು ಜಾತೀ ಜಲಪಕ್ಷಿ (Flamingo).

## 35. OWLS, FOWLS ETC.

## ೩೫. ಗೂಬೆ, ಕೋಳಿ ಮೊದಲಾದದ್ದು

“ನರಿಗಳೂರನು ಶೇರುವವೆ? ವಾ—
ಸರದ ಬೆಳಕಿಗೆ ಗೂಗೆಗಳು ಸಂ—
ಚರಿಸುವವೆ? ಬೆಳದಿಂಗಳಿಷ್ಟವೆ ಜಾರ ಚೋರರಿಗೇ?||
ಸರಸಗೀತಾಪ್ರಹುಡಿ ಗೊಲ್ಲರಿ—
ಗರಿಯಲಹುದೇ? ದುರ್ವ್ಯಸನದಿಂ—
ದುರಿವಪಾತಕಗೇತಕ್ಕೈಸನ್ಮಾರ್ಗದಭ್ಯಾಸಾ?„||

ಗೂಬೆ.

ಗೂಬೆಗಳಲ್ಲಿ ಮುಖ್ಯವಾಗಿ ಆರು ಜಾತಿಯವೆ; ದೊಡ್ಡದು ೨ ಅಡಿ ಉದ್ದವಾದದ್ದು; ಅದರ ಕಿವಿ ದೊಡ್ಡದು, ಅದರ ಉಗುರುಗಳ ಪರ್ಯಂತರ ಗರಿಗಳು. ಅದನ್ನು ಪಳಕಿಸಿ, ಬೇಟೆಯಾಡಲಿಕ್ಕೆ ಪ್ರಯೋಗಿಸುವದುಂಟು. ಅದು ತನ್ನ ಉಗುರುಗಳಿಂದ ದೊಡ್ಡ ಘಾಯ ಮಾಡಬಹುದು. ಕಾಡುಗೋಳಿ, ಕಾಗೆ, ಚಿಕ್ಕ ಮೊಲ, ಇಲಿ, ಕಣ್ಲುಕಪಟೆ ಇತ್ಯಾದಿ ಅದರ ಆಹಾರ.

ಗೂಬೆಯು, ರಾತ್ರೆಯಲ್ಲಿ ವಿಶೇಷವಾಗಿ ಕಣ್ಣು ಕಾಣಿಸುವದರಿಂದ, ಆವತ್ತು ಮೇವು ಸಂಪಾದಿಸುವದಕ್ಕಾಗಿ ಹೊರಗೆ ಸಂಚಾರ ಮಾಡುತ್ತಿರುವಾಗ ಧ್ವನಿ ಮಾಡುವದು. ಅದು ಮನೆಯ ಮಾಳಿಗೆಯ ಮೇಲಾಗಲಿ ಮನೆಗಳ ಸಮೀಪದಲ್ಲಾಗಲಿ ಹೂ ಹೂ ಎಂದು ಕೂಗಿದರೆ ಅಜ್ಞಾನಿಗಳು ಶಕುನವೆಂದು ಹೇಳುತ್ತಾರೆ; ಆ ಧ್ವನಿ ಕಿವಿಗೆ ಬಹಳ ಸಂಪಗೆ ಅಲ್ಲವೆಂಬುವದು ಹೌದು ಅಷ್ಟೆ!



ಕೋಳಿ.

ಕೋಳಿ ಮನುಷ್ಯರಿಗೆ ಬಹಳ ಪ್ರಯೋಜನಕರವಾದದ್ದು. ಹುಂಜವು ಕಾಲವರಿತು, ಕೂಗುವದು. ಹೆಣ್ಣುಕೋಳಿ ೧೫—೨೦ ಸರ್ತಿ ಮೊಟ್ಟೆಗಳು ಇಡುತ್ತದೆ. ಮೊಟ್ಟೆಗಳ ಮೇಲೆ ಕಾವಿಗೆ ಕೂತು, ಅವುಗಳಲ್ಲಿ ಮರಿಗಳನ್ನು ಹುಟ್ಟಿಸಿ, ಕಾಪಾಡುವದು. ಮನುಷ್ಯರು ಮರಿಗಳನ್ನು ಗೂಡುಗಳಲ್ಲಿಟ್ಟು, ಸಾಕಿ, ದೊಡ್ಡವುಗಳಾದ ಮೇಲೆ ಅಟ್ಟು ಉಣ್ಣುತ್ತಾರೆ.

"ಕೋಳೀ ಕಾಲಿಗೆ ಗೆಜ್ಜೆ ಕಟ್ಟಿದರೆ ತಿಪ್ಪೆ ಕೆದರದೆ ಇರುವದೋ?"

ಪಕ್ಷಿಗಳು ನಾನಾ ವಿಧ ರಮಣೀಯವಾದ ಗೂಡುಗಳನ್ನು ಕಟ್ಟುತ್ತವೆ. ಗೀಜಗವು ಕಾಲುಗಳಿಂದಲೂ ಕೊಕ್ಕಿನಿಂದಲೂ ಮಾಡುವ ಕೆಲಸ ಮನುಷ್ಯರು ಮಾಡುವ ಕೆಲಸದಷ್ಟು ವಿಚಿತ್ರವಾದದ್ದು. ಹೆಣ್ಣುಪಕ್ಷಿಯು ಗೂಡು ಕಾಯುತ್ತಿರುವಾಗ ಗಂಡುಪಕ್ಷಿ ಹೊರಗೆ ಹೊರಟು, ಆಹಾರವನ್ನು ಹುಡುಕಿ, ತಂದು ಕೊಡುವದು; ಕೆಲವು

ಜಾತೀ ಪಕ್ಷಿಯ ಗಂಡು ಸಹಾ ಕಾವಿಗೆ ಕೂಡ್ರುವದು. ಕೋಗಿಲೆಯು ಕಾಗೆ ಗೂಡು ಬಿಟ್ಟು ಹೊರಗೆ ಹೋದ ಸಮಯವ ನೋಡಿ, ಅದರ ಗೂಡಿಗೆ ಹೋಗಿ, ಮೊಟ್ಟೆ ಇಕ್ಕುತ್ತದೆ; ಅವುಗಳ ಮೇಲೆ ಕಾಗೆಯು ಕಾವಿಗೆ ಕೂತು, ಮರಿ ಮಾಡಿ, ಸಾಕುತ್ತದೆ; ಅದು ದೊಡ್ಡದಾದನಂತರ ಸ್ವಜಾತೀ ಪಕ್ಷಿಗಳ ಸಂಗಡ ಸೇರಿ ಕೊಳ್ಳುತ್ತದೆ.

ಒಂದು ಜಾಡಿಯಲ್ಲಿ ಎರಡು ವಿಧದ ತೈಲ ಉಂಟು, ಅದು ತೆರೆಯಲೂ ಮುಚ್ಚಲೂ ಕೂಡದು ಎಂಬ ಒಗಟಿನ ಅರ್ಥವು ಕೋಳಿಮೊಟ್ಟೇ. ಮೊಟ್ಟೆಯಲ್ಲಿ ಬಿಳೀ ರಸವೂ ಹಳದಿ ಬಂಣದ ಸತ್ವವೂ ಇರುವವು. ಹಳದಿ ಸತ್ವದಿಂದ ಮೊಟ್ಟೆಯೊಳಗೆ ಹುಟ್ಟಿದ ಮರಿಗೆ ಆ ಬಿಳೇ ರಸವು ಮೊಲೇ ಹಾಲಿನ ಹಾಗೆ. ಮೊಟ್ಟೆಗಳು ಒಳ್ಳೇ ಆಹಾರವಾಗಿವೆ.

## 36. FISHES

## ೩೬. ಮೀನುಗಳು

"ಮೀನು ನೀರೊಳಗಿದ್ದರೇನೈ?
ಧ್ಯಾನವನು ಬಕ ಮಾಡಲೇನದು?
ಕಾನನವನ್ ಆಶ್ರೈಸಿ, ಮರ್ಕಟವಿದ್ದರೇನಲ್ಲೀ? ||
ಮೌನದಲಿ ಕೋಗಿಲಿಯು ಇದ್ದರ—
ದೇನು ಫಲ? ಸುಜ್ಞಾನವಿಲ್ಲದೆ,
ಮೌನ ಮೊದಲಾದದರಲೇನ್ ಎಲೆ! ಮಗನೆ, ಕೇಳೆಂದಾ.„ || ೩೭ ||

ಅನುಭವಾಮೃತ, ೨ನೇ ಸಂಧಿ.

ಮತ್ಸ್ಯಗಳು ಸಹಸ್ರ ವಿಧಗಳಾಗಿವೆ. ಅವುಗಳಲ್ಲಿ ಬಹಳ ದೊಡ್ಡದು ತಿಮಿಂಗಿಲವು; ಇದಕ್ಕೆ ಇಂಗ್ಲಿಷ ಭಾಷೆಯಲ್ಲಿ ಹ್ವೇಲ್ ಎಂದು, ಹೇಳುತ್ತಾರೆ. ಅದರ ಉದ್ದವು ೬೦ ಅಡಿ ಇರುತ್ತದೆ. ಮನುಷ್ಯರು ಹಡಗು ಹತ್ತಿ, ಆ ಮೀನಿನ ಬ್ಬೇಟೆಗೆ ಹೋಗಿ, ಹಗ್ಗ ಕಟ್ಟಿದ ಈಟಿಗಳು ಎಸೆದು, ಅದನ್ನು ಕೊಂದು, ಒಂದೊಂದು ವೇಳೆ ೭೦,೦೦೦ ಸೇರು ತೂಕದ ಅದರ ಕೊಬ್ಬು ತಂದು, ಎಣ್ಣೆ ತೆಗೆದು, ಮಾರುತ್ತಾರೆ. ಸಮುದ್ರವ್ಯಾಘ್ರವೆಂದೆನ್ನಿಸಿ ಕೊಳ್ಳುವ ಒಂದು ಕಳ್ಳಮೀನು ಭಯಂಕರವಾದದ್ದು. ಅದು ಹನ್ನೆರಡು ಮೊಳ ಉದ್ದವಾಗಿದೆ; ತಾನು ನೋಡಿದ್ದನ್ನೆಲ್ಲಾ ಹಿಡಿದು ತಿನ್ನುವದೇ ಅದರ ಉದ್ಯೋಗವು. ಅದು ಹೆಚ್ಚು ಕಡಿಮೆ ೪೦೦ ಹಲ್ಲುಗಳುಳ್ಳದ್ದಾಗಿ, ಸಮುದ್ರದಲ್ಲಿ ಅತಿ ವೇಗದಿಂದ ಈಚಾಡುವದು.



ತಿಮಿಂಗಿಲದ ಬೇಟೆಗಾರರ ದೋಣಿಯನ್ನು ತಿಮಿಂಗಿಲವು ತನ್ನ ಬಾಲದಿಂದ ಹೊಡೆದ್ದು ಇಲ್ಲಿ ಕಾಣುತ್ತ ದೆ.

ಮೀನುಗಳು ನೀರಿನಲ್ಲಿ ಸಂಚರಿಸುವ ಕಾರಣ ಜಲಚರಗಳೆನ್ನಲ್ಪಡುತ್ತವೆ. ಈಚಾಡುವಾಗ ಹಡಗಿನ ಚುಕ್ಕಾಣಿಯಂತೆ ತಮ್ಮ ಬಾಲವನ್ನು ತಿರುಗಿಸುವದರಿಂದ ಹೋಗ ಬೇಕಾದ ದಿಕ್ಕಿಗೆ ಸುಲಭವಾಗಿ ಹೋಗುವವಲ್ಲದೆ ಅದರಿಂದಲೇ ಮುಖ್ಯವಾಗಿ ತಮ್ಮನ್ನು ಮುಂದಕ್ಕೆ ನೂಕಿಸುತ್ತವೆ. ಅವುಗಳ ಚರ್ಮದ ಮೇಲ್ಭಾಗದಲ್ಲಿ ಒಂದು ತರದ ಎಲುಬುಸಿಪ್ಪೆ ಇರುವದರಿಂದ ನೀರಿಗೆ ಭದ್ರವಾಗಿ, ನೆನೆಯವು. ಶರೀರವು ಹೊರಳದ ಹಾಗೆ ತಮ್ಮ ರೆಕ್ಕೆಗಳ ಆಟದಿಂದ ಅದನ್ನು ನೆಟ್ಟಗೆ ನಿಲ್ಲಿಸಿ ಕೊಳ್ಳುತ್ತವೆ. ಅವಕ್ಕೆ ರಕ್ತಶುಚೀಕರಣಕ್ಕಾಗಿ ಶ್ವಾಸಕೋಶವಿಲ್ಲ, ಆದರೆ ಕೊರಳಿನ ಇಕ್ಕಡೆಯಲ್ಲಿ ಎಲೆಗಳೋಪಾದಿ ಶ್ವಾಸಕರಣಗಳಿವೆ. ಆಕಾಶದಲ್ಲಿ ಪಕ್ಷಿ ಮೊದಲಾದವುಗಳ ಶ್ವಾಸಕ್ಕಾಗಿ ಘಾಳಿ ಇರುವ ಹಾಗೆ ಮೀನು ಏಡಿ ಮೊದಲಾದ ಜಲಚರಗಳ ಶ್ವಾಸಕ್ಕಾಗಿ ಅದು ನೀರೊಳಗೆ ಅದೆ. ಮೀನುಗಳ ಹೊಟ್ಟೆಯೊಳಗಣ ಚೀಲವು ಶ್ವಾಸಕರಣವಲ್ಲ, ಆದರೂ ಇಚ್ಛಾಪ್ರಕಾರ ಅದರೊಳಗೆ ಘಾಳಿ ತುಂಬಿಸಿ ಕೊಂಡು, ಬಿಡ ಬಹುದು. ಅದು ಘಾಳಿ ತುಂಬಿದ್ದಾದರೆ ಮೇಲಕ್ಕೆ ಏರುತ್ತವೆ, ಘಾಳಿ ಹೋದದ್ದಾದರೆ ಇಳಿಯುತ್ತವೆ. ಆ ಚೀಲವಿಲ್ಲದ ಕೆಲವು ಮೀನುಗಳು ಶ್ರಮೆಯಿಂದ ಸ್ವಲ್ಪ ಏರ ಬಹುದಾದರೂ ಮುಖ್ಯವಾಗಿ ನೀರಡೀ ಭಾಗದಲ್ಲಿ ಅವೆ.

ಮೀನುಗಳು ಸಾವಿರ ಕಟ್ಲೆಯಾಗಿ ಮೊಟ್ಟೆಗಳನ್ನಿಕ್ಕುತ್ತವೆ. ಸೂರ್ಯರಶ್ಮೆಯಿಂದ ಅವುಗಳಲ್ಲಿ ಮರಿಗಳು ಹುಟ್ಟಿ, ಕೂಡಲೇ ಆಹಾರವನ್ನು ಹುಡುಕಿ ತಿನ್ನುವದಕ್ಕೆ ಹೋಗುತ್ತವೆ.

ತೀರದ ಹತ್ತರ ಹೆಚ್ಚು ಕಾವು ಇರುವದರಿಂದಲೂ ಮೊಟ್ಟೆಗಳನ್ನು ಹೆಚ್ಚುವದಕ್ಕೆ ಹುಲ್ಲು ಸಿಕ್ಕುವದರಿಂದಲೂ ಆ ಕಡೆ ತಮ್ಮ ಮೊಟ್ಟೆಗಳನ್ನು ಇಕ್ಕುವದು ಮೀನುಗಳಿಗೆ ಪದ್ಧತಿ.

ಸಮುದ್ರದಲ್ಲಿ ಮೀನುಗಳು ಸಾರ್ವದಾ ಒಂದು ಮತ್ತೊಂದು ನುಂಗುತ್ತವೆಂದು, ತೋರಿಸುವದಕ್ಕೆ ಜೈಮಿನಿಯಲ್ಲಿ ಒಂದು ಪದ ಬರದದೆ, ಅದೇನಂದರೆ:

“ಸುಳಿದೊಂದು ಮೀನ ಮೀನ್ನುಂಗಿತಾಮೀನನಾ
ಗಳೆ ನುಂಗಿತೊಂದು ಮೀನಾ ಮೀನ ನುಂಗಿದುದು
ಬಳಿಕೊಂದು ಮೀನದಂ ಮತ್ತೊಂದು ಮೀನ್ನುಂಗಿತಾಮೀನ ನುಂಗಿತೊಂದೂ.||
ತೊಳಲುತೊಂದೊಂದನೊಂದಿಂತು ನುಂಗಲ್ತಿಮಿಂ—
ಗಿಲಮೆಲ್ಲಮಂ ನುಂಗುತಿರ್ಪುದೆನೆ,—ಬೆದರಿ, ಮೀನ್—
ಗಳೆ ತಿರುಗಿರ್ದವೆರೆಕೆಗಳೊಡನೆ ಮುಂಪೊಕ್ಕ ಗಿರಿಗಳೆಡೆಯಾಡುವಂತೇ.,,||

ಏಡಿಗಳಲ್ಲಿ ಒಕ್ಕೈ ಏಡಿ, ಇಕ್ಕೈ ಏಡಿ ಮೊದಲಾದ ಕೆಲವು ವಿಧಗಳಿರುತ್ತವೆ. ಅವುಗಳು ಬೆನ್ನಿನ ಮೇಲಣ ಚಿಪ್ಪನ್ನು ತೆಗದು ಹಾಕ ಬೇಕಾದರೆ ಬಿಲಗಳೊಳಗೆ ಹೋಗುತ್ತವೆ. ಸಮುದ್ರ ತೀರದಲ್ಲಿ ಬಿದ್ದಿರುವ ಶಂಖ, ಗುಳ್ಳೆ, ಚಿಪ್ಪು ಮೊದಲಾದವುಗಳು ಬಹು ಸೌಂದರ್ಯವಾಗಿವೆ. ಒಂದು ಜಾತಿಯ ಚಿಪ್ಪುಮೀನುಗಳ ಚಿಪ್ಪಿನಲ್ಲಿ ಬಹಳ ಕ್ರಯವುಳ್ಳ ಮುತ್ತುಗಳಾಗುತ್ತವೆ. ಈ ಚಿಪ್ಪುಗಳನ್ನು ಸಮುದ್ರದೊಳಗೆ ಮುಳುಗಿ, ಮೇಲಕ್ಕೆ ತಕ್ಕೊಂಡು ಬರುತ್ತಾರೆ.

ಹಾಲು, ಸಾರ, ವಂಜರ, ಪಡವ, ಬಾಳೆ, ಅರೆ ಮೊದಲಾದವುಗಳು ಸಮುದ್ರದ ಮೀನುಗಳಲ್ಲಿ ಆಹಾರಕ್ಕೆ ಉತ್ತಮವಾದವುಗಳು. ತೊರವ, ಜಲ್ಲ, ಮೊಳಗ ಮೊದಲಾದವುಗಳು ನದಿಗಳಲ್ಲಿಯೂ ಕೊಳಗಳಲ್ಲಿಯೂ ಇರುತ್ತವೆ. ಬೆಳ್ಳಿಯ, ಬಂಗಾರದ ಮೀನುಗಳೆಂದು, ಸುಂದರವಾದ ಎರಡು ತರದ ಮೀನುಗಳವೆ.

ಗುಂಡುಮುಳುಗಿ ಮುಂತಾದ ಪಕ್ಷಿಗಳು ನೀರಿನಲ್ಲಿ ಮುಳುಗಿ, ಮೀನುಗಳನ್ನು ಹಿಡಿದು ತಿನ್ನುತ್ತವೆ; ಮನುಷ್ಯರು ಬಲೆಗಳಿಂದಲೂ ಗಾಳಗಳಿಂದಲೂ ಮೀನುಗಳನ್ನು ಹಿಡಿಯುತ್ತಾರೆ; ಅದಲ್ಲದೆ ಮೀನಿಗೆ ಮತ್ತು ಶತ್ರುಗಳು ಇರುವರು. ಅದರ ಸಲುವಾಗಿ ನಾಶವಾಗದ ಹಾಗೆ ಮೀನುಗಳು ಬಹಳ ಮೊಟ್ಟೆ ಇಕ್ಕುತ್ತವೆ; ಒಂದು ಜಾತೀ ಮೀನಿನ ಹೊಟ್ಟೆಯೊಳಗಣ ಮೊಟ್ಟೆಚೀಲ ೨೦೦ ಸೇರು ತೂಗುತ್ತದೆ, ಒಂದೊಂದು ಸೇರಿನಲ್ಲಿ ೩೦೦೦೦ ಮೊಟ್ಟೆಗಳಿರುತ್ತವೆ.



# 37. REPTILES

# ೩೭. ಸರೀಸೃಪ, ಕೀಟಕಾದಿಗಳು

"ಮರುಳು ಹಿಡಿದವ ವಿಷದ ಗುಣಿಕೆಯ—
ನರದು, ಕುಡಿವಂದದಲಿ ಮಾಯಾ—
ವರಣದಲಿ ಮರದಿರ್ದು ತನ್ನನು ಮೂಢಭಾವದಲೀ, ||
ಪರಿಪರಿಯ ಸಂಸಾರಪಾಶದಿ
ಹಿರಿದು, ಬಿಗಿ ವಡದಿರ್ದ ಮನುಜಗೆ
ದೊರಕುವದೆ ಪರಸೌಖ್ಯ? ತೆರುಳಿಯ ಹುಳುವಿನಂತಿಹನೂ.,, || ೨೫ ||

ಅನುಭವಾಮೃತ ೨ನೇ ಸಂಧಿ.



ಲಂಡನ್ ಪಟ್ಟಣದಲ್ಲಿಯ ಸರೀಸೃಪದರ್ಶನಸಾಲೆ.

ಭೂಮಿಯಲ್ಲಿ ಹರಿದಾಡುತ್ತಾ, ಹಾರುತ್ತಾ, ನಡೆಯುತ್ತಾ ಬಾಳುವ ಅನೇಕ ಜಂತುಗಳವೆ; ಕೆಲವು ಬಹಳ ಸುಂದರವಾದವುಗಳು, ಕೆಲವು ವಿಕಾರವಾದವುಗಳು. ವಿಷಜಂತುಗಳಾದ ಹಾವುಗಳಲ್ಲಿ ಸಹ ಕೆಲವು ಅತಿ ರಮ್ಯವಾಗಿರುತ್ತವೆ. ಅವುಗಳಲ್ಲಿ ನಾಗರ

ಹಾವು, ಕೇತಕಿಹಾವು, ಕನ್ನಡಿಹಾವು ಮೊದಲಾದವುಗಳು ಬಹಳ ವಿಷ ಉಳ್ಳವುಗಳಾಗಿವೆ. ಹಾವುಗಳು ಆರು ತಿಂಗಳಿಗೆ, ವರ್ಷಕ್ಕೆ ಒಮ್ಮೆ ಹೆರೆ ಬಿಡುತ್ತವೆ.

ಹಲ್ಲಿ, ಓತಿ, ಉಡು ಮೊದಲಾದವುಗಳು ಒಂದೇ ಜಾತಿಯಾಗಿರುತ್ತವೆ. ಮನೇ ಗೋಡೆಗಳ ಮೇಲೆ ಹರಿದಾಡುವ ಹಲ್ಲಿಗೆ ಗೌಳಿ ಎಂದು ಹೆಸರು. ಗೌಳಿಯ ನುಡಿಗಳನ್ನು ವಿವರಿಸುವ ಶಾಸ್ತ್ರವೆಂದು, ಮೋಸಗಾರರು ಸುಳ್ಳುಮಾತುಗಳನ್ನು ಪುಸ್ತಕದಲ್ಲಿ ಬರದು, ಇಟ್ಟು ಕೊಂಡು ಇರುತ್ತಾರೆ. ಚೇಳುಗಳಲ್ಲಿ ಕಪ್ಪು ಚೇಳುಗಳೆಂದೂ ಕೆಂಪು ಚೇಳುಗಳೆಂದೂ ಬಿಳೀ ಚೇಳುಗಳೆಂದೂ ಮೂರು ವಿಧಗಳು.



ಚೇಳು.

ವಿಷವುಳ್ಳ ಕೊಂಡಿ ಇರುವ ಕಣಜಹುಳವು ಅಥವಾ ಭೃಂಗಿ ಗೂಡು ಕಟ್ಟಿ, ಹುಳಗಳನ್ನು ತಂದು ಅದರಲ್ಲಿಟ್ಟು, ತನ್ನ ಉಪದೇಶದಿಂದ ಅವುಗಳಿಗೆ ಸಹ ತನ್ನ ವರ್ಣವನ್ನೇ ಉಂಟು ಮಾಡುತ್ತದೆಂದು, ಕಲ್ಪನಾಶಾಸ್ತ್ರದಲ್ಲಿ ಒಂದು ಕಥೆ ಉಂಟು. ಆದರೆ ಅದು ಗೂಡು ಕಟ್ಟಿ, ಮೊಟ್ಟೆ ಇಟ್ಟು, ಅದರಿಂದ ಹುಟ್ಟಿ ಬಂದ ಮರಿಗಳಿಗೆ ತಿಂಡಿಗಾಗಿ ಜಾಕೆಯಿಂದ ಹುಳಗಳ ತಂದಿಟ್ಟು, ತಿರಿಗಿ ತಿರಿಗಿ ಬಂದು, ನೋಡಿ ಕೊಳ್ಳುತ್ತಾ ಇರುವದು; ತಕ್ಕ ಕಾಲದಲ್ಲಿ ಮರಿಗಳು ದೊಡ್ಡವಾಗಿ, ರೆಕ್ಕೆಗಳು ಹುಟ್ಟಿ, ಗೂಡಿನೊಳಗಿಂದ ಹಾರಿ, ಹೊರಗೆ ಹೋಗುವವು. ಕಣಜವು ಜೇನುಹುಳದ ಶತ್ರುವಾಗಿದೆ.



ಜೇಡ ಹುಳ.

ಜೇಡಹುಳವು ತನ್ನ ನೂಲಿನಿಂದ ಯುಕ್ತಿಯಾಗಿ ಒಂದು ಬಲೆಯನ್ನು ಹೆಣೆದು, ಬಲೆಯಲ್ಲಿ ಶಿಕ್ಕಿ ಕೊಂಡ ಹುಳಗಳನ್ನು ಭಕ್ಷಿಸುವದು. ಒಂದು ಜಾತೀ ಜೇಡ

ಹುಳವು ತನಗಿಂತ ದೊಡ್ಡ ಜಂತುವಾದ ಚೇಳುಗಳನ್ನು, ಚಿಕ್ಕ ಪಕ್ಷಿಗಳನ್ನು ಸಹ ಹಿಡಿದು ಕೊಂಡು ಭಕ್ಷಿಸುವದಂತೆ.



ಜೇನು ಹುಳ.

ರೆಕ್ಕೇ ಹುಳಗಳಲ್ಲಿ ಭ್ರಮರಗಳೂ ಪಾತರಗಿತ್ತಿ ಎಂಬವುಗಳೂ ಬಹಳ ಸುಂದರವಾಗಿವೆ. ಒಂದು ಜಾತಿಯ ಮನೇ ನೊಣದ ಎರಡು ಕಣ್ಣಾಗಿ ಕಾಣುವಂಥವುಗಳು ೪೦೦೦ ಚಿಕ್ಕ ಕಣ್ಣುಗಳಾಗಿವೆ.



ಅದರ ಗೂಡು.

ಜೇನುನೊಣ ಬಹಳ ಪ್ರಯೋಜನದ್ದಾಗಿದೆ. ಅದು ಪುಷ್ಪಗಳೊಳಗಿರುವ ಮಕರಂದವನ್ನು ತೆಗದು ಕೊಂಡು ಹೋಗಿ, ತನ್ನ ಗೂಡಿನಲ್ಲಿ ಸಂಗ್ರಹಿಸಿ ಇಟ್ಟು ಕೊಳ್ಳುತ್ತದೆ. ಜನರು ಶೀಯಾದ ಅದನ್ನು ಆಹಾರಕ್ಕಾಗಿ ತೆಗದು ಕೊಳ್ಳುತ್ತಾರೆ. ಅದರ ತೊಟ್ಟಿಯಲ್ಲಿ ಶಿಕ್ಕುವ ಮೇಣವು ಬತ್ತಿ ಮಾಡಿ, ಉರಿಸುತ್ತಾರೆ. ಒಂದು ಗೂಡಿನಲ್ಲಿ ಹೆಚ್ಚುಕಡಿಮೆಯಾಗಿ ಮೂವತ್ತು ಸಾವಿರ ಹುಳಗಳು ವಾಸಿಸುವವು. ಅವುಗಳಲ್ಲಿ ಒಂದು ನೊಣವು ರಾಣೀ ಪಟ್ಟವನ್ನು ವಹಿಸಿ, ಮಿಕ್ಕವುಗಳು ಅದಕ್ಕೆ ಸೇವೆ ಮಾಡುತ್ತಾ ಇರುವವು. ರಾಜತ್ವವನ್ನು ವಹಿಸಿದ ಆ ನೊಣವು ಮಾತ್ರವೇ ಮೊಟ್ಟೆ ಇಡುತ್ತದೆ; ಅದು ಕೆಲವು ವರುಷ ಬದುಕ ಬಹುದು. ಮೈಗಳ್ಳರಾದ ಗಂಡುನೊಣಗಳಿಗೆ ಕೊಂಡಿಗಳಿಲ್ಲ; ಇವು ಬಹಳ ದಿವಸ ಬದುಕಿದರೆ ಉದ್ಯೋಗದ ನೊಣಗಳು ಅವನ್ನು ಕೊಲ್ಲುತ್ತವೆ. ಶಿಲ್ಪಿಗಳು ಕೂಡಿ ಕಟ್ಟುವ ಮಣಿಮಂಟಪವು ಜೇನುನೊಣದ ಗೂಡಿಗೆ ಸರಿ ಬಾರದು.


ಮಿಡಿತೆ.

ಒಂದು ಮಿಡಿತೆಯು ಮಳೆಗಾಲದಲ್ಲಿ ಛಳಿಯಿಂದಲೂ ಹಶಿವೆಯಿಂದಲೂ ಬಹಳ ಬಳಲಿಕೆ ಪಟ್ಟು, ಜೇನಿನ ಗೂಡಿನ ಹತ್ರಕ್ಕೆ ಹಾರಟು ಹೋಗಿ, ಅಲ್ಲಿ ಮುತ್ತಿಕೊಂಡು ಇದ್ದ ನೊಣಗಳನ್ನು ನೋಡಿ, ಓ ನೊಣಗಳಿರಾ! ನನ್ನ ಮೇಲೆ ದಯ ಮಾಡಿ, ನಾಲ್ಕೈದು ಬಿಂದುಜೇನನ್ನು ಕೊಡಿರೆಂದು ದೈನ್ಯದಿಂದ ಬೇಡಿ ಕೊಳ್ಳಲು, — ಅದನ್ನು ಒಂದು ಮಕ್ಷುಕವು ಕೇಳಿ, ಸುಕಾಲವೆಲ್ಲಾ ನೀನು ಸುಮ್ಮನಿದ್ದು, ಈಗ ನಮ್ಮನ್ನು ಜೇನು ಕೇಳುವದಕ್ಕೆ ನಾಚಿಗೆ ಇಲ್ಲವೇ? ನನ್ನ ಹಾಗೆ ನೀನು ಸೋಮಾರಿತನ ಬಿಟ್ಟು, ತಿಂಡಿಗೆ ಬೇಕಾದ ಪದಾರ್ಥಗಳನ್ನು ಸಂಗ್ರಹ ಮಾಡಿ ಇಟ್ಟು ಕೊಳ್ಳ ಬಾರದಿತ್ತೇ? ಎಂದು, ಪರಿಹಾಸ್ಯ ಮಾಡಿತು. ಅದನ್ನು ಕೇಳಿ, ಮಿಡಿತೆಯು — ಆ ಕಾಲದಲ್ಲಿ ಮೂಢತ್ವದಿಂದ ಬರವು ಬರುವದನ್ನು ಲೇಶವಾದರೂ ನೆನಿಸದೆ, ಬಹಳ ಸಂತೋಷದಿಂದ ಉಬ್ಬಿ, ಆಟಪಾಟಗಳಲ್ಲಿ ನನ್ನ ಕಾಲವೆಲ್ಲಾ ಕಳದು, ಮಳೆಗಾಲಕ್ಕೆ ಬೇಕಾದ ತಿಂಡಿಯನ್ನು ಕೂಡಿಸಿ ಇಡ ಬೇಕೆಂತ ಎಷ್ಟು ಮಾತ್ರವೂ ನೆನಸಲಿಲ್ಲವೆಂದು, ಹೇಳಿ ಕೊಂಡಿತು. ನೊಣವು ಅದನ್ನು ಕೇಳಿ — ಮಳೆಗಾಲಕ್ಕೆ ಬೇಕಾದ ಪದಾರ್ಥವನ್ನು ತಕ್ಕ ಕಾಲದಲ್ಲಿಯೇ ಶೇರಿಸಿ ಇಟ್ಟು ಕೊಳ್ಳ ಬೇಕು; ಸೋಮಾರಿಯಾಗಿರುವವರು ಮಳೆಗಾಲ ಬಂದಾಗ ಉಪವಾಸ ಬಿದ್ದು, ಹಶಿವೆಯಿಂದ ಬಾಧೆ ಪಡುವರು ಎಂದು ಬುದ್ಧಿ ಹೇಳಿ, ಲೇಶವಾದರೂ ಸಹಾಯ ಮಾಡದೆ, ಕಳುಹಿಸಿತು. ಆದದರಿಂದ ಯಾವನಾದರೂ ಬಾಲ್ಯವಯಸ್ಸಿನಲ್ಲಿ ಕಷ್ಟ ಪಟ್ಟು ವಿದ್ಯಾಧನವನ್ನು ಸಂಗ್ರಹಿಸಿ ಕೊಳ್ಳದೆ, ಕಾಲವನ್ನು ವ್ಯರ್ಥ ಕಳದರೆ ದೊಡ್ಡವನಾದ ಮೇಲೆ ದರಿದ್ರನಾಗಿ, ತಿನ್ನುವದಕ್ಕೆ ಅನ್ನವೂ ಹೊದಿಯುವದಕ್ಕೆ ಬಟ್ಟೆಯೂ ಇಲ್ಲದೆ ಬಹಳ ಕಷ್ಟ ಪಡುವನು.

ರೇಶ್ಮೆಹುಳವು ನಾಲ್ಕವಸ್ಥೆಗಳುಳ್ಳದ್ದೆಂದು, ಹೇಳ ಬಹುದು. ಅದು ಮುಟ್ಟ ಮೊದಲು ಮೊಟ್ಟೆಯಾಗಿದ್ದು, ತರುವಾಯ ಮರಿಯಾಗುವದು; ಬಳಿಕ ಕೋಶರೂಪವಾಗಿ, ತದನಂತರ ರೆಕ್ಕೆಗಳು ಹುಟ್ಟಿ ಪತಂಗರೂಪವಾಗಿ ಹಾರುವದು. ಹೀಗೆ ಮನುಷ್ಯರು ಸಹಾ ಮರಣದ ತರುವಾಯ ಬೇರೆ ರೂಪ ಧರಿಸುವರೆಂಬುವದಕ್ಕೆ ಸಂದೇಹವಿಲ್ಲ.

ಇರುವೆ ಮೊದಲಾದ ಜಂತುಗಳು ಮಲಿನವಾದ ಪದಾರ್ಥಗಳನ್ನು ನಿವಾರಿಸುವದರಿಂದ ಬಹಳ ಉಪಕಾರಿಗಳಾಗಿರುತ್ತವೆ. ಇರುವೆಗಳು ಮನೆ ಕಟ್ಟುವದರಲ್ಲಿಯೂ ಆಹಾರವನ್ನು ಕೂಡಿಟ್ಟು ಕೊಳ್ಳುವದರಲ್ಲಿಯೂ ಬಹಳ ಚಾತುರ್ಯವಾಗಿವೆ; ಸೋಮಾರಿಯಾದ ಚಿಕ್ಕವನು ಇರುವೆಗಳನ್ನು ನೋಡಿ ಬುದ್ಧಿ ಕಲಿತು ಕೊಳ್ಳ ಬಹುದು.

## 38. INHABITANTS OF A DROP OF WATER

## ೩೮. ಒಂದು ಹನಿನೀರಿನಲ್ಲಿ ಇರುವ ಪ್ರಾಣಿಗಳನ್ನು ಕುರಿತು

"ಸುಲಭ ಯಾವದು ರಚಿಸಲಿಕ್ಕೆ?
ಹಲವು ಕೋಟಿಯ ತಾರಕಂಗಳೊ,
ಜಲದ ಬಿಂದುವೊ, ಯಿಳೆಯೊ, ಧೂಳಿಯೊ, ರವಿಯೊ, ಚಂದ್ರಮನೋ, ||
ಬಲಿದ ದೇವರ ದೂತಗಣಗಳೊ,
ಇಲೆಯೊಳಿಹ ಬಲು ಮಾನವರುಗಳೊ,
ನೆಲದಿ ಯುದಕದಿ ಯಣುವ ಪ್ರಾಣಿಯೊ ಸೃಷ್ಟಿಕರ್ತಂಗೇ?" ||

ಒಂದು ಹನಿನೀರನ್ನು ಸೂಕ್ಷ್ಮದರ್ಶಕಯಂತ್ರ ಎಂಬ ಕನ್ನಡಿಯಿಂದ ನೋಡಿದರೆ ಅದರಲ್ಲಿ ಅಣುಪ್ರಾಣಿಗಳು ಗುಂಪಾಗಿ ಕಂಡು, ಆಶ್ಚರ್ಯ ಪಡುತ್ತೇವೆ. ಮೂಲ ಪರಿಮಾಣಕ್ಕೆ ೬೦೦ ಪಾಲು ಹೆಚ್ಚು ದೊಡ್ಡದಾಗಿ ಕಾಣುವ ಕೆರೆನೀರಿನ ಒಂದು ಹನಿಯು ಈ ೧ನೇ ಚಿತ್ರದಿಂದ ಇಲ್ಲಿ ತೋರಿಸಿ ಅದೆ. ಅದರಲ್ಲಿ ಕಾಣುವ ಎಲ್ಲಾ ಆಕಾರಗಳು ಬೇರೆ ಬೇರೆ ಅಣುಪ್ರಾಣಿಗಳಾಗಿರುತ್ತವೆ. ಅವುಗಳಿಗೆ ಎಷ್ಟೋ ತರದ ಆಕಾರಗಳುಂಟು! ಅವುಗಳ ಚಲನೆಗಳು ಒಂದಕ್ಕೊಂದು ಭೇದವಾಗಿರುತ್ತವೆ: ಕೆಲವು ಹರಿದು, ತಮ್ಮ ಉದ್ದ ಶರೀರಗಳನ್ನು ಮೆಲ್ಲಕ್ಕೆ ಎಳಕೊಂಡು ಹೋಗುತ್ತವೆ; ಬೇರೆಯವುಗಳು ಆಶ್ಚರ್ಯಕರವಾದ ತ್ವರೆಯಿಂದ ಅತ್ತಿತ್ತ ಸುಳಿದಾಡಿ, ಕುಣಿಯುತ್ತವೆ. ಅವುಗಳ ಸಂಖ್ಯೆಯು ಮಿತಿ ಮೀರುತ್ತದೆ. ಒಂದು ಶೇರು ಕೆರೆನೀರಿನಲ್ಲಿ ೧೬ ನೂರುಕೋಟಿ ಜೀವವಿ



೧. ಕೆರೆನೀರಿನ ಹನಿ.

ರುವ ಅಣುಪ್ರಾಣಿಗಳು ಇರುತ್ತವೆಂದು, ಕಂಡು ಬಂದದೆ. ಅವುಗಳಲ್ಲಿ ಕೆಲವಕ್ಕೆ ಬಾಯಿ, ಕೆಲವಕ್ಕೆ ಜೀರ್ಣಕೋಶ, ಕೆಲವಕ್ಕೆ ಕರುಳು, ಕೆಲವಕ್ಕೆ ಹಲ್ಲು, ಕೆಲವಕ್ಕೆ ಕಣ್ಣು, ಬೇರೆಯವುಗಳಿಗೆ ಕಾಲುಗಳು ಇರುವದು ಕಾಣುತ್ತದೆ. ಮತ್ತು ಅವು ಕೆಂಪಾಗಿಯೂ ಹಸುರಾಗಿಯೂ ನೀಲವಾಗಿಯೂ ಕಪ್ಪಾಗಿಯೂ ಅರಸಿನವರ್ಣವಾಗಿಯೂ ಇರುವ ಬೇರೆ ಬೇರೆ ವಿಧದ ಪ್ರಾಣಿಗಳಾಗಿರುತ್ತವೆ. ಕೆಲವು ಛೇದವಾಗುವದರಿಂದ, ಕೆಲವು ಮೊಟ್ಟೆ ಇಕ್ಕುವದರಿಂದ ವೃದ್ಧಿಯಾಗುತ್ತವೆ.

ಮೇಲಿನ ಹನಿಯಲ್ಲಿ ರಾಶಿಯಾಗಿ ತೋರುವ ಅಣುಪ್ರಾಣಿಗಳಲ್ಲಿ ಕೆಲವನ್ನು ಬಹಳ ದೊಡ್ಡವಾಗಿ ಛಾಪಿಸಿ, ವರ್ಣಿಸುವ. ಅವುಗಳಲ್ಲಿ ಕೆಲವು ಅತಿ ಮೃದುವಾಗಿವೆ, ಬೇರೆಯವುಗಳ ಮೈಯ ಮೇಲೆ ಚಿಪ್ಪುಗಳವೆ.



೨. ಚಿಪ್ಪಣುಪ್ರಾಣಿಗಳು.

ಚಿಪ್ಪಿನವುಗಳಲ್ಲಿ ಕೆಲವು ಇಲ್ಲಿ ಛಾಪಿಸಿರುವ ಈ ೨ನೇ ಚಿತ್ರದಲ್ಲಿ ತೋರುತ್ತವೆ. ಚಿಪ್ಪಣುಪ್ರಾಣಿಗಳಲ್ಲಿ ಕೆಲವು ಒಂದಕ್ಕೊಂದು ತಾಗಿರುವ ನಳಿಗೆಗಳಂತೆಯೂ ಒಂದು ನಳಿಗೆಯು ಮತ್ತೊಂದಕ್ಕಿಂತ ಮುಂದೆ ಮುಂದೆ ಕ್ರಮವಾಗಿ ಹೋದ ಹಾಗೆಯೂ ಇರುತ್ತವೆ; ಕೆಲವು ನೆಟ್ಟಾನಾಕಾರವಾಗಿಯೂ, ಬೇರೆಯವುಗಳು ಅಂಕುಡೊಂಕಾಕಾರವಾಗಿಯೂ ಇರುತ್ತವೆ. ಅವುಗಳ ಚಿಪ್ಪು ಕಾಂಚಿನ ಹಾಗಿದ್ದು, ಜಂತು ಸತ್ತರೂ ಕೆಡುವದಿಲ್ಲ. ಈ ಜಾತೀ ಜಂತು ಮೇಲೆ ಹೇಳಿದ ಎರಡು ಪ್ರಕಾರವಾಗಿ ವೃದ್ಧಿಸುತ್ತದೆ.

ಮೂರನೇ ಚಿತ್ರದಲ್ಲಿ ಕಾಣುವ ಕಾಮರೂಪಿಗಳು ಅಂದರೆ ಶರೀರ ಚಿಕ್ಕ ದೊಡ್ಡ ಮಾಡ ಶಕ್ತಿಯುಳ್ಳ ಮೃದುವಾದ ಅಣುಪ್ರಾಣಿಗಳಾಗಿವೆ. ಅವಕ್ಕೆ ಬೂದಿವರ್ಣದ ಶರೀರ ಅದೆ. ಅವುಗಳ ಮೂಲಾಕಾರವು ಉರುಟಾಗಿದ್ದರೂ ಯಾವಾಗಲೂ ತಮ್ಮ ಆಕಾರವನ್ನು ಬದಲಿಸುತ್ತಾ ಅವೆ. ಅವುಗಳ ದುಂಡಗಾದ ಮೂಲಾಕಾರವೂ ಅವುಗಳು ತಕ್ಕೊಳ್ಳುವ ನಾನಾ ತರದ ಆಕಾರಗಳೂ ಚಿತ್ರದಲ್ಲಿ ಕಾಣುತ್ತವೆ.



೩. ಕಾಮರೂಪಾಣುಪ್ರಾಣಿಗಳು.

ನಾಲ್ಕನೇ ಚಿತ್ರದಲ್ಲಿ ಕಾಣುವ ಕುಪ್ಪೀ ಅಣುಪ್ರಾಣಿಗಳು ಬಹಳ ಸೌಂದರ್ಯವಾದವುಗಳು. ಅವುಗಳ ಬಾಯಿಯ ಸುತ್ತಲೂ ಅಲ್ಲಾಡುವ ರೋಮಗಳು ಇವೆ. ಈ ಚಿತ್ರದಲ್ಲಿ ಅದರ ಸಾಧಾರಣವಾದ ಕುಪ್ಪೀ ಆಕಾರವೂ ಬಾಯಿ ಬೇಟೆಗೆ ತೆರದಾಕಾರವೂ ನುಂಗುವಾಕಾರವೂ ನುಂಗಿದ್ದೂ ಕಾಣುತ್ತದೆ. ಅವು ತಮಗಿಂತ ದೊಡ್ಡವಾದ ಬೇರೆ ಪ್ರಾಣಿಗಳನ್ನು ನುಂಗುತ್ತವೆ. ಪ್ರಥಮದಲ್ಲಿ ಅರ್ಧ ನುಂಗಿ, ಕಡೆಗೆ ಎಲ್ಲಾನು ನುಂಗಿ ಬಿಡುತ್ತವೆ.



೪. ಕುಪ್ಪೀ ಅಣುಪ್ರಾಣಿಗಳು.

ಐದನೇ ಚಿತ್ರದಲ್ಲಿ ತಗಡಅಣುಪ್ರಾಣಿಗಳು ಬರದವೆ. ಅವುಗಳಲ್ಲಿ ಗುಳಿಗೆಗಳು ಅವೆ; ಇವುಗಳ ಸುತ್ತಲಿನ ಪದಾರ್ಥದ ಪಾರಾಗಿ ನೋಡ ಬಹುದು. ಸಮಯಾನುಸಾರವಾಗಿ ಒಂದು ಅಥವಾ ಕೆಲವು ಗುಳಿಗೆಗಳು ವಿಂಗಡವಾಗಿ, ಬೆಳದು, ಮೂಲಾಣುಪ್ರಾಣಿಯ ಹಾಗಾಗುತ್ತವೆ. ತಗಡಣುಪ್ರಾಣಿಗಳು ಚಿತ್ರ ತೋರಿಸುವಂತೆ ಎರಡು ಆಕಾರದವು, ಚೌಕ ಮತ್ತು ದುಂಡಗೆ. ಚೌಕವಾದದ್ದು ಸೌಂದರ್ಯವಾಗಿ ಮಿಂಚುವ ಹಸರು ವರ್ಣದ್ದಾಗಿದೆ.



೫. ತಗಡಿನಣುಪ್ರಾಣಿಗಳು.

ಆರನೇ ಚಿತ್ರದಲ್ಲಿ ಘಂಟೆಯಾಕಾರದ ಅಣುಪ್ರಾಣಿಗಳು ಕಾಣುತ್ತವೆ. ಅವು ಕಲ್ಲು ಗಿಡ ಇತ್ಯಾದಿಗಳಿಗೆ ತಮ್ಮ ಸಪುರ ದಂಟು ಹಚ್ಚಿ ಕೊಂಡು, ಬದುಕುತ್ತವೆ. ಅವುಗಳ ಬಾಯಿಯು ಘಂಟೆಯ ಅಂಚಿನ ಹಾಗಿದ್ದು, ಸಣ್ಣ ರೋಮಗಳಿಂದ ತುಂಬಿದೆ. ಹಶಿವಿಯಾದಾಗ್ಯೆ ದಂಟನ್ನು ಉದ್ದ ಮಾಡಿ, ಆಹಾರ ಹೆಚ್ಚು ಇರುವಲ್ಲಿಗೆ ಶಿರುಗುತ್ತವೆ; ಭಯ ಪಟ್ಟರೆ ಸರ್ಪದ ಹಾಗೆ ಪಕ್ಕನೆ ಮುದುರಿ ಕೊಳ್ಳುತ್ತವೆ. ಈ ಪ್ರಾಣಿ ಹೆಚ್ಚುವ ರೀತಿ ಯಾವದಂದರೆ—ಒಂದು ಮುದಿಪ್ರಾಣಿಯ



೬. ಘಂಟೆಯಣುಪ್ರಾಣಿಗಳು.

ಘಂಟೆ ಎರಡು ಹೋಳಾಗಿ, ಒಂದು ಹೋಳು ದಂಟಿನಲ್ಲಿ ಉಳಿದು, ಮತ್ತೊಂದು ಉದರಿ ಬಿದ್ದ ಮೇಲೆ ಪ್ರತ್ಯೇಕವಾದ ಇದು, ಹೊಸ ದಂಟು ಹುಟ್ಟಿ, ಅದನ್ನು ಎಲ್ಲಾದರೂ ಒಳ್ಳೇ ಸ್ಥಳದಲ್ಲಿ ಹಚ್ಚಿ ಕೊಳ್ಳ ಬರುವ ತನಕ ಅತ್ತಿತ್ತ ಚಲಿಸುತ್ತದೆ. ಈಗ ಹೇಳಿದ್ದೆಲ್ಲಾ ಚಿತ್ರದಲ್ಲಿ ನೋಡ ಬೇಕು.

ನೀರಿನ ತಟಿಕಿನಲ್ಲಿರುವ ಪ್ರಾಣಿಗಳಲ್ಲಿ ಅತಿ ಸೌಂದರ್ಯವಾದ ಚಂಡುಅಣುಪ್ರಾಣಿಯು ಮೇಲಣ ಚಿತ್ರದಲ್ಲಿ ಕಾಣ ಬರುತ್ತದೆ. ಅದರ ಸ್ವಲ್ಪ ಹಸುರಾಗಿ ಹೊಳಿಯುವ ಶರೀರವು ಉರುಟು ಚೀಲದ ಹಾಗೆ ಇದೆ. ಅದರೊಳಗೆ ಅಲ್ಲಾಡುವ ಹೆಚ್ಚು ಹಸುರಾದ ಗೋಳಗಳು ಚಲಿಸುತ್ತವೆ. ಇವು ದೊಡ್ಡವಾಗಿ, ಚೀಲವು ಹರಿದ ಮೇಲೆ ಹೊರಟು, ಬೇರೆ ಬೇರೆಯಾಗಿ, ತಾಯಿಯಂತೆ ಆಗುತ್ತವೆ.




೭. ಚಂಡಣುಪ್ರಾಣಿಗಳು.

ಮತ್ತೊಂದು ಅಣುಪ್ರಾಣಿಯ ನೆನಸ ತಕ್ಕದ್ದು, ಯಾವದಂದರೆ ಸಾಧಾರಣವಾಗಿ ಸಮುದ್ರದಲ್ಲಿ ರಾತ್ರಿಹೊತ್ತು ಹೊಳಪು ಹುಟ್ಟಿಸುವಂಥಾದ್ದು. ಹೊಳೆಯುವ ಸಮುದ್ರಜಲದ ಒಂದು ಹನಿಯನ್ನು ಸೂಕ್ಷ್ಮದರ್ಶನಯಂತ್ರದ ಕೆಳಗೆ ಇಟ್ಟು ನೋಡಿದರೆ ಆ ಹೊಳಪು ಮುಖ್ಯವಾಗಿ ಒಂದು ಅಣುಪ್ರಾಣಿಯ ಹೊಟ್ಟೆಯಿಂದ ಬರುತ್ತದೆಂದು ಕಾಣಿಸುತ್ತದೆ. ಈ ಪ್ರಾಣಿ ಖರ್ಜೂರಹಣ್ಣಿನಾಕಾರದ್ದು; ಅದರ ಹೊಟ್ಟೆಯಲ್ಲಿ ಹೊಂಕುಲದ ಹಾಗಿರುವ ಸ್ಥಳದಲ್ಲಿ ಒಂದು ಉದ್ದನ ಧಾರವದೆ; ಇದು ಒಮ್ಮೆ ಮೆಲ್ಲೆ, ಒಮ್ಮೆ ಬೇಗ ಚಲಿಸುತ್ತದೆ. ಈ ಚಲನೆಯಿಂದ ಆ ಪ್ರಾಣಿಯು ಸ್ವಲ್ಪ ಮುಂದಕ್ಕೆ ಹೋಗ ಬಹುದು. ಈ ಸಮುದ್ರಪ್ರಕಾಶಾಣುಪ್ರಾಣಿ ಬರೇ ಕಣ್ಣಿಗೂ ಮಳಲಿನಷ್ಟು ದೊಡ್ಡದಾಗಿ ತೋರುತ್ತದೆ.

ಆದರೆ ಈ ಖರ್ಜೂರಾಕಾರದ ಅಣುಪ್ರಾಣಿಯಲ್ಲದೆ ಮತ್ತು ಅಣುಪ್ರಾಣಿಗಳು ಸಮುದ್ರದಲ್ಲಿ ಪ್ರಕಾಶಿಸುತ್ತವೆ. ಮುಂದಿನ ಚಿತ್ರದಲ್ಲಿ ೧೩ ಜಾತಿಗಳು ಕಾಣುತ್ತವೆ. ಇವುಗಳಲ್ಲಿ ಕೆಲವು ಬರೇ ಕಣ್ಣಿಗೂ ಚಿಕ್ಕ ಅಣುಗಳಾಗಿ ತೋರುವಂಥಾವು; ಕೆಲವನ್ನು ಯಂತ್ರದಿಂದ ನೋಡ ಬೇಕು.



ಸಮುದ್ರಪ್ರಕಾಶಾಣುಪ್ರಾಣಿಗಳು.

ಬಾವಿಯದಾಗಲಿ ಹೊಳೆಯದಾಗಲಿ ಕೆರೆಯದಾಗಲಿ ಒಂದೇ ಹನಿನೀರಿನಲ್ಲಿ ೧೦೦೦೦, ಬಹಳವಾದರೆ ೧೦೦೦೦೦೦೦೦೦ ಅಣುಪ್ರಾಣಿಗಳು ಅವೆ; ನಿಂತು ಕೆಡುವ ನೀರಿನಲ್ಲಿ ಅಧಿಕವಾಗಿ ಶಿಕ್ಕುತ್ತವೆ. ಅವು ನಾವು ಕುಡಿಯುವ ಬಾವೀ ನೀರಿನೊಳಗೆ ಬರೇ ಕಣ್ಣಿಗೆ ಕಾಣದಿದ್ದರೂ ನಿಶ್ಚಯವಾಗಿ ಅವೆ. ಒಂದು ಗೋಧಿಕಾಳಿನ ಅಡ್ಡಳತೆ ತೆಗೆಯಿರಿ, ಅದರ ಅಡ್ಡಳತೆಗಿಂತ ಅವುಗಳದು ೯೬, ಅಥವಾ ೨೦೦೦ ಪಾಲಷ್ಟು ಚಿಕ್ಕದ್ದಾಗಿದೆ. ಅವುಗಳ ಮೊಟ್ಟೆಗಳು ಎಷ್ಟೋ ಚಿಕ್ಕವುಗಳಾಗಿರ ಬೇಕು!

ಮರ, ಹುಲ್ಲು, ಮಾಂಸ ಇತ್ಯಾದಿಗಳಲ್ಲಿಯೂ ಅಂಥ ಅಣುಪ್ರಾಣಿಗಳು ಹುಟ್ಟುತ್ತವೆ. ಇವುಗಳ ಲಕ್ಷ ಲಕ್ಷ ಅಂಡಗಳು ಗಾಳಿಯಿಂದ ಎಲ್ಲಿಗೂ ಹೋಗಿ, ಎಲ್ಲಿಯೂ ಅಂಥ ಅಣುಪ್ರಾಣಿಗಳು ಜನಿಸುತ್ತವೆ. ನಾವು ಬರೇ ಕಣ್ಣಿಂದ ತೂತು ಕಾಣದಲ್ಲಿ ಆ ಮೊಟ್ಟೆಗಳು ಶೇರಿ, ಒಡದು, ಮರಿಗಳಾಗುತ್ತವೆ

ಮೂಲಿಕ, ಮಾಂಸಿಕಪದಾರ್ಥಗಳು ಯಂತ್ರದಿಂದ ಘಾಳಿ ಪೂರಾಗಿ ತೆಗೆದೆಡೆಯಲ್ಲಿದ್ದರೆ ಅವುಗಳಲ್ಲಿ ಅಣುಪ್ರಾಣಿಗಳು ಹುಟ್ಟುವದೇ ಇಲ್ಲ.

ಹುಡುಗರೇ, ನಿಮ್ಮ ಕಣ್ಣಿಗೆ ಕಾಣದಂಥ ಈ ಅಣುಪ್ರಾಣಿಗಳನ್ನು ಚಿಂತಿಸಿ ಕೊಳ್ಳಿರಿ! ಭೂಲೋಕದಲ್ಲಿಯ ಜನರು ಸುಮಾರು ಶತಕೋಟಿ ಜನರಿರುವಾಗ್ಗೆ ಒಂದೇ ಹನಿನೀರೊಳು ಅಷ್ಟು ಅಣುಪ್ರಾಣಿಗಳವೆ; ಒಂದು ಬಾವಿಯಲ್ಲಿ ಎಷ್ಟೋ! ಒಂದು ಕೆರೆಯಲ್ಲಿ ಎಷ್ಟೋ! ಇಷ್ಟೆಲ್ಲಾ ದೇವರು ತನ್ನ ಅನಂತ ಮಹಿಮೆಗಾಗಿ ನಿರ್ಮಿಸಿದ ಮೇಲೆ ನೀವು ಪರೀಕ್ಷಿಸಿ, ಕಂಡು, ಆತನನ್ನು ಕೊಂಡಾಡ ಬೇಕು.

## 39. INHABITANTS OF A PARTICLE OF DUST

# ೩೯. ಒಂದು ಧೂಳಿನ ಅಣುವಿನಲ್ಲಿಯ ಪ್ರಾಣಿಗಳು

“ಕುಳಿತನೊಬ್ಬನು ಹುಡುಗ ಸಾಲೆಲಿ;
ಸುಳಿವ ಘಾಳಿಗೆ ಬಿದ್ದ ಧೂಳನು
ನೆಳೆಗೆ ಯೊರಸಿದನದನು ಛೀ ಛೀ ಯೆನುತ ಬೇಸರದಿ. ||
ತಿಳಿಯದಾತನಿಗದರ ಸಂಗತಿ—
ಯಳಿದ ಜೀವಿಯ ರಾಶಿರಾಶಿಯು
ಪೊಳವುತಿಹುದಾ ಧೂಳಿನೊಳಗತಿ ಸೂಕ್ಷ್ಮ ದರ್ಶನಕೇ.„ ||

“ಜೀವರಾಶಿಗಳಣುಪ್ರಮಾಣದಿ
ತೀವಿದಿರ್ದವು ಪ್ರಳಯ ಜಲದೊಳು;
ದೇವಸಂಕಲ್ಪನೆಗೆ ಕೂಡಿದವಚಲವಾಗುವರೇ. ||
ಗಾವದಂಗಳೆಯಗಲ ಬೆಟ್ಟದ
ಠಾವ ಕಲ್ಲುಗಳೇಳ್ವ ಧೂಳಿಯು
ಸೇವೆ ಮಾಡಿತು ಮುಂಚೆ ಕರ್ತಗೆ ಜೀವವಿರುವಾಗಾ.„ ||

ಸೂಕ್ಷ್ಮದರ್ಶನಯಂತ್ರವೆಂಬದು ಹರಳು ಒಳ ಶೇರಿಸಿದ ಒಂದು ಕೊಳವಿ ಅದೆ. ಅದರ ಹರಳುಗಳು ಯುಕ್ತಿಯಿಂದ ಮಸೆದಿರುವದಕ್ಕಾಗಿ ಅದರಿಂದ ಚಿಕ್ಕದನ್ನು ದೊಡ್ಡದಾಗಿ ನೋಡುತ್ತಾರೆ. ಅಂಥ ಉತ್ತಮ ಬಗೆಯ ಯಂತ್ರಮುಖಾಂತರ ಒಂದು ಜೀನಸು ೩೦೦೦೦ ಪಾಲಷ್ಟು ಹೆಚ್ಚು ದೊಡ್ಡದಾಗಿ ಕಾಣಿಸುತ್ತದೆ. ಮಂಜಿನಲ್ಲಿಯೂ ಮಳೆಯಲ್ಲಿಯೂ ಉಪ್ಪು ಮತ್ತು ಸವಿ ನೀರಿನಲ್ಲಿಯೂ ಹಿಮದಲ್ಲಿಯೂ ಬರೇ ಕಣ್ಣಿಗೆ ಕಾಣದಂಥ ಅನೇಕಾನೇಕ ಅಣುಪ್ರಾಣಿಗಳು ಬದುಕುತ್ತವೆಂದು, ಆ ಸೂಕ್ಷ್ಮದರ್ಶನಯಂತ್ರದಿಂದ ಗೊತ್ತಾಯಿತು. ಅವು ಅಷ್ಟು ಶೀರಾ ಚಿಕ್ಕ ಜಂತುಗಳಾದರೂ ಅವುಗಳ ಬೆನ್ನಿನ ಮೇಲೆ ಅವುಗಳ ಪರಿಮಾಣಕ್ಕೆ ತಕ್ಕಷ್ಟು ಚಿಕ್ಕ ಅಣುಹೇನುಗಳೂ ಈ ಹೇನುಗಳ ಬೆನ್ನಿನಲ್ಲಿ ಮತ್ತು ಒಂದು ಜಾತೀ ಹೇನೂ ಕಂಡು ಬಂದವು; ಕೆಲವು ಅಣುಪ್ರಾಣಿಗಳ ಹೊಟ್ಟೆಯೊಳಗೆ ಹುಳಗಳು ಸಹ ಇರುತ್ತವೆ. ಒಂದೇ ಅಣುಪ್ರಾಣಿಯಿಂದ ಕೆಲವು ತಾಸುಗಳೊಳಗೆ ೧೦೦೦೦೦೦ ಮರಿಗಳು ಹುಟ್ಟುವದುಂಟು. ಅವು ಒಂದು ದಿವಸ ಬದುಕುವದು ಅಪರೂಪ. ಮೃಗಗಳಂತೆ ಅವಕ್ಕೆ ರಾಗದ್ವೇಷವುಂಟು. ಅವು ಬೇರೆ ಪದಾರ್ಥವನ್ನಲ್ಲದೆ ತಮ್ಮ ತಮ್ಮನ್ನು ಭಕ್ಷಿಸಿ ಕೊಳ್ಳುತ್ತಿರುವವು.



ಕಜ್ಜೀ ಹುಳ.

ಮನುಷ್ಯರಿಗೆ ಕಜ್ಜಿ ಹುಟ್ಟಿಸುವಂಥಾದ್ದೇ ಈ ಹುಳವು. ಅದು ಕೊರದು, ಒಳಹೊಕ್ಕು ಕೀವನ್ನುಂಟು ಮಾಡುತ್ತದೆ. ಅದು ಬರೇ ಕಣ್ಣಿಗೆ ಕಾಣುವದಿಲ್ಲ.

ಈ ಅಣುಪ್ರಾಣಿಗಳು ಈಗ ಬದುಕುವಂಥಾವು; ಆದರೆ ಸತ್ತಂಥಾವುಗಳನ್ನೂ ಆ ಯಂತ್ರದಿಂದ ಶೋಧಿಸಿ ಅವೆ. ನಿಮ್ಮೆಲ್ಲರಿಗೆ ವಿಲಾಯತಿಯ ಸುಣ್ಣ ಗೊತ್ತಲ್ಲವೋ? ಅದರಿಂದ ಕಪ್ಪು ಹಲಿಗೆಗೆ ಬರೆದು, ಲೋಹಗಳನ್ನು ತಿಕ್ಕಿ ಬೆಳಗಿಸುತ್ತಾರಲ್ಲ? ಅದನ್ನು ನಿಮ್ಮ ಬೆರಳಿನಿಂದ ಮುಟ್ಟಿದರೆ ಸ್ವಲ್ಪ ಧೂಳು ಹತ್ತುತ್ತದೆ; ಈ ಧೂಳಿನಲ್ಲಿ ಒಂದು ಅಣುವನ್ನು ಸೂಕ್ಷ್ಮದರ್ಶನಯಂತ್ರದ ಅಡಿಯಲ್ಲಿಟ್ಟು ನೋಡಿದರೆ ಆ ಅಣು

೮೦--೧೦೦ ಸತ್ತ ಅಣುಪ್ರಾಣಿಗಳದ್ದಾಗಿದೆಂದು ತೋರುತ್ತದೆ; ಆ ಸುಣ್ಣವೆಲ್ಲಾ ಅಣುಪ್ರಾಣಿಯೇ. ಈಗ ಲೆಖ್ಖ ಹಾಕಿರಿ; ಒಂದು ಧೂಳಿನ ಅಣುವಿನಲ್ಲಿ ೮೦ ಅಣುಪ್ರಾಣಿಗಳಿದ್ದರೆ ಆ ಸುಣ್ಣದ ಗುಲಗಂಜಿಯಷ್ಟು ತುಂಡಿನಲ್ಲಿ ಎಷ್ಟಿರಬೇಕು? ಕೈಯಷ್ಟು ದೊಡ್ಡ ತುಂಡಿನಲ್ಲಿ ಎಷ್ಟು? ಆದರೆ ಇದು ಸಾಲದು; ಸಕಲ ಖಂಡಗಳಲ್ಲಿ ಆ ಸುಣ್ಣದ ಬೆಟ್ಟಗಳು ಅವೆ, ಅವುಗಳಲ್ಲಿ ಎಷ್ಟೋ ಅಣುಪ್ರಾಣಿಗಳು! ಅಮೆರಿಕ ಖಂಡದಲ್ಲಿಯೂ ವಿಲಾಯತಿಯಲ್ಲಿಯೂ ಬರ ಬಿದ್ದ ಸಮಯದಲ್ಲಿ ಬಡವರು ಅಂಥ ಸುಣ್ಣ ರಿಟ್ಟು ಕುಟ್ಟಿ, ರೊಟ್ಟಿ ಮಾಡಿದರು. ಜಂತುಪದಾರ್ಥಕ್ಕಾಗಿ ಅದರಲ್ಲಿ ಸ್ವಲ್ಪ ಆಹಾರವಿತ್ತೆಂದು, ತಿಳುಕೊಳ್ಳಬಹುದು.

ಒಂದು ಚಿಕ್ಕಿಮುಕ್ಕಿಕಲ್ಲು ನೋಡಲಿಲ್ಲವೋ? ಅದೂ ಸತ್ತ ಅಣುಪ್ರಾಣಿಗಳದು. ಸುಮಾರು ೨೫ ಜಾತಿ ಅದರಲ್ಲಿ ಉಂಟು.



ಚಿಕ್ಕಿಮುಕ್ಕಿಕಲ್ಲಿನ ಅಣುಪ್ರಾಣಿಗಳೊಂದು ಜಾತಿ ಈ ಚಿತ್ರದಲ್ಲಿ ಕಾಣುತ್ತದೆ.

ಒಂದು ಬಗೆಯ ಬಳಗಲ್ಲಿನ ತುಂಡು ೪ತ್ತಿ ಗುಲಗಂಜಿ ತೂಗುವಾಗ್ಯೆ ಅದರಲ್ಲಿ ೪೧೦೦೦೦೦೦ ಅಣುಪ್ರಾಣಿಗಳು ಶಿಕ್ಕಿದವು.

ಎಲ್ಲಾ ಸುಣ್ಣಗುಡ್ಡವೂ ಎಲ್ಲಾ ಸುಣ್ಣಕಲ್ಲೂ ಅದರ ಧೂಳೂ ಲೆಖ್ಖವಿಲ್ಲದ ಅಣುಪ್ರಾಣಿಗಳದ್ದಾಗಿದೆ.

ವಿಲಾಯತಿಯಲ್ಲಿ ಕಲ್ಲಣುಪ್ರಾಣಿಗಳ ೮೦ ಬೇರೆ ಬೇರೆ ಜಾತಿಗಳನ್ನು ಕಂಡಿದ್ದಾರೆ. ಇನ್ನೆಷ್ಟು ಕಂಡಾರು? ಆದರೆ ತಿಳುಕೊಳ್ಳಿರಿ; ಸೂಕ್ಷ್ಮದರ್ಶನಯಂತ್ರೋಪಾಯದಿಂದಲ್ಲದೆ ಬರೇ ಕಣ್ಣಿನಿಂದ ಈ ಅಣುಪ್ರಾಣಿಗಳನ್ನು ನೋಡಲಾಗದು. ಆ ೮೦ ಜಾತಿಗಳಲ್ಲಿ ಸುಮಾರು ೪೦ ಈಗಲೂ ಬದುಕುತ್ತಾ ಅವೆ; ಉಳಿದ ೪೦ ಜಾತಿಗಳು ಈಗ ಬದುಕುವಂಥಾವಲ್ಲ.



# 40. VARIETIES OF THE HUMAN RACE

# ೪೦. ಮನುಷ್ಯಭೇದಗಳು

---

"ಆತ್ಮವತ್ ಸರ್ವ್ವಭೂತೇಷು ಯಃ ಪಶ್ಯತಿ ಸ ಪಂಡಿತಃ,, ||

ಭಗವದ್ಗೀತೆ.

ಅಂದರೆ:

ತನ್ನ ಹಾಗೆ ಎಲ್ಲಾ ಜೀವಿಗಳನ್ನು ನೋಡುವವನು ಪಂಡಿತನು.

ರೂಪ, ವರ್ಣ, ಪರಿಮಾಣಗಳಲ್ಲಿ ಮನುಷ್ಯರು ಪರಸ್ಪರ ಸಮಾನರಾಗದೆ ಇದ್ದಾಗ್ಯೂ ಆದಿ ಸ್ತ್ರೀ ಪುರುಷರಿಬ್ಬರ ವಂಶದಲ್ಲಿ ಹುಟ್ಟಿ, ಒಂದೇ ಕುಟುಂಬದವರಾಗಿದ್ದಾರೆ. ಕುದುರೆ, ನಾಯಿ, ಎಮ್ಮೆ ಮೊದಲಾದ ಮೃಗಗಳ ಹಾಗೆ ಮನುಷ್ಯರಲ್ಲಿ ಭೇದವಿಲ್ಲ; ಆದರೆ ದೇಶಮರ್ಯಾದೆಗಳೂ ಭೋಜನಾದಿಗಳೂ ವಸ್ತ್ರಧಾರಣವೂ ಆಯಾ ಪ್ರದೇಶಕ್ಕೆ ಅನುಸಾರವಾಗಿ ಬೇರೆ ಬೇರೆ ಆಗುತ್ತವೆಯೇ ಹೊರ್ತು ಸರ್ವ ಮನುಷ್ಯರು ಒಂದೇ ಜಾತಿಯಾಗಿದ್ದಾರೆ. ಆ ಜಾತಿಯಲ್ಲಿ ಆಕಸ್ಮಿಕ ರೀತಿಯಿಂದಲೂ ಆಹಾರ, ಪಾನ, ಋತು, ಪದ್ಧತಿಯಿಂದಲೂ ಹೆಚ್ಚುಕಡಿಮೆಯಾಯಿತು.

ಯಜುರ್ವೇದದಲ್ಲಿ ಮನುಷ್ಯರೆಲ್ಲರೂ ಒಂದೇ ಜಾತಿಯಾಗಿದ್ದಾರೆಂಬದರ ವಿಷಯ ಬರೆದದ್ದೇನಂದರೆ (ಜಲಪ್ರಳಯಸಮಯದಲ್ಲಿ ಮನುವು ಹಡಗವನ್ನೇರಿ, ಹಿಮಾಚಲ ದಾಟಿ ಬಂದನು; ಆ ಮೇಲೆ ಹೀಗೆ ಬರುತ್ತದೆ.)—

ತದಪ್ಯೇತದುತ್ತರಸ್ಯ ಗಿರೇರ್ಮನೋರವಸರ್ಪಣಮಿತಿ | ಔಘೋ ಹ ತಾಃ ಸರ್ವಾಃ ಪ್ರಜಾ ನಿರುವಾಹಾಥೇಹ ಮನುರೇವೈಕಃ ಪರಿಶಿಶಿಷೇ | ಸೋಽರ್ಚಂಛ್ರಾಮ್ಯಂಶ್ಚಚಾರ ಪ್ರಜಾಕಾಮಃ | **** ತತಃ ಸಂವತ್ಸರೇ ಯೋಷಿತ್ ಸಂಬಭೂವ | ******* ತಯಾಽರ್ಚಂಛ್ರಾಮ್ಯಂಶ್ಚಚಾರ | ತಯಾ ಇಮಾಂ ಪ್ರಜಜ್ಞೇ ಯಾ ಇಯಂ ಮನೋಃ ಪ್ರಜಾತಿಃ ||

ಯಜುರ್ವೇದದ, ಶತಪಥಬ್ರಾಹ್ಮಣ, ೮ನೇ ಅಧ್ಯಾಯ.

ಅಂದರೆ:

ಇದೇ ಉತ್ತರಗಿರಿಯಿಂದ ಮನುವು ಇಳಿದು ಬಂದದ್ದು. ಸಕಲ ಜನರನ್ನು ಆ ಜಲಪ್ರಳಯವೇ ತಕ್ಕೊಂಡು ಹೋಯಿತು, ಅನಂತರ ಮನುವು ಈ ಭೂಮಿಯಲ್ಲಿ ಒಬ್ಬನೇ ಉಳಿದನು.

ಅವನು ಭಜಿಸುತ್ತಾ, ಉಪವಾಸ ಮಾಡುತ್ತಾ ಬದುಕಿದನು, ಪ್ರಜಾಕಾಮನಾಗಿ. ಬಳಿಕ ಒಂದು ವರುಷದ ಮೇಲೆ ಸ್ತ್ರೀ ಹುಟ್ಟಿದಳು; ಅವಳ ಸಂಗಡ ಅವನು ಭಜಿಸುತ್ತಾ, ಉಪವಾಸಿಸುತ್ತಾ ಬದುಕಿದನು. ಅವನು ಅವಳಿಂದ ಹುಟ್ಟಿಸಿದ್ದು ಈ ಮನುಪ್ರಜೆಯಾಗಿದೆ.

"ಮಾನವ್ಯೋ ಹಿ ಪ್ರಜಾ ಇತಿ ಹಿ ಬ್ರಾಹ್ಮಣಮ್."
ಸಾಯಣನ ವ್ಯಾಖ್ಯಾನ, ಋಗ್ವೇ ೧ನೇ ಮಂಡಲದ
೬೮ನೇ ಸೂಕ್ತದ ೪ನೇ ಋಕ್.
ಅಂದರೆ:

ಪ್ರಜೆಯು ಮನುವಿನ ಸಂಬಂಧದ್ದೇ ಎಂದು, ಬ್ರಾಹ್ಮಣ (ಅಂದರೆ ವೇದಾಚಾರವಾಕ್ಯ) ಹೇಳುತ್ತದೆ.

"ಮನುನಾ ಚ ಪ್ರಜಾಃ ಸರ್ವಾಃ ಸದೇವಾಸುರಮಾನುಷಾಃ |
ಸ್ರಷ್ಟವ್ಯಾಃ ಸರ್ವ ಲೋಕಾಶ್ಚ ಯಚ್ಚೇಂಗಂ ಯಚ್ಚ ನೇಂಗತಿ" ||೧೨೯೮||
ಮಹಾಭಾರತ, ವನಪರ್ವ.
ಅಂದರೆ:

ಯಾವದು ಚರಿಸುತ್ತದೆ, ಯಾವದು ಚರಿಸುವದಿಲ್ಲ, ಸರ್ವ ಲೋಕಗಳು, ದೇವಾಸುರಮಾನುಷ್ಯರು, ಪ್ರಜೆ ಎಲ್ಲವೂ ಮನುವಿನಿಂದ ಸೃಷ್ಟಿಸಲ್ಪಟ್ಟದ್ದಾಗಿದೆ.

ಆದದರಿಂದ ಮನು — ಜ ಅಥವಾ ಮನುಷ್ಯನೆಂಬ ಹೆಸರು ಉತ್ಪನ್ನವಾಯಿತು.

ಭೂಮಿಯಲ್ಲಿ ವಿಲಾಯತಿ, ಆಸ್ಯ, ಅಫ್ರಿಕ, ಅಮೆರಿಕ ಎಂಬ ನಾಲ್ಕು ಖಂಡಗಳವೆ. ಇವುಗಳಲ್ಲಿ ಅಫ್ರಿಕ ಖಂಡವು ಬಹಳ ಉಷ್ಣವಾದದರಿಂದ ಅಲ್ಲಿಯ ಜನರು ಬಹಳ ಕಪ್ಪಾಗಿರುವದಕ್ಕೆ ಆ ಉಷ್ಣವು ಮುಖ್ಯ ಕಾರಣವೆನ್ನಬೇಕು. ಅವರಿಗೆ ಈ ದೇಶದಲ್ಲಿ ಕಾಫ್ರಿಯರೆಂದು ಅಡ್ಡಹೆಸರು. ಆಸ್ಯ ಖಂಡವು ಅದರ ಹಾಗೆ ಬಹಳ ಉಷ್ಣವಲ್ಲವಾದದ್ದು ಅಲ್ಲಿ ವಾಸಿಸುವ ಜನರು ಬಿಳುಪು ಛಾಯೆ ಉಳ್ಳವರೂ ಮಸ್ಕು ಬಣ್ಣ ಉಳ್ಳವರೂ ಆಗಿರುವದಕ್ಕೆ ವಿಶೇಷ ಕಾರಣ. ವಿಲಾಯತಿಯು ಆಸ್ಯ ಖಂಡಕ್ಕಿಂತ ಬಹಳ ಶೀತವಾದದರಿಂದ ಮುಖ್ಯವಾಗಿ ಅಲ್ಲಿಯ ನಿವಾಸಿಗಳು ಬಹಳ ಬೆಳ್ಳಗೆ ಇದ್ದಾರೆ; ಅದರ ಸಲುವಾಗಿ ಅವರನ್ನು ಬಿಳೀ ಜನರೆಂದು ಹೇಳುತ್ತಾರೆ. ಸಾಧಾರಣವಾಗಿ ಮನುಷ್ಯರು ಕೌಕಸಿಯರು, ಮೊಂಗೋಲಿಯರು (ಮೊಗಲಾಯಿಯರು), ಅಮೆರಿಕದವರು, ಎಥಿಯೋಪ್ಯರು ಅಥವಾ ಅಫ್ರಿಕದವರು, ಮಲಾಯರು ಎಂಬ ಐದು ವಂಶಗಳಲ್ಲಿ ವಿಭಾಗಿಸಲ್ಪಟ್ಟಿದ್ದಾರೆ.

ಆಸ್ಯ ಖಂಡದ ಪಶ್ಚಿಮ ಭಾಗದಲ್ಲಿರುವ ಕೌಕಸುಸ್ ಪರ್ವತಪ್ರಾಂತ್ಯದೇಶದವರೂ ಅವರಿಗೆ ಹೋಲುವ ತುರ್ಕ, ಪಾರ್ಶಿಯರೂ ಕೌಕಸಿಯರೆಂದೆನ್ನಿಸಿ ಕೊಳ್ಳು

ತ್ತಾರೆ. ಅವರ ಕೂದಲು ಕೆಂಪು ಅಥವಾ ಕಪ್ಪಾಗಿದೆ; ಸುರಳಿಗೂದಲು ಅವರಲ್ಲಿ ಅಪರೂಪ; ಹಣೆಯು ವಿಶಾಲವಾಗಿಯೂ ಮುಖ ಅಂಡವಾಗಿಯೂ ಇರುವದು. ವಿಲಾಯತಿಯಲ್ಲಿ ಹೆಚ್ಚು ಜನರು, ಹಿಂದು ದೇಶದ ಆರ್ಯರು ಸಹಾ, ಈ ಗುಂಪಿಗೆ ಸಮ್ಮಂಧ ಪಟ್ಟವರಾಗಿದ್ದಾರೆ. ಉಷ್ಣ ದೇಶದಲ್ಲಿ ವಾಸಿಸುವದರಿಂದ ಹಿಂದು ಆರ್ಯರ ವರ್ಣವು ಮಸ್ಕಾಗಿರುತ್ತದೆ.

ಆಸ್ಯ ಖಂಡದ ಮಧ್ಯ ತಪ್ಪಲದವರೂ ಚೀನ ದೇಶದವರೂ ಮೊಂಗೋಲಿಯರಾಗಿದ್ದಾರೆ. ಅವರು ಹಳದಿ ವರ್ಣವಾಗಿರುವರು; ಗಡ್ಡ ಅವರಿಗೆ ಬಹಳವಿಲ್ಲ; ಕೂದಲು ಬಿರುಸೂ ಕಪ್ಪೂ; ಅವರ ಕಣ್ಣು ವಾರೆ; ತಲೆ ಸ್ವಲ್ಪ ಚೌಕ; ಮೂಗು ಚಿಕ್ಕದ್ದು; ಈ ಗುಂಪಿಗೆ ಸಮ್ಮಂಧ ಪಟ್ಟವರನೇಕರು ಮನೆ ಕಟ್ಟಿ ಕೊಳ್ಳದೆ, ಗುಡಾರಗಳಲ್ಲಿ ವಾಸಿಸುತ್ತಾ, ಮಂದೆಗಳನ್ನು ಮೇಯಿಸಿ, ಅವುಗಳ ಮಾಂಸ ತಿಂದು, ಹಾಲು ಕುಡಿದು ಬದುಕಿ, ದೇಶಗಳನ್ನು ಸಂಚರಿಸುತ್ತಾ ಇದ್ದಾರೆ. ಪಟ್ಣಗಳನ್ನು ನಿರ್ಮಿಸಿ ಕೊಂಡು ವಾಸ ಮಾಡುತ್ತಿರುವ ಚೀನದವರು ಹೆಚ್ಚು ಮರ್ಯಾದಸ್ಥರಾಗಿದ್ದಾರೆ.

ಆಸ್ಯದ ಬಹು ದ್ವೀಪಗಳಲ್ಲಿಯೂ ಶಾಂತಿಸಾಗರದಲ್ಲಿರುವ ದ್ವೀಪಗಳಲ್ಲಿಯೂ ವಾಸಿಸುವವರು ಮಲಾಯರಾಗಿದ್ದಾರೆ. ಅವರು ಕಪಿಶ ವರ್ಣದವರು; ಅವರ ಶರೀರಾಕಾರ ಸಾಧಾರಣವಾಗಿ ನೆಟ್ಟಗೆ ಅದೆ.

ಅಮೆರಿಕದವರು ತಾಂಬ್ರವರ್ಣ ಉಳ್ಳವರು. ಅವರ ಕೂದಲು ಕಪ್ಪೂ ಬಿರುಸೂ; ಗಡ್ಡ ಕಡಿಮೆ; ಕಣ್ಣೂ ಮೂಕೂ ಚಂದ. ಅವರು ಅಮೆರಿಕದ ಮೂಲನಿವಾಸಿಗಳು. ಅವರು ಅಡಿವೆಯಲ್ಲಿ ಬೇಟೆ ಆಡಿ, ಜೀವನ ಮಾಡುತ್ತಿದ್ದರು; ಆದರೆ ಕೆಲವು ಶತಮಾನಕ್ಕೆ ಮುಂಚೆ ವಿಲಾಯತಿಯವರು ಆ ಖಂಡವನ್ನು ಕಂಡು ಕೊಂಡು, ಅಲ್ಲಿಗೆ ಹೋಗಿ, ಅವರಿಗೆ ಸುವಾರ್ತೆಯ ಬೋಧನೆ ಕೊಟ್ಟವರಿಂದ ಅನೇಕರು ಈಗ ಕ್ರೈಸ್ತರಾಗಿ, ಊರುಗಳಲ್ಲಿಯೂ ಬದುಕುತ್ತಾರೆ.

ಎಥಿಯೋಪ್ಯರು ಅತಿ ಕಪ್ಪು ಛಾಯೆ ಉಳ್ಳವರು. ಅವರ ಕೂದಲು ಉಣ್ಣೆಯಂತೆ ಗುಂಗುರುಗುಂಗುರಾಗಿಯೂ, ಮೂಗು ಗುಂಡಾಗಿಯೂ, ತುಟಿ ದಪ್ಪವಾಗಿಯೂ, ಕಾಲು ಸಾಧಾರಣವಾಗಿ ಪುಷ್ಟಿ ಕಡಿಮೆಯಾಗಿಯೂ ಉಂಟು. ಅವರು ಅಫ್ರಿಕದ ದಕ್ಷಿಣ ಭಾಗದಲ್ಲಿ ಮುಖ್ಯವಾಗಿರುತ್ತಾರೆ.

# 41. ON THE PASSIONS AND EMOTIONS

# ೪೧. ಗುಣಗಳು

“ಪರಿಚ್ಛಿನ್ನೋ ಜೀವಸ್ ತ್ವಮ್ ಅಸಿ ಖಲು ಸ ವ್ಯಾಪಕತಮುಸ್ | ತ್ವಮ್ ಏಕತ್ರ ಸ್ಥಾತಾ ಭವಸಿ ಸ ಹಿ ಸರ್ವ್ವತ್ರ ಸತತಂ | ಸುಖೀ ದುಃಖೀ ತ್ವಂ ರೇ ಕ್ಷಣಿಕಃ ಸ ಸುಖೀ ಸರ್ವ್ವ ಸಮಯೇ„ ||

ಗೌಡಪೂರ್ಣಾನಂದನ ತತ್ತ್ವಮುಕ್ತಾವಳಿ.

ಅಂದರೆ:

ನೀನು ಮಿತಿಯಾದವನೇ ಆಗಿದ್ಧಿ, ಅವನು ವ್ಯಾಪಕನು; ನೀನು ಒಂದೇ ಸ್ಥಳದವನಾಗಿದ್ಧಿ, ಅವನು ಎಲ್ಲಿಯೂ ಇರುವವನೇ; ಒಂಮೆ ಸುಖಿ, ಒಂಮೆ ದುಃಖಿ ಆಗಿದ್ಧಿ, ಅವನು ಯಾವಾಗಲೂ ಸುಖಿ.

ಮನುಷ್ಯರಿಗೆ ವಿಧ ವಿಧ ಗುಣಗಳುಂಟು; ಅವುಗಳಲ್ಲಿ ಎರಡು ಮುಖ್ಯ ಕುಲಗಳುಂಟು, ಅಂದರೆ ದುರ್ಗುಣ, ಸುಗುಣ. ಕೆಲವು ಹೇಳುವ —

| ದುರ್ಗುಣ. | ಸುಗುಣ. |
|---|---|
| ಕಾಮ | ತುಷ್ಟಿ |
| ಕ್ರೋಧ | ಸಹನ |
| ಲೋಭ | ಧರ್ಮ |
| ಮೋಹ | ವಿವೇಕ |
| ಮದ | ಮಿತಾನುಭವ |
| ಮತ್ಸರ | ಧೃತಿ |
| ಕಾರ್ಪಣ್ಯ | ಉದಾರ |
| ಮಾಯೆ | ಯಥಾರ್ಥತ್ವ |
| ದಂಭ | ದೀನತ್ವ |
| ಗರ್ವ | ವಿನಯ |
| ಕೋಪ | ಶಾಂತಿ |
| ದ್ವೇಷ | ಪ್ರೀತಿ |
| ಹಿಂಸೆ | ರಕ್ಷಣ |
| ಆಲಸ್ಯ | ಜಾಗರ |
| ಮಿಥ್ಯೆ | ಸತ್ಯ |

ಹಿಂದು ಜನರು ಮೂರು ಕುಲ ಹೇಳುತ್ತಾರೆ: ಸಾತ್ವಿಕವು, ರಾಜಸವು, ತಾಮಸವು.

ಮನುಷ್ಯನು ಸ್ವೇಚ್ಛೆಯುಳ್ಳವನು. ಅವನು ಅಯೋಗ್ಯವಾದದ್ದನ್ನಾಗಲಿ ಯೋಗ್ಯವಾದದ್ದನ್ನಾಗಲಿ ಮಾಡ ಬಹುದು; ಒಬ್ಬ ಹುಡುಗನು ಕಲಿಯ ಬಹುದು, ಕಲಿಯದಿರ ಬಹುದು; ಈ ಶಕ್ತಿ ಸ್ವೇಚ್ಛೆಯದ್ದು. ಮೇಲು ಕೀಳು, ಶುಭಾಶುಭಗಳನ್ನು ವಿವೇಕಾಲೋಚನೆಯಿಂದ ತಿಳುಕೊಂಡು, ಸ್ವೇಚ್ಛೆಯಿಂದ ಕೀಳಾದದ್ದನ್ನೂ ಅಶುಭವಾದದ್ದನ್ನೂ ತ್ಯಜಿಸಿ ಮೇಲಾದದ್ದನ್ನೂ ಶುಭವಾದದ್ದನ್ನೂ ದೇವರ ಭಯಸಹಾಯಗಳಲ್ಲಿ ನಡಿಸ ಬೇಕು.

## 42. ON THE TEMPERAMENTS

## ೪೨. ಭಾವಗಳು

"ಸ್ವಭಾವ ತಿಳಿದರೆ ನಿಭಾಯಿಸ ಬಹುದು."
ಗಾದೆ.



ಈ ಜನರಿಗೆ ಶರೀರಲಕ್ಷಣಶಾಸ್ತ್ರವು ಸರಿ ಬೀಳುತ್ತದೆ; ಇವರು ಇಂಥಿಂಥ ಭಾವದವರೆಂದು ಮುಖದ ಮೇಲೆ ತಿಳುಕೊಳ್ಳ ಬಹುದು. ಕುರ್ದಿಸ್ಥಾನ ಇವರ ಶೀಮೆ; ಅವರ ಮತವು ಮೊಹಮ್ಮದಿಯದು.

ಪರಮಾತ್ಮನು ಒಬ್ಬೊಬ್ಬ ಮನುಷ್ಯನಿಗೆ ಒಂದೊಂದು ಆತ್ಮಭಾವ ಕೊಟ್ಟಿದ್ದಾನೆ; ಬೇರೆ ಬೇರೆ ಆತ್ಮಭಾವಗಳು, ವಜ್ರ ನಾನಾ ಬಣ್ಣದಿಂದ ಶೋಭಿಸುವಂತೆಯೂ ಹೂವುಗಳು ನಾನಾ ಸುಗಂಧ ಬಿಡುವಂತೆಯೂ, ಸದ್ವೃತ್ತಿಯಿಂದ ಒಪ್ಪ ಬೇಕು. ಆಯಾ ತರ ತರದ ಆತ್ಮಭಾವಗಳಿಗನುಸಾರವಾಗಿ ರಕ್ತವು ತರ ತರದ ಅವಸ್ಥೆಯಾಗಿದೆ. ಬೇರೆ ಬೇರೆ ಆತ್ಮಭಾವವುಳ್ಳ ಮನುಷ್ಯರಿಗೆ ರಕ್ತದ ಮೇಲೆ ಬೇರೆ ಬೇರೆ ಹೆಸರು ಇಡುವ ಪದ್ಧತಿ ಪೂರ್ವದಿಂದಲೂ ನಡೆಯುತ್ತಾ ಬಂತು. ರಕ್ತದ ಪ್ರಕಾರ ಮುಖ್ಯವಾಗಿ ನಾಲ್ಕು ಭಾವದವರನ್ನು ವಿಶೇಷಿಸ ಬಹುದು. ಈ ಭಾವದವರು ದೇವಾನುಗ್ರಹವ ಪಡಕೊಳ್ಳ ಬೇಕು; ಅಲ್ಲದಿದ್ದರೆ ತಮ್ಮ ಮತ್ತು ಲೋಕದ ಹಿತಕ್ಕೆ ಕೊಟ್ಟಿರುವ ಭಾವಗಳು ನಾಶನಕ್ಕೆ ಕಾರಣವಾಗುತ್ತವೆ. ಆ ನಾಲ್ಕು ಭಾವದವರ ಶರೀರಲಕ್ಷಣಗಳನ್ನೂ ದೇವಾಧೀನವಿದ್ದು ಹುಟ್ಟುವ ಸುಗುಣಗಳನ್ನೂ ದೇವಾಧೀನವಿಲ್ಲದೆ ಹುಟ್ಟುವ ದುರ್ಗುಣಗಳನ್ನೂ ಸಂಕ್ಷೇಪವಾಗಿ ವರ್ಣಿಸುವ—

### ೧. ಲಘು ರಕ್ತಭಾವದವರು

| ಶರೀರಲಕ್ಷಣಗಳು | ದೇವಾಧೀನಗುಣಗಳು |
|---|---|
| ಮುಖ ಕೆಂಪಾಗಿದೆ; | ಕವಿತ್ವ; |
| ರಕ್ತ ಬೇಗ ಚಲಿಸುತ್ತದೆ; | ಕೌಶಲ್ಯ; |
| ನಾಡಿ ತೀವ್ರ ಬಡಿಯುತ್ತದೆ. | ಅನುನಯ; |
| | ಉತ್ತಮವೃತ್ತಿರಾಗ; |
| | ಆಳವಲ್ಲದ ವ್ಯಸನಗಳ ಸುಲಭಸಾಧನೆ; |
| | ತೀವ್ರ ಗ್ರಹಿಕೆ. |

ದೇವಾಧೀನವಿಲ್ಲದ ಗುಣಗಳು

ಪಂಥದಲ್ಲಿಯೂ ಕೆಲಸದಲ್ಲಿಯೂ ಚಂಚಲತ್ವ;
ವ್ಯಸನಗಳ ಬಾಹುಳ್ಯ;
ಚಿತ್ತಾಲ್ಪತ್ವ;
ಚಿತ್ತನಿರ್ಬಲತ್ವ;
ಸ್ವಾರ್ಥತ್ವ;
ಬುದ್ಧಿವಿಕಾರತ್ವ.

## ೨. ಕೃಷ್ಣಪಿತ್ತ ಅಥವಾ ಜಡ ರಕ್ತಚಾವದವರು

| ಶರೀರಲಕ್ಷಣಗಳು | ದೇವಾಧೀನಗುಣಗಳು |
|---|---|
| ನಾಡಿ ಮೆಲ್ಲ ಬಡಿಯುತ್ತದೆ; | ಸಮಾಧಿ; |
| ಮಿದುಲಿನ ನರಗಳು ಬೇಗ ಹರಿದಾಡುವದಿಲ್ಲ; | ಆತ್ಮವಿಚಾರ; |
| ಮುಖ ಹಳದಿ ವರ್ಣದ್ದು. | ಸ್ಥಿರತ್ವ; |
| | ಚಿತ್ತಬಲತ್ವ; |
| | ಚಿಂತನಾಭಾರತ್ವ; |
| | ಮನೋನಿರ್ವಂಚನತ್ವ; |
| | ವಿದ್ಯಾಚಾತುರ್ಯತ್ವ. |

### ದೇವಾಧೀನವಿಲ್ಲದ ಗುಣಗಳು

ದುಃಖಾಕುಲತ್ವ;
ಅಹಂಕಾರ;
ಪರದ್ವೇಷ;
ದೇಹಾತ್ಮಪೀಡನಾಭಕ್ತಿ;
ಮಿಥ್ಯಾಸಂಕಲ್ಪ.

## ೩. ಪಿತ್ತ ಅಥವಾ ಉಷ್ಣ ರಕ್ತಚಾವದವರು

| ಶರೀರಲಕ್ಷಣಗಳು | ದೇವಾಧೀನಗುಣಗಳು |
|---|---|
| ರಕ್ತ ಉಷ್ಣವಾಗಿದೆ; | ಶಕ್ತಿ ಕೂಡಿದ ವೇಗತ್ವ. |
| ಶರೀರ ಬೇಗ ಬೆಳದು, ಪುಷ್ಟಿ ಆಗುತ್ತದೆ; | ರಾಗವುಳ್ಳ ವೃತ್ತಿಸ್ಥಿರತ್ವ; |
| ಕಣ್ಣುಗಳು ಪ್ರಕಾಶಿಸುತ್ತವೆ; | ವೀರ್ಯತ್ವ; |
| ಕೂದಲು ವೃದ್ಧಿಯಾಗಿವೆ. | ದೀನೋಪಕಾರತ್ವ; |
| | ತ್ಯಾಗ; |
| | ಸಾಹಸ. |

### ದೇವಾಧೀನವಿಲ್ಲದ ಗುಣಗಳು

ಅತಿ ವ್ಯಸನತ್ವ;
ಗರ್ವ;
ಅಭ್ಯಂತರಕ್ಕೆ ಉಗ್ರ ಕೋಪ;
ಛಲ;
ಪ್ರಭುತ್ವಕಾಮ;
ದ್ರೋಹಕಲಹಗಳ ಚಿಂತನೆ.

### ೪. ಶ್ಲೇಷ್ಮ ಅಥವಾ ಶೀತ ರಕ್ತಸ್ವಭಾವದವರು

| ಶರೀರಲಕ್ಷಣಗಳು | ದೇವಾಧೀನಗುಣಗಳು |
|---|---|
| ಶರೀರದ ಹೊರಗಡೆಯಲ್ಲಿ ಸ್ವಲ್ಪ ಉಷ್ಣವೂ ಕೆಂಪು ವರ್ಣವೂ ಮಾತ್ರ ಕಾಣಿಸುವದು; | ಬುದ್ಧೀ ಚುರುಕತ್ವ; |
| ನೇತ್ರತೇಜ ಮಂದವಾಗಿರುವದು; | ಕ್ರಮಾನುಸಾರಕರ್ತೃತ್ವ; |
| ಶರೀರ ಮೆಲ್ಲಗೂ ಬಲಹೀನವಾಗಿಯೂ ಬೆಳಿಯುವದು; | ಸ್ವಗೃಹಸ್ಥಿತಿಸುಖತ್ವ; |
| ಅಂಗಗಳು ಸಡ್ಲು; | ದೀರ್ಘಚಿಂತಕತ್ವ. |
| ಎದೆ ವಿಶಾಲವಲ್ಲ; | ಮಿತಭಾಷಣ; |
| ರೆಪ್ಪೇ ಕೂದಲು ಉದ್ದ. | ಕೋಪಸಹನತ್ವ; |
| | ಉತ್ತಮ ಜ್ಞಾಪಕತ್ವ. |

ದೇವಾಧೀನವಿಲ್ಲದ ಗುಣಗಳು

ಪಾರಂಪರ್ಯ್ಯ ಫಲ;
ಬಹುಶೋಧನಾಬುದ್ಧಿರಹಿತತ್ವ;
ಚಿತ್ತಾಲಸ್ಯತ್ವ;
ಸಂಶಯತ್ವ;
ದೀರ್ಘ ಸೂತ್ರತ್ವ;
ವಿರಸತ್ವ.

ಮೇಲೆ ವಿವರಿಸಿದ್ದನ್ನು ವಿಚಾರಿಸಿದರೆ ಲಘು ರಕ್ತದವರಿಗೆ ಕಲ್ಪನಾಶಕ್ತಿ ಹೆಚ್ಚು, ಜಡ ರಕ್ತದವರಿಗೆ ಜ್ಞಾನಶಕ್ತಿ ಹೆಚ್ಚು, ಉಷ್ಣ ರಕ್ತದವರಿಗೆ ಚಿತ್ತಶಕ್ತಿ ಹೆಚ್ಚು, ಶೀತ ರಕ್ತದವರಿಗೆ ಬುದ್ಧಿಶಕ್ತಿ ಹೆಚ್ಚು ಎಂದು, ತಿಳಿಯುವದು. ಇವು ದೇವರು ಕೊಟ್ಟ ವಿಶೇಷ ಸ್ವಭಾವವರಗಳು. ಈ ವರಗಳು ಸಕಲರಲ್ಲಿ ಹೆಚ್ಚು ಕಡಿಮೆಯಾಗಿ ತೋರಿದರೂ ಒಂದು ಮಾತ್ರ ಮುಖ್ಯವಾಗಿ ಪ್ರಕಾಶಿಸುವದು. ಕವಿಗೆ ಕಲ್ಪನಾಶಕ್ತಿ, ಗುರುವಿಗೆ ಜ್ಞಾನಶಕ್ತಿ, ಅರಸನಿಗೆ ಚಿತ್ತಶಕ್ತಿ, ಉದ್ಯೋಗಸ್ಥರಿಗೆ ಬುದ್ಧಿಶಕ್ತಿ ವಿಶೇಷ ವರವಾಗಿರಬೇಕು. ಅದಲ್ಲದೆ ಚಿತ್ರ ಬರೆಯುವದಕ್ಕೂ ಲೆಖ್ಖ ಮಾಡುವದಕ್ಕೂ ಭಾಷೆ ಕಲಿಯುವದಕ್ಕೂ ಇತ್ಯಾದಿ ವಿದ್ಯೆಗಳಿಗೆ ಒಂದು ವಿಶೇಷ ಸ್ವಭಾವಶಕ್ತಿ ಅಗತ್ಯವಾಗಿದೆ; ಅದು ಇಲ್ಲದಿದ್ದರೆ ಕಲಿಯುವಿಕೇ ಮೇಲೆ ಸ್ವಲ್ಪ ಬಂದೀತು, ಆದರೆ ಅದು ಶ್ರಮೆಯಿಂದ ಬರುವದಲ್ಲದೆ ಚಾತುರ್ಯವಾಗೋದಿಲ್ಲ.

ಶರೀರದ ರಕ್ತಾವಸ್ಥೆಯ ಮೇಲೆ ಮಾತ್ರವಲ್ಲ, ಶರೀರದ ಅಂಗಾಂಗಗಳ ವಿಧ ವಿಧ ರೂಪ ವಿರೂಪಗಳನ್ನು ನೋಡಿ ಆತ್ಮದ ಭಾವಗಳನ್ನು ಊಹಿಸುವ ಪದ್ಧತಿ ಸ

ಹ ಹಳೇ ಕಾಲದಿಂದ ನಡಿಯುತ್ತಾ ಬಂತು: ಸ್ವಭಾವಜ್ಞರು ನೊಸಲಿನ ಪರೀಕ್ಷೆಯಿಂದಲೂ ಕಣ್ಣುಗಳ ಪರೀಕ್ಷೆಯಿಂದಲೂ ಮೂಗಿನ ಪರೀಕ್ಷೆಯಿಂದಲೂ ಬಾಯಿಯ ಪರೀಕ್ಷೆಯಿಂದಲೂ ತಲೆಯಲ್ಲಿರುವ ತಗ್ಗು ದಿನ್ನೆಗಳ ಪರೀಕ್ಷೆಯಿಂದಲೂ ಗುಣಗಳಿಂಥಾವೆಂದು, ಊಹಿಸಿ, ಹೇಳುತ್ತಾರೆ. ಉದಾಹರಣೆ: ಹಣೆ ಉದ್ದವಾಗಿರುವವರು ಕರ್ತೃತ್ವವುಳ್ಳವರೆಂದೂ ದೊಡ್ಡ ಹೆಡತಲೆಯವರು ಕಳ್ಳಬುದ್ಧಿಯುಳ್ಳವರೆಂದೂ ಇತ್ಯಾದಿ ಹೇಳುತ್ತಾರೆ. ಅವರ ಮಾತು ಒಮ್ಮೆ ಹೌದು, ಒಮ್ಮೆ ಅಲ್ಲವಾಗುವದು. ಕಳ್ಳತನದ ಲಕ್ಷಣವೆಂದು ವಿದ್ವಾಂಸರು ಹೇಳುವ ರೂಪವು ಮುಖದಲ್ಲಿ ತೋರಿದರೂ ಪರಮಾತ್ಮನ ಶಕ್ತಿಯಿಂದ ಕಳ್ಳಬುದ್ಧಿ ಹೋಗಿರ ಬಹುದಲ್ಲವೋ?



## 43. ON THE HABITATIONS OF MAN

## ೪೩. ಗೃಹ ಮೊದಲಾದ ಮನುಷ್ಯ ವಾಸಸ್ಥಾನಗಳು



“ಧೂಳಿಯಿಂದ ಮಾಳಿಗೆಯಾದೀತೇ„?
ಗಾದೆ.

“ಮೊದಲು ಮನುಜರು ಸದನವಿಲ್ಲದೆ,
ಹದನ ವರಿಯದೆ, ಮೃಗಗಳಂತೆಯೆ
ಪೊದರ ಪೊಕ್ಕರು; ಬಳಿಕ ಪರ್ಣದ ಶಾಲೆ ರಚಿಸಿದರೂ.||
ತದನು ಬುದ್ಧಿಯ ಕಲಿತು, ಚರ್ಮದ
ಹೊದಿಕೆಯಿಂದಲಿ ಬಟ್ಟೆಯಿಂದಲಿ
ಬಿದರು ಗಳುಗಳ ಮುಚ್ಚಿ, ಲಘುವಹ ಡೇರೆ ಹೊಡೆದರಗೋ.„||

"ಹಲವು ಕಾಲದ ಮೇಲೆ, ನೋಡ್ಯೆ,
ಹೊಲವ ತೋಟವ ಮಾಡಿ, ಜೋಕಿಲಿ
ಜಲವ ತಿರುಗಿಸಿ, ಬೇಲಿ ಸುತ್ತಿಸಿ, ಬೆಳಿಸುವವರಾಗೀ,||
ಫಲವ ಕಂಡತಿ ಸುಖದ ತಳದಲಿ
ತಲವ ಹಾಕುವರಾಗಿ, ಮನೆಗಳ
ಚಲುವಿನಿಂದಲಿ ಕಟ್ಟಿ, ಗೆಲುವಿಂದಲ್ಲಿ ಕೂಡಿಹರೂ.,,||



ಇದು ವಿಲಾಯತೀ ಹಿಟ್ಟುಗಾಣಿಗನೊಬ್ಬನ ಮನೆಯೂ ಗಾಣೆಚಕ್ರವೂ. ಆ ಚಕ್ರವು ತನ್ನ ಮೇಲೆ ಬೀಳುವ ನೀರಿನಿಂದ ತಿರುಗಿ, ಮನೆಯೊಳಗಿನ ಗಾಣೆಯ ಆವರ್ತಿಸುತ್ತದೆ. ಇಲ್ಲಿ ನೀರು ಒಂದು ಹರಣಿಯಲ್ಲಿ ತಿರುಗಿಸಿ ಕೊಂಡು ಬಂದು, ಚಕ್ರದ ಮೇಲೆ ಬೀಳಿಸುತ್ತಾರೆ; ಮತ್ತೊಂದು ಕಡೆಯಲ್ಲಿ ಆ ಚಕ್ರವನ್ನು ಇಳಿದು ಬರುವ ಹಳ್ಳದಲ್ಲಿಡುತ್ತಾರೆ.

ಕೆಲವು ಜನರು ಅತಿ ಕಾಡುಗುಣದವರಾಗಿ, ಮನೆಗಳಿಲ್ಲದೆ, ಮರಗಳ ಕೆಳಗೂ ಪರ್ವತಗುಹೆಗಳಲ್ಲಿಯೂ ವಾಸಿಸುತ್ತಾರೆ. ಅವರಿಗಿಂತ ಸ್ವಲ್ಪ ಹೆಚ್ಚು ಬುದ್ಧಿಯುಳ್ಳವರು ಕೊಂಬೆಗಳಿಂದ ಸಣ್ಣ ಗುಡಿಸಲುಗಳನ್ನು ಕಟ್ಟಿ ಕೊಂಡು, ವಾಸ ಮಾಡುತ್ತಾರೆ; ಅದಕ್ಕೆ ತೆಂಗಿನ ಗರಿಗಳನ್ನೂ ಈಚಲ ಗರಿಗಳನ್ನೂ ಪ್ರಯೋಗಿಸುವರು. ಕೆಲವರು ಶೀತಪ್ರದೇಶದಲ್ಲಿ ಭೂಮಿಯಲ್ಲಿ ಒಂದು ಗವಿ ಮಾಡಿ, ವಾಸ ಮಾಡುತ್ತಾರೆ; ಇಂಥ ವಾಸಸ್ಥಾನವು ಮೃಗಗಳು ವಾಸಿಸುವ ಗವಿಯ ಹಾಗೆ ಇರುತ್ತದಲ್ಲದೆ ಮನುಷ್ಯರಿಗೆ ಯೋಗ್ಯವಲ್ಲ.

ಕೆಲವು ಜನರು ಪಶ್ವಾದಿಗಳನ್ನು ಮೇಯಿಸಿ ಕೊಂಡು, ಬೇಟೆ ಆಡಿ ಕೊಂಡು, ಜೀವನ ಮಾಡುತ್ತಾರೆ. ಅವರು ಸಾರ್ವದಾ ಒಂದು ಸ್ಥಳದಲ್ಲಿರದೆ ಮೇವೂ ಬೇಟೆಯೂ ಸಿಕ್ಕುವ ಕಡೆಗಳಿಗೆ ಹೊರಟು ಹೋಗಿ, ತಿರುಗಾಡುತ್ತಾ ಇರುವದರಿಂದ ಅಂಥವರಿಗೆ ಸ್ಥಿರಗೃಹಗಳು ಪ್ರಯೋಜನಕ್ಕೆ ಬಾರವು. ಅಂಥವರು ಚರಸಾಮಗ್ರಿಯಾದ ಗುಡಾರಗಳನ್ನು ಮಾಡಿ ಕೊಂಡು, ತಾವು ಹೋಗುವ ಸ್ಥಳಗಳಿಗೆಲ್ಲ ತೆಗದು ಕೊಂಡು ಹೋಗಿ, ಮನಸ್ಸು ಬಂದ ಕಡೆಗೆ ಗುಡಾರ ಹೊಡದು, ಇಳುಕೊಳ್ಳುವರು. ಗುಡಾರಗಳನ್ನು ವಸ್ತ್ರದಿಂದ ಮಾಡಿ, ಮನೆಗಳಿಗೆ ಸ್ಥಂಭಗಳು ಇರುವ ಹಾಗೆ ಬಿದರುಗಳನ್ನೂ ಗಳುಗಳನ್ನೂ ಅದಕ್ಕೆ ಆಧಾರವಾಗಿಟ್ಟು, ಅವನ್ನು ಹುರಿ ಕಟ್ಟಿದ ಗೂಟಗಳನ್ನು ನೆಲಕ್ಕೆ ಬಡಿದು ನಿಲ್ಲಿಸುತ್ತಾರೆ.

ಚೀನಾರಾಜ್ಯದಲ್ಲಿ ಜನರನೇಕರು, ನೆಲದಲ್ಲಿ ಸ್ಥಳ ಸಾಲದೆ, ದೋಣಿಗಳಲ್ಲಿ ವಾಸಿಸುತ್ತಾರೆ; ಇಂಥಾ ದೋಣಿಗಳು ಅಲ್ಲಿಯ ದೊಡ್ಡ ನದಿಗಳಲ್ಲಿ ಸಾವಿರಾಂತರವಿರುತ್ತವೆ.

ಹಿಂದು ದೇಶದಲ್ಲಿ ಹಲವು ಜನರು ಮಂಣಿನಿಂದ ಗೋಡೆಗಳನ್ನು ಹಾಕಿ, ಹುಲ್ಲಿನಿಂದಾಗಲಿ ತೆಂಗಿನ ಎಲೆಗಳಿಂದಾಗಲಿ ತಾಳೇ ಎಲೆಗಳಿಂದಾಗಲಿ ಮಾಡುಗಳಿಗೆ ಹೊದಿಕೆ ಮಾಡಿ, ಒಕ್ಕಲಾಗಿರುತ್ತಾರೆ; ಹಲವರು ಮಾಳಿಗೆ ಕಟ್ಟುತ್ತಾರೆ; ಹಲವರು ಇಟ್ಟಿಗೆಯಿಂದ ಗೋಡೆಗಳ ಕಟ್ಟಿ, ಗಚ್ಚು ಹಾಕಿ, ನಾನಾ ವಿಧ ಚಿತ್ರಗಳ ಬರಸುತ್ತಾರೆ. ಕೆಲವು ಮನೆಗಳಿಗೆ ಕಲ್ಲಿನ ಗೋಡೆಗಳಿದ್ದಾಗ್ಯೂ ಮೇಲಿನ ಹೊದಿಕೆಯನ್ನು ಹುಲ್ಲಿನಿಂದ ಮಾಡುತ್ತಾರೆ. ಗೃಹಗಳ ವಿಶಾಲತೆಗೆ ತಕ್ಕ ಕೋಣೆಗಳನ್ನಿಟ್ಟು, ಬೇರೆ ಬೇರೆ ಕೆಲಸಕ್ಕೆ ಪ್ರಯೋಗಿಸುತ್ತಾರೆ. ದೇವಾಲಯ, ಅರಮನೆ, ಮಠ, ಚಂಡಸಾಲೆ, ಅಂಗಡಿ ಇತ್ಯಾದಿ ಮನೆಗಳನ್ನು ಕಟ್ಟುವದುಂಟು.

ಮಳೆಗಾಲದಲ್ಲಿ ತ್ಯಾವ ಬಾರದ ಹಾಗೆ ಎತ್ತರ ಭೂಮಿಯನ್ನು ನೋಡಿ, ಮನೆ ಕಟ್ಟ ಬೇಕು. ಇಲ್ಲದಿದ್ದರೆ ಮನೆಯ ಸುತ್ತು ನೀರು ನಿಂತು, ಗೋಡೆಗಳು ನೆನೆಯುತ್ತವೆ; ನಿಂತ ನೀರಿನಿಂದ ಏರುವ ಶೀತ, ದುರ್ವಾಸನೆಗಳಿಂದ ರೋಗಾದಿಗಳು ಸಂಭವಿಸುತ್ತವಾದ್ದರಿಂದ ಎತ್ತರವಾದ ಭೂಮಿ ಸಿಕ್ಕದ ಪಕ್ಷದಲ್ಲಿ ಮಂಣು ಹಾಕಿ, ತಳಪಾಯ ಎತ್ತರಿಸಿ, ಮನೆ ಕಟ್ಟ ಬೇಕು. ಅನೇಕ ಜನರು ಘಾಳಿ ಒಳಗಾಡದಂಥ ಪ್ರಕಾರವಾಗಿ ಮನೆಗಳ ಕಟ್ಟಿ ಕೊಂಡು, ವಾಸ ಮಾಡೋಣದರಿಂದ ಅವುಗಳಲ್ಲಿ ಹೆಚ್ಚು ಧಗೆ ಉಂಟಾಗಿ, ಸೌಖ್ಯ ಕೆಡುತ್ತದೆ. ಆಹಾರದಂತೆ ಘಾಳಿಯ ನೆನಸ ಬೇಕು. ಘಾಳಿ ಬರಲಿಕ್ಕೂ ಹೋಗಲಿಕ್ಕೂ ಸರಾಗವಾಗದ ಮನೆಯಾಗಿದ್ದರೆ ಜನರು ಬಿಡುವ ಶ್ವಾಸದಿಂದ, ಹೊಸ ಘಾಳಿ ಬಾರದ್ದಕ್ಕಾಗಿ, ಇದ್ದ ಘಾಳಿ ಅಶುದ್ಧವಾಗಿ, ಈ ಘಾಳಿಯನ್ನೇ ಆ

ಘ್ರಾಣಿಸುವದರಿಂದ ಅಸೌಖ್ಯ ಉಂಟಾಗುತ್ತದೆ. ಇದಕ್ಕುದಾಹರಣೆ: ಒಂದು ಇಲಿಯನ್ನು ಹಿಡಿದು, ಪಾತ್ರೆಯಲ್ಲಿ ಹಾಕಿ, ಘಾಳಿ ತೂರದ ಹಾಗೆ ಮುಚ್ಚಿ ಇಟ್ಟರೆ ಆ ಜಂತು ಯಾವಾಗಲೂ ಶ್ವಾಸ ಬಿಡಾಣದರಿಂದ ಆ ಘಟದೊಳಗಣ ಘಾಳಿ ಎಲ್ಲವೂ ಮಲಿನವಾಗಿ, ಇಲಿಯು ಬೇಗ ಸಾಯುವದು. ಆದದರಿಂದ ತಕ್ಕ ಸ್ಥಳ ನೋಡಿ, ಮನೆಗಳನ್ನು ಹಂದಿಯ ಗೂಡಿನ ಹಾಗೆ ಕಟ್ಟದೆ, ಐದು ಮೊಳ ಎತ್ತರ ಗೋಡೆಯಾದರೂ ಹಾಕಿ, ತಲೆ ತಗಲದ ಹಾಗೆ ಬಾಗಲುಗಳ ಉದ್ದವಾಗಿ ಮಾಡಿ, ವಿಶಾಲವಾದ ಕಿಟಕಿಗಳನ್ನು ಇಟ್ಟು, ಅದರಲ್ಲಿ ವಾಸಿಸ ಬೇಕು.

ಮನೆಗಳು ಶುಚಿಯಾಗಿರದದರಿಂದ ವ್ಯಾಧಿ ಮೊದಲಾದ ಉಪದ್ರವಗಳುಂಟಾಗುತ್ತವೆಂದು, ತಿಳಿಯದೆ ಪ್ರವರ್ತಿಸುವವರ ಕುಟುಂಬದಲ್ಲಿ ಅಶುಚಿಯಾಗುವದು; ಆದದರಿಂದ ವೈದ್ಯಕ್ಕೆ ಹೆಚ್ಚು ದ್ರವ್ಯ ವೆಚ್ಚ ಮಾಡ ಬೇಕಾಗುತ್ತದೆ. ಅದು ಕಾರಣ ಬುದ್ಧಿಯುಳ್ಳವರು ಸೌಖ್ಯವನ್ನು ಪಡ ಕೊಳ್ಳುವದಕ್ಕೆ ತಕ್ಕಂಥ ಮನೆಗಳಲ್ಲಿ ವಾಸಿಸುವದಲ್ಲದೆ ಶುಚಿಪ್ರಿಯರಾಗಿ, ಹೆಡ್ಡರಿಗೂ ತಂಮಂತೆ ಇರ ಬೇಕೆಂದು, ಹೇಳುವರು.

ಈ ದೇಶಸ್ಥರು ಬಹು ದ್ರವ್ಯ ಖರ್ಚು ಮಾಡಿ ದೊಡ್ಡ ಮನೆಗಳನ್ನು ಕಟ್ಟಿಸಿದಾಗ್ಯೂ ಗಡಿಗೇ ಬಾಯಿಯಂತೆ ಸಂಣ ಕಿಟಕಿಗಳನ್ನು ಇಡುತ್ತಾರೆ; ಇವರಿಗೆ ಹೇಳ ತಕ್ಕದ್ದೇನಂದರೆ—

"ನೋಡಿ ನಡೆಯೋನಿಗೆ ಕೇಡು ಬಾರದು."



# 44. ON LABOUR AND WORK

# ೪೪. ಕಷ್ಟ ಮಾಡುವದು

"ಉದ್ಯೋಗಂ ಪುರುಷಲಕ್ಷಣಂ"
"ಧರ್ಮೋ ವರ್ಧತಿ ವರ್ಧತಿ" ||

ಜನರು ಕಾಯ ಬುದ್ಧಿಗಳ ಕಷ್ಟ ಮಾಡುವದರಿಂದ ಅನ್ನ ವಸ್ತ್ರಾದಿಗಳನ್ನು ಸಂಪಾದಿಸಿ ಕೊಳ್ಳುವದಲ್ಲದೆ ಮನೆ, ತೋಟ, ಹೊಲ ಮೊದಲಾದ ಆಸ್ತಿಗಳನ್ನು ಘಳಿಸಿಟ್ಟು ಕೊಳ್ಳುತ್ತಾರೆ. ಕಷ್ಟ ಮಾಡದೆ ಪಿತರಾರ್ಜಿತ ದ್ರವ್ಯವನ್ನು ವ್ರಯ ಮಾಡು



ವಿಲಾಯತೀ ಬಡಿಗಯವನು.

ತ್ತಾ ಬಂದರೆ ಸ್ವಲ್ಪ ಕಾಲದ ಮೇಲೆ ಅದೆಲ್ಲಾ ಕಳಕೊಂಡು, ಕೂಳು ಬಟ್ಟೆ ಇಲ್ಲದೆ ಬಹಳ ಬಳಲ ಬೇಕಾಗುತ್ತದೆ. ಆದದರಿಂದ ಸರ್ವರೂ ಸೋಮಾರಿತನವನ್ನು ಬಿಟ್ಟು, ಯಾವದಾಗಲಿ ಒಂದು ಕೆಲಸವನ್ನು ಚಂದಾಗಿ ಮಾಡುತ್ತಿರ ಬೇಕು. ಸೋಮಾರಿಗಳ ಬದುಕು ಹಾಳಾಗುವದಲ್ಲದೆ ಬುದ್ಧಿ ಕೆಡುವದು, ದೇಹದ ಶಕ್ತಿ ತಗ್ಗುವದು, ಮನಸೌಖ್ಯ ತಪ್ಪುವದು. ಬುದ್ಧಿಯಪೇಕ್ಷೆಯಿಂದಲೂ ದ್ರವ್ಯಪ್ರಾಪ್ತಿಗೂ ಮಾನಮರ್ಯಾದೆಗೂ ಪರೋಪಕಾರಕ್ಕೂ ಕಷ್ಟ ಪಡುವದು ತಕ್ಕದ್ದಾಗಿದೆ.

"ಆಲಸ್ಯಮಮೃತಂ ವಿಷಂ.„

ಚಿಕ್ಕ ಮಕ್ಕಳು ಕಷ್ಟ ಮಾಡಿ ಜೀವಿಸಲಾರರಾದ್ದರಿಂದ ಹೆತ್ತವರು ಅವರಿಗೆ ವಯಸ್ಸಾಗುವ ಪರಿಯಂತರ ಪೋಷಿಸಿ, ಮಕ್ಕಳು ಇನ್ನು ಮುಂದೆ ತಾವೇ ತಮ್ಮ ಕಷ್ಟದಿಂದ ಬದುಕಲಾಗುವಂತೆ ಅವರನ್ನು ಬಾಲ್ಯದಲ್ಲಿ ಆರೈಕೆ ಮಾಡುತ್ತಾರೆ. ಕೆಲವು ಯೌವನಸ್ಥರು ಮೈಗಳ್ಳರಾಗಿ, ಕಲ್ಲಿನ ಹಾಗೆ ಮನೆಯಲ್ಲಿ ಕೂತು, ತಂದೆ ತಾಯಿಗಳಿಗೆ ಭಾರವಾಗಿ, ಅವರ ಕೈಗೂಳಿಗೆ ಕಾದು, ಇರುತ್ತಾರೆ. ಅಂಥವರು ತಂದೆ ತಾಯಿಗಳ ವಿಷಯದಲ್ಲಿ ನಡದು ಕೊಳ್ಳ ತಕ್ಕ ಧರ್ಮಾಚಾರವನ್ನು ಬಿಟ್ಟು, ಅವರಿಗೆ ದುಃಖವನ್ನು ಹುಟ್ಟಿಸುತ್ತಾರೆ. ಈ ಪ್ರಸಂಗ ಓದುವವರಲ್ಲಿ ಯಾರ್ಯಾರೂ ಹಾಗೆ ಪ್ರವರ್ತಿಸರೆಂದು, ಭಾವಿಸುತ್ತೇವೆ. ದೇಹಬಲವುಳ್ಳವರು ಕಷ್ಟ ಪಟ್ಟು, ದ್ರವ್ಯ ಸಂಪಾದಿಸಿ, ಜೀವನ ಮಾಡಿ, ದೇಹಬಲವಿಲ್ಲದೆ ಕಣ್ಣು ಕೈ ಕಾಲ್ಕಿವಿಗಳು ಹೀನರಾದ ಬಡವರಿಗೆ ಧರ್ಮ ಕೊಟ್ಟು ಸಹಾಯ ಮಾಡ ತಕ್ಕದ್ದು. —

"ಪಾಪಿ ಘಳಿಸಿದ್ದು ಪರರ ಪಾಲು.„

ಈ ಲೋಕದಲ್ಲಿ ಅನೇಕ ತರದ ಕೆಲಸ ಮಾಡ ಬಹುದು, ಆದರೆ ಎಲ್ಲಾ ಕೆಲಸಕ್ಕೆ ಎಲ್ಲರು ತಕ್ಕವರಲ್ಲ. ಕೆಲವರು ಕಾಯಶಕ್ತರು, ಕೆಲವರು ಬುದ್ಧಿಶಕ್ತರು, ಕೆಲವರು ಕಾಯಬುದ್ಧಿಶಕ್ತರು. ಒಬ್ಬೊಬ್ಬ ತನ್ನ ತನ್ನ ಸಾಮರ್ಥ್ಯಾನುಸಾರವಾಗಿಯೂ ದೇವ ಸೌಜ್ಞಾನುಸಾರವಾಗಿಯೂ ತಂದೆ ತಾಯಿಗಳ ಚಿತ್ತಾನುಸಾರವಾಗಿಯೂ ಒಂದು ಕೆಲಸ ನಡಿಸುವವನಾಗ ಬೇಕು.

"ಅಯೋಗ್ಯಃ ಪುರುಷೋ ನಾಸ್ತಿ
ಪ್ರಯೋಗಾಸ್ತತ್ರ ದುರ್ಲಭಾಃ,, ||
ಅಂದರೆ:
ಕೆಲಸಕ್ಕೆ ಬಾರದ ಮನುಷ್ಯನಿಲ್ಲ; ಮಾಡುವವರು ಮಾತ್ರ ಕಡಿಮೆ.

## 45. ON DISEASES

## ೪೫. ವ್ಯಾಧಿಗಳು

"ಪಾಪದಲ್ಲಿ ತಾಪ ತಪ್ಪದು.,,
ಗಾದೆ.

ಈ ಲೋಕದಲ್ಲಿ ಸರ್ವದಾ ರೋಗಾದಿಗಳು ಉಂಟಾಗುತ್ತವೆ; ಇದರ ಮೂಲಕಾರಣವು ಪಾಪವೇ. ವಾಂತಿಭೇದಿ, ಸಿಡುಬು, ರಕ್ತಭೇದಿ ಮೊದಲಾದ ಸಂಕ್ರಾಮಿಕ ವ್ಯಾಧಿಗಳು ಒಂದೊಂದು ಕಾಲದಲ್ಲಿ ಹುಟ್ಟಿ, ಪ್ರಬಲವಾಗಿ, ಸಾವಿರ ಸಾವಿರ ಜನರನ್ನು ನಾಶ ಮಾಡುತ್ತವೆ. ದುರ್ಗಿ ಕಾಳಿ ಮೊದಲಾದ ಕೆಲವು ಹೆಣ್ಣುದೇವರುಗಳು ಸಿಟ್ಟು ಮಾಡಿ, ಈ ರೋಗಗಳನ್ನು ಕಳುಹಿಸುತ್ತಾರೆಂದು ಹೇಳಿ, ಅಜ್ಞಾನಿಗಳು ಬೀದಿ ಬೀದಿಯಲ್ಲಿ ಕಲಶಗಳನ್ನು ನಿಲ್ಲಿಸಿ, ಬೇವಿನ ಸೊಪ್ಪಿನಿಂದಲೂ ಮಾವಿನ ಸೊಪ್ಪಿನಿಂದಲೂ ತೋರಣವನ್ನು ಕಟ್ಟಿ, "ಬರೀ ಗುಲ್ಲು ನಿದ್ದೆಗೇಡು,, ಎಂಬ ಗಾದೆಗೆ ಸರಿಯಾಗಿ ಢೋಲು ತಮಟೆ ಮೊದಲಾದ ವಿಕಾರವಾದ್ಯಧ್ವನಿಗಳನ್ನು ಮಾಡಿ, ಕುರಿ ಕೋಳಿ ಕೋಣಗಳನ್ನು ಬಲಿ ಕೊಡುತ್ತಾರೆ. ಇಂಥಾ ಕಾರ್ಯಗಳು ಜನರ ಮೂಢತ್ವವನ್ನು ತೋರಿಸುತ್ತವೆ.

ವ್ಯಾಧಿಗಳಿಗೆ ಅನೇಕ ಕಾಲಾಸ್ಪದಗಳುಂಟು. ಅವುಗಳಲ್ಲಿ ಮುಖ್ಯವಾದವುಗಳು ಯಾವವಂದರೆ: ಬಹು ಕಾಲ ಮಳೆ ಇಲ್ಲದೆ ಹೋಗುವದರಿಂದ ಭೂಮಿಯು ಬಹು ತಪ್ತವಾಗಿರುವ ಸಮಯದಲ್ಲಿ ಸ್ವಲ್ಪ ಮಳೆ ಹೊಯ್ದರೆ ಭೂಮಿಯೊಳಗಣ ಉಷ್ಣವು

ಮೇಲಕ್ಕೆ ಏರುವದು; ಈ ಉಷ್ಣವು ರೋಗಕ್ಕೆ ಆಸ್ಪದವಾಗುವದು. ಅಲ್ಲಲ್ಲಿ ಬಿದ್ದ ಕಸಕ್ಕೂ ಮರಗಳಿಗೂ ಎಲೆಗಳಿಗೂ ಮೃಗ ಪಕ್ಷಿ ಸರ್ಪಗಳ ಶವಗಳಿಗೂ ಮೊದಲು ಮಳೆ ಹೊಡೆದರೆ ಅದದು ಬೇಗ ಕೊಳತು, ದುರ್ಗಂಧವು ವಾಯುವಿನ ಸಂಗಡ ಮಿಳಿತವಾಗಿ ಬರುವದರಿಂದಲೂ ವ್ಯಾಧಿಗಳು ಹುಟ್ಟುತ್ತಿರುವವು. ಈ ಎರಡರಿಂದ ಜ್ವರ, ತಲೇ ನೋವು ಮುಂತಾದ ಚಿಕ್ಕ ರೋಗಗಳು ಹುಟ್ಟುವದಲ್ಲದೆ ಜೋಪಾಸನವಿಲ್ಲದಿದ್ದರೆ ದೊಡ್ಡ ಸಾಂಕುವ್ಯಾಧಿಗಳು ಆದಾವು. ವಿನಹಾ ಆಹಾರಪಥ್ಯವೂ ಯೋಗ್ಯಾಹಾರವೂ ಇಲ್ಲದಲ್ಲಿ, ಅಮಲಿರುವಲ್ಲಿ, ಅಶುಚಿ ಇರುವಲ್ಲಿ, ಮನಸ್ಸುಖವಿಲ್ಲದಲ್ಲಿ, ನೀರಿನ ಕೊಳಕು ಶೀತವಿರುವಲ್ಲಿ, ಒಳ್ಳೇ ಕುಡಿ ನೀರಿಲ್ಲದಲ್ಲಿ, ಪಟಿಂಗತನವಿರುವಲ್ಲಿ, ಜನರು ರಾಶಿರಾಶಿಯಾಗಿರುವಲ್ಲಿ ದೊಡ್ಡ ರೋಗಗಳು ಬರಲಿಕ್ಕೂ ಆಶ್ಚರ್ಯವಲ್ಲ. ವಿದ್ಯಾಭಿವೃದ್ಧಿಯಿಂದ ವ್ಯಾಧಿಗಳಿಗೆ ಕಾರಣವಿಂಥಾದ್ದೆಂದು ತಿಳಿದು, ಜಾಗ್ರತೆ ಉಳ್ಳವರಾಗಿ ಪ್ರವರ್ತಿಸುವವರು ಸುಖವನ್ನು ಅನುಭವಿಸುವರೆಂಬುವದಕ್ಕೆ ಸಂದೇಹವಿಲ್ಲ.

ಸುಣ್ಣದಲ್ಲಿ ದುರ್ಗಂಧ ಪರಿಹರಿಸುವ ಗುಣವದೆ. ಅದರಿಂದ ಅದನ್ನು ಗೋಡೆಗಳಿಗೆ ಹತ್ತಿಸುವದೂ ಕೊಳಕು ನೀರಿನಲ್ಲಿ ಹಾಕುವದೂ ಮನೆಯೊಳಗೆ ಚಿಮುಕಿಸುವದೂ ವಾಂತಿಭೇದಿ ಇತ್ಯಾದಿ ಸಾಂಕುವ್ಯಾಧೀ ಸಮಯದೊಳಗೆ ಹಿತವಾಗಿದೆ; ಹುಳಿರಸದಿಂದ ಮೈ ತೊಳ ಕೊಳ್ಳುವದು ಸಹ ಒಳ್ಳೇದು. ಆದರೆ ಮುಖ್ಯವಾಗಿ ಗೃಹ ಶರೀರಗಳ ಶುಚೀಕರಣವೂ ಭಕ್ತಿಯೂ ಆತ್ಮಧೈರ್ಯವೂ ಆಹಾರಪಥ್ಯವೂ ಅಂಥಾ ಕಾಲಕ್ಕೆ ಬೇಕು.

## 46. ON GOD

## ೪೬. ಭಕ್ತಿಯು

"ಕರುಣಯಾ ತಸ್ಯ ಪ್ರವೃತ್ತಿರಸ್ತ್ಯೇವ" ||
ಸರ್ವದರ್ಶನಸಂಗ್ರಹ.

ಅಂದರೆ:

ನಿಶ್ಚಯವಾಗಿ ಆತನು (ದೇವರು) ಕರುಣೆಯಿಂದ ಮಾಡುತ್ತಾನೆ.



ಯಹೂದ್ಯರು ಹೊಲದ ಪ್ರಥಮ ಫಲಗಳನ್ನು ದೇವರಿಗೆ ಅರ್ಪಿಸುವದಕ್ಕೆ ತಂದದ್ದು.

ದೇವರನ್ನು ಯಾವನಾದರೂ ಎಂದೂ ನೋಡಲಿಲ್ಲ. ಅದರಿಂದ ಆತನಿಲ್ಲವೆಂದು ಊಹಿಸ ತಕ್ಕದ್ದೋ? ಆಗದು. ದೃಶ್ಯವಾದವುಗಳು ಮಾತ್ರ ಲೋಕದಲ್ಲಿರುತ್ತವೆಂದು, ಗೋಚರಿಸದವುಗಳು ಇಲ್ಲವೆಂದು, ಎಣಿಸ ಬಾರದು. ಮರದ ಎಲೆ, ಕೊಂಬೆ ಮೊದಲಾದವುಗಳು ಅಲ್ಲಾಡುವದನ್ನು ದಿನಾಲು ನೋಡುತ್ತಿದ್ದೇವಲ್ಲದೆ ಅವುಗಳನ್ನು ಅಲ್ಲಾಡಿಸುವ ವಾಯುವನ್ನು ನೋಡಲಾರೆವು; ಆದಾಗ್ಯೂ ವಾಯುಸ್ಪರ್ಶನದಿಂದ ವಾಯುವೆಂಬದಿರುತ್ತದೆಂದು, ತಿಳಿದು ಕೊಳ್ಳುತ್ತೇವೆ. ಅದೇ ಪ್ರಕಾರ ದೇವರನ್ನು ನೋಡದೆ ಇದ್ದಾಗ್ಯೂ ಆತನು ಸೃಷ್ಟಿಸಿದ್ದನ್ನು ನೋಡೋಣದರಿಂದ ಅದೆಲ್ಲಕ್ಕೂ ಕರ್ತನೊಬ್ಬನು ಇರುತ್ತಾನೆಂದು ನಂಬುತ್ತೇವೆ.

ಯಾವನೊಬ್ಬನೂ ಹಡಗು ಹತ್ತಿ, ಒಂದು ನಿರ್ಜನದ್ವೀಪಕ್ಕೆ ಶೇರಿ, ಅಲ್ಲಿ ನಾನಾ ವಿಧ ಪಾತ್ರೆಗಳು ಇರುವ ಅತಿ ವಿಚಿತ್ರವಾದ ಚಿತ್ರಗಳಿಂದ ಬಹಳ ಅಲಂಕರಿಸಿದ ಒಂದು ಮನೆಯನ್ನು ನೋಡಿದರೆ ತತ್ಕಾಲದಲ್ಲಿ ಮನುಷ್ಯರಿಲ್ಲದದರಿಂದ ಅದು ಮಾನುಷ್ಯ ಕೃತ್ಯವಲ್ಲವೆಂದು, ನೆನಸುವನೋ? ಆ ಸಮಯದಲ್ಲಿ ಯಾರಾದರೂ ಬಂದು, ಈ ಗೃಹ ತಾನಾಗಿಯೇ ಉಂಟಾದದ್ದಲ್ಲದೆ ಮನುಷ್ಯನಿರ್ಮಿತವಲ್ಲವೆಂದು ಹೇಳಿದರೆ ನಂಬುವನೋ? ಹಾಗೆ ಹೇಳಿದವನು ಮೂಢನೆಂದು, ಎಣಿಸುವನಲ್ಲವೋ?

ಆ ಪ್ರಕಾರವೇ ಸಮಸ್ತವನ್ನು ಉಂಟು ಮಾಡಿದ ದೇವರಿದ್ದಾನೆಂದು, ಸರ್ವರೂ ನಿಶ್ಚೈಸಿ ಕೊಂಡಿದ್ದಾರೆ.

ಈ ಭೂಮಿಯು ನಮಗೆ ಬೇಕಾದ ಸಮಸ್ತ ವಸ್ತು ಉಳ್ಳದ್ದಾಗಿ, ಒಂದು ಮನೆಯೋಪಾಧಿಯಲ್ಲಿರುತ್ತದೆ; ಸೂರ್ಯ ಚಂದ್ರಾದಿಗಳು ದೀಪದ ಹಾಗೆ ಬೆಳಗುತ್ತವೆ. ಹೊಲ ಗದ್ದೆಗಳು ಕಣಜಗಳ ಹಾಗೆ ಅವೆ; ವೃಕ್ಷಗಳು ಮಧುರವಾದ ಹಣ್ಣುಗಳು ತುಂಬಿದ ಪುಟ್ಟಿಗಳ ಹಾಗೆ; ಜಲಪಾತ್ರೆಯಂತೆ ನದಿ, ಮಡು ಮೊದಲಾದವುಗಳು; ಹತ್ತಿಗಿಡಗಳು ವಸ್ತ್ರಗಳ ಪೆಟ್ಟಿಗೆಯಂತೆ; ಪಶುವು ಹಾಲು ತುಂಬಿದ ಪಾತ್ರೆಯಂತೆ; ಹೂವುಗಳು ವಿಚಿತ್ರವಾದ ಚಿತ್ರಗಳಂತೆ;—ಹೀಗೆ ವಿಧ ವಿಧವಾಗಿ ಈ ಭೂಮಿ ಎಂಬ ದೊಡ್ಡ ಮನೆ ವರ್ಣಿಸ ಬಹುದು. ಮನುಷ್ಯಾದಿ ಜೀವಿಗಳಿಗೆ ಹ್ಯಾಗೆ ಬೇಕೋ ಹಾಗೆಯೇ ಅದು ಅದೆ. ನೋಡುವದಕ್ಕೂ ಕೇಳುವದಕ್ಕೂ ಮೂಸುವದಕ್ಕೂ ರುಚಿಸುವದಕ್ಕೂ ಸ್ಪರ್ಶಿಸುವದಕ್ಕೂ ಎಷ್ಟೋ ಅದೆ! ಇಳೆ, ಜಲ, ಆಕಾಶಗಳ ಮಹಿಮೆಗಳನ್ನು ಧ್ಯಾನಿಸಿರಿ! ಈ ಭೂಮನೆ ಎಷ್ಟೋ ದೊಡ್ಡದು, ದೇಶಗಳೆಂಬ ಕೋಣೆಗಳು ಎಷ್ಟೋ ವಿಶಾಲ! ಒಂದು ಹುಳವಾದರೂ ತನಗೆ ತಕ್ಕ ಜೋಪಾನ ಇಲ್ಲದುಂಟೇ? ಬಂಡೆಕಲ್ಲಾದರೂ ಉಸುಬಾದರೂ ತನ್ನ ಯೋಗ್ಯತಾಶೃಂಗಾರವಿಲ್ಲದುಂಟೇ? ವಿಲಾಯತಿಯಿಂದ ತಂದ ಗಡಿಯಾರ ಕಂಡು, ಅನೇಕರು ಅದರಲ್ಲಿ ಕಾಣುವ ಯುಕ್ತಿಗೆ ಆಶ್ಚರ್ಯ ಪಡುತ್ತಾರೆ; ಆದರೆ ಗಡಿಯಾರ ಮಾಡಿದವನು ಬೆಳೆಯುವ ಒಂದು ಕೂದಲನ್ನಾದರೂ ನಿರ್ಮಿಸ ಬಹುದೇ? ಮತ್ತು ಗಡಿಯಾರ ಮಾಡಲಿಕ್ಕೆ ಬುದ್ಧಿ ಕೊಟ್ಟವನ್ಯಾರು?

ಹೀಗೆಂದು ವಿಚಾರಣೆ ಮಾಡುತ್ತಾ ಹೋಗಿ, ಶಕ್ತಿಯಿಂದಲೂ ಜ್ಞಾನದಿಂದಲೂ ಪ್ರೀತಿಯಿಂದಲೂ ಶೋಭಿಸುವಂಥ ಪರಮಾತ್ಮನೆಂಬ ಸೃಷ್ಟಿಕರ್ತನನ್ನು ಸೃಷ್ಟಿಮುಖಾಂತರವಾಗಿ ತಿಳುಕೊಂಡು, ವಿಶ್ವಾಸಿಸಿ, ಕೃತಜ್ಞತೆಯುಳ್ಳವರಾಗಿರಿ!

"ಜಗದ ಭಾರವ ನಡಿಸೊ ಮಹಿಮೆಯು,
ಹಗಲು ರಾತ್ರಿಯು ಕಾಯೊ ಮಹಿಮೆಯು,
ಗಗನದಲ್ಲಿಯ ತಾರೆಗಣಗಳ ತರುವ ಮಹಿಮೆಯುನೂ,||
ಮುಗಿಲ ಶಿಡಲಿನ ಮಳೆಯ ಮಹಿಮೆಯು,
ಬಗೆಯ ಧಾನ್ಯದ ಫಲದ ಮಹಿಮೆಯು—
ನಗಣೆತಾವನಿಜಲಖಚರಗಳ ಮಹಿಮೆಯಾರ್ಗೈದಾ?,,||

"ಬಾಲರನವನಿಗಾರು ತಂದನು?
ಹಾಲ ಮೊಲೆಯೊಳಗಾರು ಸೃಜಿಸಿದ?
ಕಾಲ ಗಮನವನಾರು ಕೊಟ್ಟನು? ನುಡಿಯನಾರಿತ್ತಾ?||
ಆಲಯಂಗಳೊಳಗತಿ ಸುಖವನು
ಪಾಲು ಕೊಡುವವನಾರು? ಕಳೆವನು
ಕಾಲಭಯವನ್ನಾರು? ದೇವರೆ ಯೆಂದು, ಪ್ರೀತಿಸೆಲೇ!„||



# IV. GEOGRAPHY AND HISTORY

# ೪. ಭೂವರ್ಗವು

## 47. ON THE EARTH AS A GLOBE

## ೪೭. ಭೂಮ್ಯಾಕಾರಾಧಾರಾದಿಗಳು

---

"ಭಪಂಜರಃ ಸ್ಥಿರೋ ಭೂರೇವಾವೃತ್ಯಾವೃತ್ಯ ಪ್ರಾತಿದೈವಸಿಕೌ |
ಉದಯಾಸ್ತಮಯೌ ಸಂಪಾದಯತಿ ನಕ್ಷತ್ರಗ್ರಹಾಣಾಮ್„||

ಆರ್ಯಭಟ್ಟನ ಸಿದ್ಧಾಂತಶಾಸ್ತ್ರ.

ಅಂದರೆ:

ನಕ್ಷತ್ರಚಕ್ರವು ಸ್ಥಿರವಾಗಿದೆ; ಭೂಮಿಯೇ ತಿರುಗಿ ತಿರುಗಿ, ಪ್ರತಿದಿನಕ್ಕೆ
ನಕ್ಷತ್ರಗ್ರಹಗಳ ಉದಯಾಸ್ತಮಯ ಸಂಪಾದಿಸುತ್ತದೆ.

"ಭೂಮೇಃ ಪಿಂಡಃ ಶಶಾಂಕಜ್ಞಕವಿರವಿಕುಜೇಜ್ಯಾರ್ಕಿನಕ್ಷತ್ರಕಕ್ಷಾ |
ವೃತ್ತೈರ್ವೃತ್ತೋ ವೃತಃ ಸನ್ ಮೃದನಿಲಸಲಿಲವ್ಯೋಮತೇಜೋಮಯೋ ಽಯಂ||
ನಾನ್ಯಾಧಾರಃ ಸ್ವಶಕ್ತ್ಯೈವ ವಿಯತಿ ನಿಯತಂ ತಿಷ್ಠತಿ„||

ಭಾಸ್ಕರಾಚಾರ್ಯನ ಸಿದ್ಧಾಂತಶಾಸ್ತ್ರ.

ಅಂದರೆ:

ಭೂಮಿಯ ಗೋಳವು ಚಂದ್ರ ಬುಧ ಶುಕ್ರ ಸೂರ್ಯ ಮಂಗಳ ಬೃಹಸ್ಪತಿ ಶನಿ ಎಂಬ ನಕ್ಷತ್ರಗಳ ಬೀದಿಗಳ ಚಕ್ರಗಳಿಂದ ದುಂಡಾಗಿ ಸುತ್ತಲ್ಪಟ್ಟು, ಮಣ್ಣು ಧೂಳಿ ನೀರು ಆಕಾಶ

ಬೆಂಕಿಗಳಿಂದ ಕೂಡಿದಂಥಾದ್ದಾಗಿ, ಬೇರೆ ಆಧಾರವಿಲ್ಲದೆ, ತನ್ನ ಶಕ್ತಿಯಿಂದಲೇ ಆಕಾಶದಲ್ಲಿ ಯಾವಾಗಲೂ ನಿಂತದೆ.

ಭೂಮಿಯು ಅಂತರಿಕ್ಷದಲ್ಲಿ ಬ್ಯಾಲದ ಹಣ್ಣಿನ ಹಾಗೆ ಗುಂಡಾಗಿ, ನಕ್ಷತ್ರಗಳೂ ಗ್ರಹಗಳೂ ಅನ್ನಿಸಿ ಕೊಳ್ಳುವ ಅನೇಕ ಗೋಳಾಕಾರಲೋಕಗಳಂತೆ ಕಾಣುವ ಆಧಾರವೇನೂ ಇಲ್ಲದೆ ಇರುತ್ತದೆ. ನಕ್ಷತ್ರಗಳಲ್ಲಿ ಸೂರ್ಯ ಮೊದಲಾದ ಸಹಸ್ರಶ ಗೋಳಗಳು ಭೂಮಿಗಿಂತ ಅತಿ ದೊಡ್ಡವುಗಳಾಗಿವೆ; ಚಂದ್ರ ಮೊದಲಾದ ಕೆಲವು ಗೋಳಗಳು ಭೂಮಿಗಿಂತ ಸಣ್ಣವಾಗಿ ಅವೆ. ಸೂರ್ಯ ಮುಂತಾದ ಅಚರನಕ್ಷತ್ರಗಳಿಗೆ ಪ್ರಕಾಶವು ಸ್ವಾಭಾವಿಕವಾಗಿದೆ; ಭೂಮಿ ಚಂದ್ರ ಮುಂತಾದ ಚರನಕ್ಷತ್ರಗಳಿಗೆ ಅದು ಸೂರ್ಯನಿಂದ ಪ್ರಾಪ್ತವಾಗುವಂಥಾದ್ದಾಗಿ ಅದೆ. ಆಕಾಶದಲ್ಲಿ ರಾತ್ರೀಲಿ ಕಾಣುವ ಚರಾಚರನಕ್ಷತ್ರಗಳು ಚಿಕ್ಕಿ ಚಿಕ್ಕಿಗಳಾಗಿ ಕಂಡರೂ ಅವು ದೊಡ್ಡವಲ್ಲವೆಂತ ಸಂದೇಹ ಪಡ ಬೇಡ; ಅತಿ ದೂರವಲ್ಲಿರುವದರಿಂದ, ನಮ್ಮ ಕಣ್ಣುಗಳಿಗೆ ಸಣ್ಣವುಗಳಾಗಿ ಕಾಣಿಸುತ್ತವೆ.

ಆಕಾಶದಲ್ಲಿ ಭೂಮಿಯು ದೃಶ್ಯಾಧಾರವಿಲ್ಲದೆ ಸೂರ್ಯಾಕರ್ಷಣಶಕ್ತಿಯಲ್ಲಿ ಇರುತ್ತದೆ; ಚಂದ್ರನು ಭೂಮಿಯ ಸುತ್ತಲು ತಿರುಗುವಂತೆ ಇದು ಸೂರ್ಯನ ಸುತ್ತಲು ಆಕಾಶದಲ್ಲಿ ತಿರುಗುತ್ತದೆ; ಅದಲ್ಲದೆ ಭೂಮಿ ತನ್ನ ಅಚ್ಚಿನ ಸುತ್ತಲು ತಿರುಗುತ್ತದೆ. ಅತಿ ವೇಗವಾಗಿ ಹೋಗುವ ನಾವೆಯು ಹೆಚ್ಚು ಕಡಿಮೆ ನಾಲ್ಕು ತಿಂಗಳಲ್ಲಿ ಸುತ್ತಿ ಬರುವಷ್ಟು ದೊಡ್ಡ ಭೂಮಿಯು ಬೇರುಬುಗುರಿಯಂತೆ ಬಿಡದೆ ತಿರುಗುತ್ತಾ, ೨೪ ತಾಸುಗಳಲ್ಲಿ ತನ್ನ ಅಚ್ಚಿನ ಮೇಲೆ ತನ್ನನ್ನು ಸುತ್ತುತ್ತದೆ; ಇಂಥಾ ಚಲನೆಯಿಂದ ರಾತ್ರಿ ಹಗಲು ಸರಿಯಾಗಿ ಉಂಟಾಗುತ್ತದೆ. ಹ್ಯಾಗಂದರೆ: ಭೂಮಿಯು ತಿರುಗುತ್ತಾ ಹೋಗುವಾಗ ಸೂರ್ಯನಿಗೆ ಎದುರು ಬೀಳುವ ಭಾಗಕ್ಕೆಲ್ಲ ಪ್ರಕಾಶವುಂಟಾಗಿ, ಅಲ್ಲಿಯಣ ನಿವಾಸಿಗಳಿಗೆ ಹಗಲಾಗಿರುವದು; ಮಿಕ್ಕ ಭಾಗದಲ್ಲಿರುವವರಿಗೆ, ಸೂರ್ಯಕಾಂತಿ ಇಲ್ಲದೆ, ಕತ್ತಲೆ ಕವಿದು, ರಾತ್ರಿಯಾಗಿರುವದು. ಭೂಮಿಯು ನಿತ್ಯ ತಿರುಗುವದರಿಂದ ಉದಯಾಸ್ತಮಾನಗಳು ಸುತ್ತಲು ಕ್ರಮವಾಗಿ ನಡೆಯುತ್ತವೆ.

ಭೂಮಿಯು ಬಹು ದೊಡ್ಡ ಗೋಳವಾಗಿರುವದರಿಂದ ನಾವು ಬಹಳ ಸ್ವಲ್ಪ ಮಾತ್ರವೇ ನೋಡುತ್ತೇವಾದ ಕಾರಣ ನಮಗೆ ಅದು ಚರ್ಪಟವಾದ ಮಂಡಲಾಕೃತಿಯಾಗಿ ತೋಚುತ್ತದೆ; ಆದರೆ ಭೂಮಿ ವರ್ತುಲಾಕಾರವಾಗಿರುತ್ತದೆಂಬದಕ್ಕೆ ಅನೇಕ ದೃಷ್ಟಾಂತಗಳವೆ. ಉದಾಹರಣೆಗಳು:

ಬೈಲುಸೀಮೆಯಲ್ಲಿ ಪಯಣ ಮಾಡುವವರಿಗೆ ದೂರವಾದ ಬೆಟ್ಟದ ತುದಿ ಮೊದಲು ಕಾಣುತ್ತದೆ; ಹತ್ತರ ಹೋದರೆ ಅಡಿಭಾಗವೂ ಕಾಣ ಬರುತ್ತದೆ. ಯಾಕೆ ಅಂದರೆ

ಕಣ್ಣಿಗೂ ಅಡಿಭಾಗಕ್ಕೂ ಗೋಳಾಕಾರಭೂಮಿಯ ಬಿಲ್ಲಾಕೃತಿಯಾದ ಒಂದು ಪ್ರಾಂತ್ಯ ನಡುವೆ ಇರುವದರಿಂದ ತುದಿ ಮಾತ್ರವೇ ಮೊದಲು ಕಾಣುತ್ತದೆ. ಸಮುದ್ರತೀರದಲ್ಲಿ ನಿಂತು ಬಹಳ ದೂರದಲ್ಲಿ ಬರುವ ಹಡಗವನ್ನು ನೋಡಿದರೆ ಅದರ ಕೂವೆಮರದ ತುದಿ ಮಾತ್ರ ಕಾಣಿಸುವದಲ್ಲದೆ ಹಡಗಿನ ಅಡಿಭಾಗ ಕಾಣಿಸುವದಿಲ್ಲ; ಅದು ಸಮೀಪಕ್ಕೆ ಬರ ಬರುತ್ತಿರಲಾಗಿ ಉಳಿದ ಭಾಗವೂ ದೃಷ್ಟಿಗೆ ಬೀಳುವದು. ಭೂಮಿಯು ಮಟ್ಟವಾಗಿದ್ದರೆ ಪರ್ವತದ ದೊಡ್ಡದಾದ ಅಡಿಯು ತುದಿಗಿಂತ ಬೇಗ ಕಾಣಿಸಬೇಕಾದ ಹಾಗೆ ನಾವೆಯ ಅಡಿಭಾಗವು ಬೇಗವೇ ಕಾಣಿಸ ಬೇಕು; ಆದರೆ ಮನುಷ್ಯನಿಗೂ ಪರ್ವತಕ್ಕೂ ಮನುಷ್ಯನಿಗೂ ನಾವೆಗೂ ನಡುವೆ ಇರುವ ಸ್ಥಳಗಳು ಬಾಗಿ, ಬಿಲ್ಲಿನ ಆಕಾರವಾಗಿ, ಕೆಳಗಿನದು ಮರೆ ಮಾಡುತ್ತವೆ; ಬಿಲ್ಲು ವರ್ತುಲದ ಒಂದು ಭಾಗವಾಗಿರುತ್ತದೆ; ಆದ್ದರಿಂದ ಭೂಮಿಯು ವರ್ತುಲವಾಗಿದೆ.

ಇದಲ್ಲದೆ ಒಂದು ನೊಣ ಒಂದು ಕಿತ್ತಲೇ ಹಣ್ಣಿನ ಮೇಲೆ ಪಕ್ಕಗಳಿಗೆ ತಿರುಗದೆ ಒಂದೇ ದಿಕ್ಕಿಗೆ ಹೋದರೆ ಮರಳಿ ಬಿಟ್ಟ ಸ್ಥಳವನ್ನು ಶೇರುವ ಮೇರೆಗೆ ಯಾವನಾದರೂ ಚನ್ನಪಟ್ಣದಿಂದ ಹೊರಟು, ದಕ್ಷಿಣಕ್ಕಾಗಲಿ ಉತ್ತರಕ್ಕಾಗಲಿ ಎಷ್ಟು ಮಾತ್ರವೂ ತಿರುಗದೆ, ಪೂರ್ವಕ್ಕಾಗಲಿ ಪಶ್ಚಿಮಕ್ಕಾಗಲಿ ನೆಟ್ಟಗೆ ಹೋದರೆ ಮರಳಿ ಚನ್ನಪಟ್ಣಕ್ಕೆ ಬರುವನು. ಆದದರಿಂದ ಭೂಮಿ ಗೋಳಾಕಾರವಾಗಿದೆ ಎಂದು, ಗ್ರಹಿಸ ಬೇಕು. ಪ್ರತಿ ಸಂವತ್ಸರವು ಹಡಗಗಳು ಭೂಮಿಯ ಸುತ್ತಲೂ ಹೋಗುತ್ತವೆ.

ಈ ಮೂರು ಉದಾಹರಣೆಗಳಲ್ಲದೆ ಇನ್ನು ಅನೇಕ ಅವೆ.

ದೀಪದ ಮುಂದೆ ಒಂದು ಕಿತ್ತಲೇ ಹಣ್ಣು ತಿರುಗಿಸಿದರೆ ಹ್ಯಾಗೋ, ಹಾಗೆಯೇ ಸೂರ್ಯನ ಎದುರಿಗೆ ಭೂಮಿಯು ತಿರುಗಿ, ಯಾವಾಗಲೂ ಅರ್ಧ ಭಾಗ ಬೆಳಗಿ, ಮಿಕ್ಕ ಅರ್ಧ ಭಾಗವು ಕತ್ತಲಾಗಿರುವದು. ದೀಪದ ಮುಂದೆ ಹಿಡಿದ ಕಿತ್ತಲೆಯನ್ನು ಸ್ವಲ್ಪ ಸ್ವಲ್ಪ ತಿರುಗಿಸುತ್ತಾ ಇದ್ದರೆ ಕತ್ತಲಾಗಿದ್ದ ಭಾಗಕ್ಕೆ ಸ್ವಲ್ಪ ಸ್ವಲ್ಪ ಬೆಳಕು, ಬೆಳಕಾಗಿದ್ದ ಭಾಗಕ್ಕೆ ಸ್ವಲ್ಪ ಸ್ವಲ್ಪ ಕತ್ತಲೆ ಆಗುವದು. ತಿರುಗಿಸುವ ಆ ಕಿತ್ತಲೇ ಹಣ್ಣಿನ ಮೇಲೆ ಒಂದು ನೊಣವು ಕೂತು ಇದ್ದರೆ ಹಣ್ಣಿನ ತಿರುಗಾಟದಿಂದ ಆ ನೊಣವು ಅರ್ಧ ಪ್ರದೇಶ ಕತ್ತಲೆಯಲ್ಲಿಯೂ ಅರ್ಧ ಪ್ರದೇಶ ಬೆಳಕಿನಲ್ಲಿಯೂ ಇರುವದು; ಅದು ಬೆಳಕಿಗೆ ಬಂದಾಗ ದೀಪಕ್ಕೆದುರಾಗಿರುವ ಭಾಗದಲ್ಲಿರುವದು; ಕತ್ತಲೆಗೆ ಹೋದಾಗ ದೀಪಕ್ಕೆ ಮರೆಯಾದ ಭಾಗದಲ್ಲಿರುವದು; ಬೆಳಕಿಗೆದುರಾಗಿ ಬರುವಾಗ ದೀಪದ ಕಾಂತಿ ನೊಣದ ತಲೆಗೆ ಬೀಳುತ್ತದೆ. ಈ ಪ್ರಕಾರವೇ ಆ ಕಿತ್ತಲೇ ಹಣ್ಣಿನಂತೆ ತನ್ನ ಅಚ್ಚಿನ ಸುತ್ತು ತಿರುಗುವಂಥ ಭೂಮಿಯ ಮೇಲೆ ದೀಪದಂತೆ ಸೂರ್ಯನು ಪ್ರಕಾಶಿಸುತ್ತಿದ್ದಾನೆ; ಮತ್ತು ಒಂದು ಭಾಗವು ಪ್ರಕಾಶವಾಗಿರುವಾಗ ಮಿಕ್ಕ ಭಾಗವು ಕತ್ತಲಾಗಿರುವದು. ಕಿತ್ತಲೇ ಹಣ್ಣಿನ ಮೇಲಿನ ನೊ

ಣಕ್ಕೆ ದೀಪದ ಬೆಳಕು ಹ್ಯಾಗೋ ಹಾಗೆಯೇ ಭೂಮಿಯಲ್ಲಿ ವಾಸಿಸುವ ಜನರಿಗೆ ಸೂರ್ಯನು ಉದಯವಾಗಿ, ಮಧ್ಯಕ್ಕೆ ಬಂದು, ಆ ಬಳಿಕ ಅಸ್ತಮಿಸುವ ಹಾಗೆ ಕಾಣಬರುತ್ತಾನೆ. ಆದಾಗ್ಯೂ ದೀಪ ಹ್ಯಾಗೆ ಸ್ಥಾಯಿಯಾಗಿದೆಯೋ, ಹಾಗೆಯೇ ಸೂರ್ಯನು ಸ್ಥಾಯಿಯಾಗಿದ್ದಾನೆ.

ಈ ದೇಶದಲ್ಲಿ ಮಧ್ಯಾಹ್ನವಾಗಿರುವಾಗ ಆಸ್ಯ ಖಂಡದ ಪೂರ್ವ ಭಾಗದಲ್ಲಿ ಸೂರ್ಯಾಸ್ತಮಯವೂ ಅಮೆರಿಕದಲ್ಲಿ ಮಧ್ಯರಾತ್ರೆಯೂ ವಿಲಾಯತಿಯಲ್ಲಿ ಸೂರ್ಯೋದಯವೂ ಆಗಿರುವದು.

ಭೂಮಿಯ ಸುತ್ತಳತೆಯು ಹೆಚ್ಚು ಕಡಿಮೆ ೨೫೦೦೦ ಮೈಲು, ಅಡ್ಡಳತೆ ೮೦೦೦ ಮೈಲು ಇರುವದು; ಮೇಲ್ಭಾಗದ ಚಚ್ಚೌಕದಳತೆ ೧೯೮೦೦೦೦೦೦ ಮೈಲು. ಮೇಲ್ಭಾಗದಲ್ಲಿ ಮುಕ್ಕಾಲು ಪಾಲು ನೀರೂ ಕಾಲು ಪಾಲು ನೆಲವೂ ಇರುತ್ತದೆ. ಭೂಮಿಯು ಪೂರ್ವ ಪಶ್ಚಿಮ ಅರ್ಧ ಗೋಳಗಳಾಗಿ ವಿಭಾಗಿಸಲ್ಪಟ್ಟದೆ; ಆಸ್ಯ, ಯೂರೋಪು, ಅಫ್ರಿಕ ಖಂಡಗಳು ಪೂರ್ವ ಅರ್ಧ ಗೋಳದಲ್ಲಿರುತ್ತವೆ; ಅಮೆರಿಕ ಖಂಡವು ಪಶ್ಚಿಮ ಅರ್ಧ ಗೋಳದಲ್ಲಿ ಅದೆ. ಈ ನಾಲ್ಕು ಖಂಡಗಳಲ್ಲದೆ ಔಸ್ತ್ರಾಲ್ಯವೆಂಬ ದೊಡ್ಡ ದ್ವೀಪವೂ ಅನೇಕ ಸಣ್ಣ ದ್ವೀಪಗಳೂ ಇರುತ್ತವೆ.

ಕೆಲವು ದೇಶಗಳಲ್ಲಿ ವಾಸಿಸುವ ಜನರ ಸಂಖ್ಯೆಯನ್ನು ಸ್ವಲ್ಪ ಹೆಚ್ಚು ಕಡಿಮೆ ಆಗದಂತೆ ನಿಶ್ಚೈಸ ಕೂಡದಿರುವದರಿಂದ ಸಕಲ ಜನಸಂಖ್ಯೆ ಸುಮಾರು ಹೇಳಬೇಕಾಗುತ್ತದೆ:

| | | |
|---|---|---|
| ಆಸ್ಯ ಖಂಡದಲ್ಲಿ ಜನಸಂಖ್ಯೆ | ..................... | ೭೫೫೦೦೦೦೦೦ |
| ವಿಲಾಯತಿಯಲ್ಲಿ | „ ..................... | ೨೭೨೦೦೦೦೦೦ |
| ಅಫ್ರಿಕದಲ್ಲಿ | „ ..................... | ೨೦೦೦೦೦೦೦೦ |
| ಅಮೆರಿಕದಲ್ಲಿ | „ ..................... | ೫೯೦೦೦೦೦೦ |
| ಔಸ್ತ್ರಾಲ್ಯದಲ್ಲಿ | „ ..................... | ೨೦೦೦೦೦೦ |
| | | ೧೨೮೮೦೦೦೦೦೦ |

ಭೂಮಿಯಲ್ಲಿ ಒಂದು ನಿಮಿಷಕ್ಕೆ ಸುಮಾರು ೧ ಮನುಷ್ಯನು ಸಾಯುತ್ತಾನೆ; ಒಂದು ತಾಸಿಗೆ ೩೬೫೩ ಮನುಷ್ಯರು, ಒಂದು ದಿವಸಕ್ಕೆ ೮೭೬೭೧ ಮನುಷ್ಯರು, ಒಂದು ವರುಷಕ್ಕೆ ಸುಮಾರು ೩೨೦೦೦೦೦೦ ಮನುಷ್ಯರು ಸಾಯುತ್ತಾರೆ.

# 48. ON THE OCEAN

# ೪೮. ಸಮುದ್ರವು

"ಪೆಸರು ರತ್ನದ ಗಣಿಯು ಯೋಗ್ಯವೆ;
ಹಸನ ಮೌಕ್ತಿಕಹವಳತತಿಯದು.
ರಸಗಳೊಳಗೆ ಮುಖ್ಯ ಲವಣವು, ಬಹಳ ರುಚಿಪ್ರದವೇ. ||
ತುಸುವು ತಡೆಯದೆ, ಹಡಗಗಳೊಳಗೆ
ದೆಸೆಗೆ ದೆಸೆಗೈ ಹೋಗಿ ಸುಪಥದ —
ಲೊಸೆದು, ದ್ವೀಪಗಳಿಂದ ಲಾಭವ ಪಡೆಯ ಸುಸುಲಭವೂ." ||



ದೊಡ್ಡ ನಾವೆ.

ಭೂಮಿಯಲ್ಲಿ ಹೆಚ್ಚು ಕಡಿಮೆಯಾಗಿ ಮುಕ್ಕಾಲು ಭಾಗ ಸಮುದ್ರವಾಗಿದೆ. ಸಮುದ್ರದ ಮೇಲೆ ಅನೇಕ ನಾವೆಗಳು ಸರಕು ತುಂಬಿಕೊಂಡು, ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗುತ್ತವೆ; ಅದು ದೇವರು ಮಾಡಿದ ವ್ಯಾಪಾರದ ಮಾರ್ಗ.

ಸಮುದ್ರದ ನೀರು ಉಪ್ಪಾಗಿರುವದು, ಅದರ ಸಲುವಾಗಿ ಅದು ಹೆಚ್ಚು ಭಾರ ಹೊರಬಹುದು; ಈಜಾಡುವದು ಸೀನೀರಿನಲ್ಲಿ ಕಷ್ಟ, ಉಪ್ಪುನೀರಿನಲ್ಲಿ ಸುಲ

೩. ಅದಲ್ಲದೆ ಸಮುದ್ರ ಉಪ್ಪಾಗಿರುವದರಲ್ಲಿ ಮತ್ತೊಂದು ಪ್ರಯೋಜನವದೆ, ಏನಂದರೆ ಉಪ್ಪುನೀರು ಶೀತದಿಂದ ಬೇಗ ಗಡ್ಡೆ ಕಟ್ಟುವದಿಲ್ಲ; ಅದರಿಂದ ಉತ್ತರ ದಿಕ್ಕಿನ ಹಾಳೆ ಸರೋವರಗಳು ಗಡ್ಡೆ ಕಟ್ಟಿ ಹಡಗಗಳು ಹೋಗ ಕೂಡದಿದ್ದರೆ ಅವು ಸಮುದ್ರದಲ್ಲಿ ಇನ್ನು ಹೋಗ ಬಹುದು. ಸಮುದ್ರದಲ್ಲಿ ಬೇಗ ಕಂಪು ಹುಟ್ಟುವದಕ್ಕೆ ಗಾಳಿಯಿಂದಲೂ ಚಂದ್ರಾಕರ್ಷಣೆಯಿಂದಲೂ ಆಗುವ ಚಲನೆ ವಿಶೇಷ ಕಾರಣವಾಗಿದೆ; ಸಮುದ್ರದ ನೀರು ನಿಂತಿರುವಲ್ಲಿ, ತೆರೆ ಇಲ್ಲದ್ದಲ್ಲಿ ಸ್ವಲ್ಪ ಕಾಲದ ಮೇಲೆ ಕೆಡುತ್ತದೆ; ಗಂಗಾಮುಖದಲ್ಲಿ ಭೂಮಿಯ ಮೇಲೆ ನಿಂತು ಕೆಟ್ಟ ಸಮುದ್ರಜಲದ ನಾತದಿಂದ ಮಾರಿರೋಗ ಆರಂಭವಾಯಿತಂತೆ.

ಸಮುದ್ರದ ಆಳವು ನಾನಾ ಪ್ರದೇಶಗಳಲ್ಲಿ ನಾನಾ ವಿಧವಾಗಿರುವದು. ಭೂಮಿಯ ಮೇಲಿರುವ ಹಾಗೆ ಸಮುದ್ರದೊಳಗೆ ಸಹ ಬೆಟ್ಟಗಳೂ ತಗ್ಗುಗಳೂ ಉಂಟು. ಅಂಥಾ ಬೆಟ್ಟಗಳ ತುದಿಗಳು ಕೆಲವು ಸ್ಥಳಗಳಲ್ಲಿ ನೀರಿನ ಮೇಲೆ ಕಾಣ ಬರುತ್ತವೆ; ಈ ತುದಿಗಳು ವಿಶಾಲವಾಗಿದ್ದರೆ ಅವಕ್ಕೆ ದ್ವೀಪಗಳೆಂಬ ಹೆಸರು. ಅತ್ಲಾಂತಿಕ ಸಮುದ್ರದ ಒಂದು ಕಡೆಯಲ್ಲಿ ಹಗ್ಗಕ್ಕೆ ಕಟ್ಟಿದ ಒಂದು ಶೀಸಗುಂಡು ನೀರೊಳಗೆ ಇಳಿಸುವಾಗ ೨೭೬೦೦ ಅಡಿಯ ಮೇಲೆಯೂ ನೆಲ ಹತ್ತಲಿಲ್ಲ; ಹಿಮಾಲಯದ ದೊಡ್ಡ ಶಿಖರ ೨೮೦೦೦ ಅಡಿ ಉದ್ದವಾಗಿದೆಂದು, ಸರಿ ನೋಡಲಿಕ್ಕಾಗಿ ತಿಳಿಯ ತಕ್ಕದ್ದು. ಸಮುದ್ರದ ನೀರು ಒಂದೊಂದು ದೆಸೆಯಲ್ಲಿ ಬಹಳ ತಿಳಿಯಾಗಿದೆ; ಅಲ್ಲಿ ನೀರು ೪೮೦ ಅಡಿ ಉದ್ದವಾಗಿದ್ದರೂ ಬುಡದಲ್ಲಿರುವ ಗುಳ್ಳೆ, ಹವಳ, ಹುಲ್ಲು ಇತ್ಯಾದಿಗಳು ಚಂದಾಗಿ ಕಾಣುತ್ತವೆ.



ಸಾಮುದ್ರಿಕ ಪದಾರ್ಥಗಳು.

ಸಮುದ್ರವು ೫ ದೊಡ್ಡ ಭಾಗಗಳಾಗಿ ವಿಭಾಗಿಸಲ್ಪಟ್ಟದೆ, ಅವುಗಳ ಹೆಸರು: ಶಾಂತ ಸಮುದ್ರವು, ಅತ್ಲಾಂತಿಕ ಸಮುದ್ರವು, ಹಿಂದು ಸಮುದ್ರವು, ಉತ್ತರ ಹಿಮಸಮುದ್ರವು, ದಕ್ಷಿಣ ಹಿಮಸಮುದ್ರವು. ಶಾಂತ ಸಮುದ್ರವು ಆಸ್ಯ, ಅಮೆರಿಕ ಖಂಡಗಳ ನಡುವೆ ಇರುತ್ತದೆ; ಅತ್ಲಾಂತಿಕ ಸಮುದ್ರವು ಅಫ್ರಿಕ ಅಮೆರಿಕ ಯೂರೋಪು ಖಂಡಗಳ ನಡುವೆ ಇರುತ್ತದೆ. ಅರ್ಧ ದ್ವೀಪವಾದ ಹಿಂದುಸ್ಥಾನದ ಸುತ್ತಲು,

ಅಫ್ರಿಕ ಔಸ್ಟ್ರಾಲ್ಯ ಖಂಡಗಳ ನಡುವೆ, ಹಿಂದು ಸಮುದ್ರವಿರುತ್ತದೆ. ಉತ್ತರ ಹಿಮ ಸಮುದ್ರವು ಭೂಮಿಯ ಉತ್ತರಾಗ್ರದಲ್ಲಿ, ದಕ್ಷಿಣ ಹಿಮಸಮುದ್ರವು ದಕ್ಷಿಣಾಗ್ರದಲ್ಲಿ ಇರುತ್ತವೆ.

ಶಾಂತ ಸಮುದ್ರ ಅತಿ ದೊಡ್ಡದಾಗಿದೆ; ಅದರ ಮೇಲ್ಭಾಗ ೫೦೦೦೦೦೦೦ ಚಚ್ಚೌಕ ಮೈಲಿನದು.



## 49. ON THE NATURAL DIVISION OF THE EARTH

## ೪೯. ಭೂಭಾಗವು



"ಧರಣಿಯೊಳು ಖಂಡಗಳು, ದ್ವೀಪಾರ್ಧ ದ್ವೀಪಗಳು,
ಶಿರಸುಗಳು, ಪರ್ವತ, ಗುಹೆ, ಕಂಠಗಳು, ಹಿರಿಯಸಾ—
ಗರಗಳುಪಸಾಗರ, ಸರಸ್ಸುಗಳು, ನದಿ, ಕಚ್ಛ, ಹೊಳೆ, ಹಳ್ಳ, ಸಂಗಮಗಳೂ,||
ವರತೆಗಳು, ದೇಶ, ತಳ, ಪೂರ್ಹಳ್ಳಿ, ಪಟ್ಣಗಳು,
ನರ, ಕುಲಂಗಳು, ಮತಂಗಳು, ಭಾಷೆ, ರಾಜ್ಯಗಳು
ತರತರದಲಿಹವದನು ಬಣ್ಣಿಸೊದು ಭೂಶಾಸ್ತ್ರ, ಕಂದ, ಕೇಳ್ಕೈ.,,||

ದೇಶ, ಪಟ್ಣ, ಬೆಟ್ಟ, ನದಿ, ಜನ, ಮತಾಚಾರ, ಭಾಷೆ, ರಾಜ್ಯ ಎಂಬದರ ವಿವರವು ಭೂಮಿಶಾಸ್ತ್ರವೆನ್ನಿಸಿ ಕೊಳ್ಳುತ್ತದೆ.

ಅನೇಕ ದೇಶಗಳ ಸಂಘಕ್ಕೆ ಖಂಡವೆಂದು ಹೆಸರು. ಅಂಥಾ ಖಂಡಗಳು ಐದು ಇರುತ್ತವೆ. ಅವುಗಳನ್ನು ಆಸ್ಯ, ಯೂರೋಪು, ಅಫ್ರಿಕ, ಅಮೆರಿಕ, ಔಸ್ಟ್ರಾಲ್ಯವೆಂದು, ಹೇಳುತ್ತಾರೆ. ಇವುಗಳಲ್ಲಿ ಮೊದಲನೇ ಮೂರು ಖಂಡಗಳು ಒಂದಕ್ಕೊಂದು ಶೇರಿರುವದರಿಂದ ಒಂದು ಖಂಡದಿಂದ ಮತ್ತೊಂದಕ್ಕೆ ಭೂಮಾರ್ಗವಾಗಿ ಹೋಗ ಬಹುದು. ಈ ಖಂಡಗಳಿಗೂ ಅಮೆರಿಕ ಖಂಡಕ್ಕೂ ನಡುವೆ ಸಮುದ್ರವಿರುವದರಿಂದ ಅಲ್ಲಿಗೆ ಹೋಗುವವರು ಹಡಗು ಏರಿ ಹೋಗ ಬೇಕು; ಅದೇ ಪ್ರಕಾರ ಔಸ್ಟ್ರಾಲ್ಯಕ್ಕೆ ಸಮುದ್ರ ದಾಟಿ ಹೋಗಲವಶ್ಯವಾಗಿದೆ.

ನಮಗೆ ವಾಸಸ್ಥಾನವಾದ ಆಸ್ಯ ಖಂಡವು ಮಿಕ್ಕ ಎಲ್ಲಾ ಖಂಡಗಳಿಗಿಂತ ವಿಶಾಲವಾಗಿ, ಬಹಳ ಜನ ಉಳ್ಳದ್ದಾಗಿರುತ್ತದೆ. ಆದರೆ ಆಸ್ಯದಲ್ಲಿ ಬಹಳ ಪ್ರಜೆ ಇದ್ದ

ರೂ ಅದರ ಅತಿ ವಿಶಾಲವನ್ನೂ ಯೂರೋಪಿನ ಅವಿಶಾಲವನ್ನೂ ಸರಿ ನೋಡಿದರೆ ಯೂರೋಪಿನಲ್ಲಿ ಜನರು ಅಭಿವೃದ್ಧಿಯಾಗಿದ್ದಾರೆಂದು, ಹೇಳ ಬೇಕು.

ಅಮೆರಿಕ ಖಂಡವು ಹೆಚ್ಚು ಕಡಿಮೆಯಾಗಿ ಆಸ್ಯ ಖಂಡದಷ್ಟು ಇದ್ದರೂ ಜನರು ಬಹಳ ಕಡಿಮೆಯಾಗಿದ್ದಾರೆ. ಈ ಖಂಡವು ಉಂಟೆಂದು, ವಿಲಾಯತೀ ಜನರಿಗೆ ಮುನ್ನೂರ ಅರುವತ್ತು ವರುಷಕ್ಕೆ ಮೊದಲು ತಿಳಿದಿರಲಿಲ್ಲ; ಕೊಲಂಬನೆಂಬ ಸಮರ್ಥ ನಾವಿಕನು ಅದನ್ನು ಕಂಡು ಕೊಂಡನು; ಆ ಬಳಿಕ ಅದಕ್ಕೆ ಅಮೆರಿಕ ಖಂಡವೆಂದೂ, ಹೊಸ ಲೋಕವೆಂದೂ ಹೆಸರಿಟ್ಟರು.

ಔಸ್ತ್ರಾಲ್ಯ ಎಲ್ಲಕ್ಕಿಂತ ಸಣ್ಣ ಖಂಡವಾಗಿದೆ. ಸುತ್ತಲೂ ನೀರು ಇರುವ ಭೂಭಾಗವು ದ್ವೀಪವೆನ್ನಿಸಿ ಕೊಳ್ಳುತ್ತದೆ. ಅಂಥಾ ದ್ವೀಪಗಳಲ್ಲಿ ಔಸ್ತ್ರಾಲ್ಯವೆಂಬ ಖಂಡವನ್ನು ಕೆಲವರು ಲೆಖ್ಖಿಸುತ್ತಾರೆ. ಲಂಕಾದ್ವೀಪವು ಹಿಂದು ದೇಶದ ದಕ್ಷಿಣ ತುದಿಗೆ ಹತ್ತರವಾಗಿದೆ.



೧. ಹೊರಗಡೆ. ೨. ಮುತ್ತಿರುವ ಒಳಗಡೆ.

ಲಂಕಾದ್ವೀಪದ ಬಳೀಲಿ ಶಿಕ್ಕುವ ಮುತ್ತುಚಿಪ್ಪುಗಳ ಆಕಾರ.

ಒಂದು ಕಡೆ ನೆಲಸಂಬಂಧವಾದಂಥ, ಉಳಿದ ಕಡೆಯಲ್ಲಿ ಸಮುದ್ರ ಸುತ್ತಲಿರುವಂಥ ಪ್ರದೇಶಕ್ಕೆ ಅರ್ಧದ್ವೀಪವೆಂಬ ಹೆಸರು. ಹಿಂದು ದೇಶವು ಆಸ್ಯ ಖಂಡದಲ್ಲಿ

ಅರ್ಧ ದ್ವೀಪವಾಗಿದೆ. ಇಂಗ್ಲಾಂಡು ಯೂರೋಪು ಖಂಡಕ್ಕೆ ಸೇರಿದ ದ್ವೀಪವಾಗಿರುತ್ತದೆ.

ಯೂರೋಪು ಖಂಡವು, ಅಫ್ರಿಕ ಖಂಡವು ಆಸ್ಯ ಖಂಡಕ್ಕೆ ಪಶ್ಚಿಮದಲ್ಲಿವೆ. ಆಸ್ಯದ ವಿಸ್ತಾರವು ಸುಮಾರು ೧೬೦೦೦೦೦೦ ಚಚ್ಚೌಕ ಮೈಲಾಗಿದೆ; ಯೂರೋಪದು ೪೦೦೦೦೦೦, ಅಫ್ರಿಕದ್ದು ೧೨೦೦೦೦೦೦, ಅಮೇರಿಕದ್ದು ೧೫೦೦೦೦೦೦, ಔಸ್ತ್ರಾಲ್ಯದ್ದು (ಚಿಕ್ಕ, ದೊಡ್ಡ ದ್ವೀಪಗಳನ್ನು ಕೂಡಿಸಿದರೆ) ೪೦೦೦೦೦೦.

ಭೂಮಧ್ಯದ ಸುತ್ತಲು ಉಂಟೆಂದು ಭಾವಿಸುವ, ಭೂಮಿಯನ್ನು ಎರಡು ಸಮ ಭಾಗ ಮಾಡುವ ರೇಖೆಯಲ್ಲಿ ಸೂರ್ಯಕಿರಣಗಳು ನೆಟ್ಟಗೆ ಬೀಳುವದರಿಂದ ಅದರಲ್ಲಿಯೂ ಅದರ ಹತ್ತರವೂ ಬಹಳ ಉಷ್ಣವಿರುತ್ತದೆ; ಹಿಂದುಸ್ಥಾನದಲ್ಲಿ ಬಹಳ ಉಷ್ಣವಿರುವದರ ಕಾರಣವು ಆ ರೇಖೆ ಹತ್ತರವಾಗಿರುವದೇ. ಧ್ರುವರೇಖೆಗೆ ಸಮೀಪವಾದ ದೇಶಗಳಲ್ಲಿ ಸೂರ್ಯಕಿರಣಗಳು ವಾರೆಯಾಗಿ ಬೀಳುವದರಿಂದ ಆ ಕಡೆಯ ಇಂಗ್ಲಾಂಡು ಮೊದಲಾದ ದೇಶಗಳು ಬಹು ಶೀತವಾಗಿವೆ.

ಪರ್ವತಗಳಲ್ಲಿ ನದಿಗಳು ಹುಟ್ಟಿ, ತಗ್ಗಿನಲ್ಲಿ ಇಳಿದು, ಬೈಲಿನಲ್ಲಿ ಪ್ರವಹಿಸಿ, ಸಮುದ್ರದಲ್ಲಿ ಸಂಗಮವಾಗುತ್ತವೆ. ಗಂಗಾನದಿಯು ಹಿಮಾಲಯಪರ್ವತದಲ್ಲಿ ಹುಟ್ಟಿ, ಆರ್ಯವರ್ತದಲ್ಲಿ ಹರಿದು ಹೋಗಿ, ಬಂಗಾಳ ಸಮುದ್ರದಲ್ಲಿ ಬೀಳುತ್ತದೆ. ಹಿಮಾಲಯವಂದರೆ ಹಿಮದ ಮನೆಯು. ಅದರ ಅಗ್ರವು ಎಡೆ ಬಿಡದೆ ಹಿಮದಿಂದ ಮುಚ್ಚಿಕೊಂಡು ಇರುವ ಕಾರಣ ಬಿಳುಪಾಗಿ ಕಾಣಿಸುತ್ತದೆ. ಈ ನಿಮಿತ್ತವೇ ಅದರ ಒಂದು ತುದಿಯು ಧವಳಗಿರಿ ಎಂದೆನ್ನಿಸಿ ಕೊಳ್ಳುತ್ತದೆ. ಆ ಹಿಮವು ಕರಗಿ, ಹೊಳೆಹೊಳೆಯಾಗಿ ಕೆಳಗೆ ಹರಿದು ಹೋಗಿ ಕೂಡಿ, ಗಂಗಾನದಿಯನ್ನಿಸಿ ಕೊಳ್ಳುತ್ತದೆ. ಮಿಸ್ರ ದೇಶದ ನೀಲೆಂಬ ನದಿಯು ಗಂಗೆಗೆ ಸಮಾನವಾದದ್ದು.

ಅಫ್ರಿಕ ಖಂಡದ ಉತ್ತರ ಕಡೆಯಲ್ಲಿ ಮಳೆ ಬಹು ಕಡಿಮೆ. ಆ ದಿಕ್ಕಿನ ಮಿಸ್ರ ದೇಶದಲ್ಲಿ ಆಗಿಂದಾಗ್ಗೆ ಮಾತ್ರ ಮಳೆ ಬರುವದರಿಂದ ದೇವರು ಅಲ್ಲಿಯವರಿಗೆ ನೀಲ್ ನದಿ ಕೊಟ್ಟಿದ್ದಾನೆ. ಅದು ಅಫ್ರಿಕದೊಳಗಣ ಭಾಗದಿಂದ ಇಳಿದು, ವರುಷಕ್ಕೊಮ್ಮೆ ಅತ್ತಾಗಿನ ಮಳೆಯಿಂದಲೋ? ಕರಗುವ ಹಿಮದ ನೀರಿನಿಂದಲೋ? ದೇಶದ ಮೇಲೆ ಹೆಚ್ಚಾಗಿ ಬಿದ್ದು, ತನ್ನ ನೀರಿನಿಂದಲೂ ಹುದಲಿನಿಂದಲೂ ಹೊಲಗಳನ್ನು ಬಹಳ ಉತ್ಕೃಷ್ಟ ಮಾಡುತ್ತದೆ.



ನೀಲು ತಗ್ಗಿನ ಗೋಧಿ.

ಅದರಂತೆ ಜೂನ್ ತಿಂಗಳಿನಿಂದ ಸಪ್ಟಂಬರ್ ತಿಂಗಳಿನ ವರೆಗೆ ಗಂಗೇ ನೀರು ಬಂಗಾಳದ ದೊಡ್ಡ ಭಾಗದ ಮೇಲೆ ಹೆಚ್ಚಾಗಿ ಬೀಳುವದು; ಅದು ತಿರಿಗಿ ಇಳಿದನಂತರ ಭತ್ತ ಮುಂತಾದ ಧಾನ್ಯಗಳ ಪೈರು ಚಂದಾಗುತ್ತದೆ.

## 50. ASIA

# ೫೦. ಆಸ್ಯ ಖಂಡವು

"ಜಗದೊಳಾಸ್ಯವು ಹಿರಿದು; ಹೇರಳ
ಬಗೆಯ ಋತುವಿಂದೊಪ್ಪವದದರ—
ಲೊಗೆದು ಮಾನವಕುಲವು, ಹಬ್ಬಿತು ನಾಲ್ಕು ದೆಸೆಗಳಿಗೇ.॥
ಅಗಣಿತೈಶ್ವರ್ಯರಾಜ್ಯಗಳೊಳಗೆ
ನಗರಗಳುದಿಸಿ, ಯಾದಿಯಲ್ಲಿಯೆ—
ಸಗಿತು ಲೋಕದ ಚರಿತ್ರವಲ್ಲಿಯೆ ಗ್ರಂಥರಚನೆಯಲೀ.„॥

"ಮೊದಲೆಹೂದಿಯ ಬಾಬುಲಿಯವರು,
ತದನು ಪಾರಶಿ ಬಳಿಕಲಾರಿಯ—
ರೊದಗಿ, ಪಡೆದರು ಪರಮ ಕೀರ್ತಿಪದವನಾಚ್ಛರದೀ.॥
ಎದುರು ಬೀಳಲಿಕವರು ದೇವಗೆ
ಮದವಿ, ನಾಶನವಾದರವರಿಂ—
ಗದರ ದೆಸೆಯಿಂ ಮಹಿಮೆ ತಪ್ಪಿತು,—ಹೆಸರಿಗಿರ್ವರೀಗಾ.„॥



ಸಿಬೀರಿಯ ಇತ್ಯಾದಿ ಅಧಿಕೋತ್ತರ ದೆಸೆಯ ಜನರು ಹಿಮ ಬಿದ್ದ ಕಾಲದಲ್ಲಿ ಹಿಮಬಂಡಿ ಹತ್ತಿ ನಾಯಿಗಳಿಂದ ಎಳಸಿ ಕೊಂಡು ಹೋಗುವಂಥಾದ್ದು ಇಲ್ಲಿ ಕಾಣುತ್ತದೆ; ಅವರಿಗೆ ಬೇರೆ ಬಂಡಿ ಇಲ್ಲ.

ಆಸ್ಯ ಖಂಡವು ವಿಶಾಲವಾಗಿಯೂ ನಿವಾಸಿಗಳ ಸಂಖ್ಯೆ ಬಹಳ ಉಳ್ಳದ್ದಾಗಿಯೂ ಇರುವದು.

ಅದರ ಉತ್ತರ ಭಾಗದ ಸಿಬೀರಿಯ ದೇಶವು ವಿಸ್ತಾರವಾದ ಬೈಲು; ಉತ್ತರ ಹಿಮಸಮುದ್ರದಲ್ಲಿ ಇದರ ದೊಡ್ಡ ನದಿಗಳು ಸಂಗಮವಾಗುತ್ತವೆ; ಅವುಗಳ ನೀರು ಪ್ರತಿ ಸಂವತ್ಸರಕ್ಕೊಮ್ಮೆ ಕೆಲವು ತಿಂಗಳಿಗೆ ಅಧಿಕ ಛಳಿಯಿಂದ ಘಟ್ಟಿಯಾಗುವದು.

ಆಸ್ಯದ ಮಧ್ಯ ಭಾಗದಲ್ಲಿ ತಾತಾರಿ ದೇಶ ಅಥವಾ ತುರ್ಕಿಸ್ಥಾನವೆಂಬ, ೩೨೦೦೦ ಚಚ್ಚೌಕ ಮೈಲು ದೊಡ್ಡದಾದ ತಪ್ಪಲವದೆ. ಅದು ವಿಶೇಷವಾಗಿ ಉಸುಬಿನ ಬೈಲೂ ಮೇವುಳ್ಳ ಅಡವಿಯೂ ಆಗಿದೆ. ತಾತಾರಿಗಳು ಒಂದು ಸ್ಥಳದಲ್ಲಿ ನೆಲೆಯಾಗಿರದೆ, ತಮ್ಮ ಹಿಂಡುಗಳೊಡನೆ ಯಾವಾಗಲೂ ಸಂಚರಿಸುತ್ತಿರುವರು.

ದಕ್ಷಿಣ ಭಾಗದಲ್ಲಿರುವ ಹಿಮಾಲಯದ ಕೆಲವು ಪರ್ವತಗಳು ಲೋಕದಲ್ಲಿರುವ ಪರ್ವತಗಳಿಗಿಂತ ಉನ್ನತವಾಗಿವೆ. ಅದರ ಶಿಖರಗಳಲ್ಲಿ ಕಿಂಚಿನ್ಗಂಗೆ (ಚಿಕ್ಕ ಗಂಗೆ?) ಎಂಬ ಒಂದು ಶಿಖರವು ಹೆಚ್ಚು ಕಡಿಮೆ ೫½ ಮೈಲುನ್ನತ.

ಆಸ್ಯದ ದಕ್ಷಿಣ ಪ್ರದೇಶವು ಉಷ್ಣವಾಗಿ, ಉತ್ತರ ಪ್ರದೇಶವು ಶೀತವಾಗಿ ಅದೆ.



ಚೀನಾ ದೇಶದವರು ಹೊಲಕ್ಕೆ ನೀರನ್ನು ಬಿಡುವ ರೀತಿ. ಆ ಮೂವರು ಕಾಲಿನಿಂದ ತಿರುಗಿಸುವ ಗಳದ ಚಕ್ರದ ಮೇಲೆ ಹಗ್ಗಕ್ಕೆ ಕಟ್ಟಿದ ಪಾತ್ರೆಗಳು ತಿರುಗುತ್ತ ಅವೆ. ಈಚೆಯ ಹೊಳೆಯಲ್ಲಿ ಕ್ರಮಕ್ರಮವಾಗಿ ಒಂದೊಂದು ಪಾತ್ರೆ ತುಂಬಿ ಹೋಗಿ, ಆಚೆ ಅದನ್ನು ಹೊಯಿದು ಬಿಟ್ಟು, ಕೆಳಗಡೆ ಹಿಂದಕ್ಕೆ ಬಂದು, ಮತ್ತೆ ಹಾಗೆ ನೀರು ವೈಯುತ್ತದೆ.

ಪೂರ್ವ ದಕ್ಷಿಣ ಭಾಗದಲ್ಲಿ ಚೀನಾ ಎಂಬ ಒಂದು ದೊಡ್ಡ ದೇಶವಿರುತ್ತದೆ. ಅದರ ನಿವಾಸಿಗಳು ಬೇರೆ ದೇಶಗಳವರಿಗಿಂತ ಸಂಖ್ಯೆಯಲ್ಲಿ ಅಧಿಕವಾಗಿದ್ದಾರೆ; ಅಲ್ಲಿ ವಿಸ್ತಾರವಾದ ಕೆಲವು ನದಿಗಳು ಪ್ರವಹಿಸುತ್ತವೆ. ಚೀನಾ ದೇಶವು ಚಾ ಎಲೆ, ರೇಶ್ಮೆ, ಪಿಂಗಾಣಿ (ಪಾತ್ರೆ) ಮೊದಲಾದ ಸರಕುಗಳ ಉತ್ಪತ್ತಿಯಿಂದ ಪ್ರಸಿದ್ಧಿಗೆ ಬಂದದೆ. ಇದಕ್ಕೆ ಪಶ್ಚಿಮವಾಗಿ ಅನೇಕ ವೃಕ್ಷವನಗಳಿರುವ ಬ್ರಹ್ಮ ದೇಶ ಅಥವಾ ಗೌತಮ ದ್ವೀಪವದೆ.

ನಮಗೆ ವಾಸಸ್ಥಾನವಾಗಿರುವ ಹಿಂದು ದೇಶವು ಬ್ರಹ್ಮ ದೇಶದ ಪಶ್ಚಿಮದಲ್ಲಿ ರುತ್ತದೆ. ಇಂಗ್ಲಿಷರು ಹೆಚ್ಚು ಕಡಿಮೆಯಾಗಿ ಇಡೀ ಹಿಂದು ದೇಶವನ್ನು ತಮ್ಮ ವಶ ಮಾಡಿ ಕೊಂಡು ಆಳುತ್ತಾ ಇರುವದರಿಂದ ಅದಕ್ಕೆ ಬ್ರಿತ್ತಿಷ ಇಂಡಿಯ ಎಂಬ ಹೆಸರಿಟ್ಟಿದ್ದಾರೆ. ಅದು ಕಲ್ಕತ್ತ, ಆಗ್ರಾ, ಚನ್ನಪಟ್ಟಣ, ಮುಂಬೈ ಎಂಬ ನಾಲ್ಕು ಆಧಿಪತ್ಯಗಳಾಗಿ ವಿಭಾಗಿಸಿ ಅದೆ.

ಆಸ್ಯ ಖಂಡದ ದಕ್ಷಿಣ ಪಶ್ಚಿಮ ದಿಕ್ಕಿನಲ್ಲಿ ಅಪಘಾನಿಸ್ಥಾನ, ಅರಬಿಸ್ಥಾನ ಎಂಬ ದೇಶಗಳಿರುತ್ತವೆ. ಅಲ್ಲಿಯ ಜನರು ಕಾಡುಗುಣದವರೂ ಯುದ್ಧಾಸಕ್ತಿ ಉಳ್ಳವರೂ ಕಾಳ್ಗೆ ಮಾಡುವದರಲ್ಲಿ ಸಮರ್ಥರೂ ಆಗಿದ್ದಾರೆ. ಆಸ್ಯ ಖಂಡದ ಹೆಚ್ಚು ಪಶ್ಚಿಮ ಭಾಗದಲ್ಲಿ ಫಾರ್ಶಿ ದೇಶವು, ಅರ್ಮೆನಿ, ಬಾಬುಲಿ, ಶಾಮಿ (Syria), ಯಹೂದಿ ಇತ್ಯಾದಿ ದೇಶಗಳವೆ. ಅರ್ಮೆನಿ ದೇಶವು ಆದಿಮನುಷ್ಯರು ಸೃಷ್ಟಿಸಲ್ಪಟ್ಟ ಸ್ಥಾನವಾಗಿದೆ. ಆಸ್ಯದಲ್ಲಿ ಮನುಜರು ಬಹಳ ವರುಷ ವಾಸಿಸಿ, ಕಾಲಕ್ರಮದಲ್ಲಿ ಅನೇಕರಾದ ಮೇಲೆ ಸಕಲ ದೇಶಗಳಿಗೂ ಗಳಿಸಿದರು.



ಫಾರ್ಶಿ ದೇಶದ ಪೂರ್ವ ರಾಜರ ಬಂಡೆಯೊಳಗಿನ ಸಮಾಧಿಗಳ ಬಾಗಿಲುಗಳು.

ಆಸ್ಯ ಖಂಡದ ಪೂರ್ವ ಭಾಗದವರು ಮುಖ್ಯವಾಗಿ ಬೌದ್ಧ ಮತವನ್ನೂ ಹಿಂದು ಮತವನ್ನೂ, ಪಶ್ಚಿಮ ಭಾಗದವರು ಮುಖ್ಯವಾಗಿ ಮಹಮ್ಮದಿ ಮತವನ್ನು ಕೈಕೊಂಡಿದ್ಧಾರೆ.



## 51. INDIA

# ೫೧. ಹಿಂದು ದೇಶವು

“ಬಂದರಾರ್ಯರಿರಾಣನಾಡುಗ—
ಳಿಂದ, ಸಿಂಧುವ ದಾಟಿ, ತಮ್ಮಯ
ತಂದೆ ತಾಯ್ಗಳನಗಲಿದಂದು, ಸರಸ್ವತೀ ದಡಕೇ.||
ಮಂದೆಮಂದೆಗಳಟ್ಟಿ, ಯಲ್ಲಿಗೆ
ತಂದು, ಸಲುಹಿಸಿ, ಸಾಕಿ ಕೊಂಡರು,
ಹೊಂದುತಂತೆಯೆ ಕಾಲಕ್ಷೇಪವನಧಿಕ ಮುದದಿಂದಾ.,,||

“ಕದನಕಾಗುವ ವಿದ್ಯೆ ಸಾಧಿಸಿ,
ಮೊದಲೆ ವಾಸವ ಪಡೆದ ಜನರನು
ಬೆದರಿಸೋಡಿಸಿ ವಿಂಧ್ಯಕಾಡಿಗೆ, ತಾವೆ ಯುಳಿದರಗೋ.||
ಇದರನಂತರ ಬೇರೆ ವನಜನ —
ಪಡವ ಜಯಿಸುತ, ಪೊಕ್ಕು ತೆಂಕಣ
ಬದಿಯು, ಮತಕುಲಭೇದ ವಿಸ್ತರಿಸಿದರು ಬಲದಲ್ಲೀ.,,||



ಸ್ಯ ಖಂಡದ ದಕ್ಷಿಣದಲ್ಲಿರುವ, ನಾವು ವಾಸವಾಗಿರುವ, ಹಿಂದು ದೇಶವು ಅನ್ನಿಸಿ ಕೊಳ್ಳುವ ದೇಶವು ಮೂರು ವಿಭಾಗಗಳಾಗಿ ವಿಭಾಗಿಸಿ ಅದೆ. ಅದಕ್ಕೆ ಬಹಳ ಉನ್ನತವಾದ ಪರ್ವತಾವಳಿಯು ಉತ್ತರದ ಮೇರೆಯಾಗಿದೆ. ಈ ಪರ್ವತಗಳ ತೆಂಕಣ ಇಳಿಜಾರಿನ ದೇಶವು ಮೊದಲು ಹೇಳಿದ ಮೂರು ಭಾಗಗಳೊಳಗೆ ಪ್ರಥಮ ಭಾಗವು; ಅದರ ಹೆಸರು ಉತ್ತರ ಹಿಂದುಸ್ಥಾನ ಅಥವಾ ಹಿಮಾಲಯಪ್ರದೇಶ. ಎರಡನೇ ಭಾಗಕ್ಕೆ ಮಧ್ಯ

ಹಿಂದುಸ್ಥಾನ ಅಥವಾ ಆರ್ಯವರ್ತವೆಂಬ ಹೆಸರು; ಅದರಲ್ಲಿ ಗಂಗಾನದಿಯು ಹರಿದು, ಬಂಗಾಳ ಸಮುದ್ರಕ್ಕೆ ಸಂಕಲಿತವಾಗುತ್ತದೆ; ಮಧ್ಯ ಹಿಂದುಸ್ಥಾನದ ಪೂರ್ವಭಾಗವು ಬಂಗಾಳವೆನ್ನಿಸಿ ಕೊಳ್ಳುತ್ತದೆ, ಇದರಲ್ಲಿರುವ ಕಲ್ಕತ್ತವೆಂಬ ಪಟ್ಟಣವು ಹಿಂದು ದೇಶದ ರಾಜಧಾನಿಯಾಗಿದೆ. ದಖ್ಖಿಣ ಅಥವಾ ದಕ್ಷಿಣ ಹಿಂದುಸ್ಥಾನ ಎಂಬುವದು ಮೂರನೇ ಭಾಗವು; ಇದರ ಪಶ್ಚಿಮದ ತೀರದಲ್ಲಿ ಮುಂಬಯಿಯೂ ಪೂರ್ವತೀರದಲ್ಲಿ ಚನ್ನಪಟ್ಟಣವೂ ಮುಖ್ಯ ಶಹರುಗಳು. ಈ ಹಿಂದು ದೇಶವು ಇಂಗ್ಲಿಷ ದೇಶದ ರಾಣಿಯ ಅಧೀನವಾಗಿ, ಆಕೆಯು ನೇಮಿಸುವ ಅಧಿಪತಿಗಳ ಆಡಳಿತೆಯಲ್ಲಿರುತ್ತದೆ.

ಹಿಂದು ದೇಶದ ಉತ್ತರ ಭಾಗದಲ್ಲಿ ಸಿಂಧುವೂ ಗಂಗಾನದಿಯೂ ದಕ್ಷಿಣ ಭಾಗದಲ್ಲಿ ಗೋದಾವರಿಯೂ ಕಾವೇರಿಯೂ ಮುಖ್ಯ ನದಿಗಳಾಗಿ ಪ್ರವಹಿಸುತ್ತವೆ.

ಪಂಜಾಬಿನಲ್ಲಿ ಲಾಹೋರ, ಸಿಂಧುವಿನಲ್ಲಿ ಮುಲ್ತಾನ, ರಾಜಪುತ್ರಸ್ಥಾನದಲ್ಲಿ ಅಜಮೀಥ, ಗುರ್ಜರರಾಷ್ಟ್ರದಲ್ಲಿ ಬಡೋದೆ, ಯಮುನಾ ನಾಡಿನಲ್ಲಿ ಆಗ್ರಾ, ಪ್ರಯಾಗದಲ್ಲಿ ಅಲ್ಲಹಾಬಾದು, ಅಯೋಧ್ಯೆಯಲ್ಲಿ ಲಕ್ಷಣಾವತಿ, ಮಾಳವದಲ್ಲಿ ಉ



ಹಿಂದು ದೇಶದಲ್ಲಿ ಸೂರ್ಯಾಸ್ತಮಯದ ಕಾಲ.

ಜ್ಜಯನಿ, ವಿಹಾರದಲ್ಲಿ ಪತ್ತನ, ಬಂಗಾಳದಲ್ಲಿ ಕಲ್ಕತ್ತ, ಮಹಾರಾಷ್ಟ್ರದಲ್ಲಿ ಮುಂಬಯಿ, ನಿಜಾಮನ ನಾಡಿನಲ್ಲಿ ಹೈದರಾಬಾದು, ಚೋಳಮಂಡಲದಲ್ಲಿ ಚನ್ನಪಟ್ಟಣ, ಹೀಗೆ ನಾನಾ ನಾಡುಗಳಲ್ಲಿ ನಾನಾ ಪ್ರಖ್ಯಾತಿ ಪಟ್ಟ ಪಟ್ಟಣಗಳವೆ.

ದಕ್ಷಿಣದಿಂದ ಉತ್ತರಕ್ಕೆ ಹಿಂದು ದೇಶದ ನೀಳವು ೧೯೦೦ ಮೈಲು; ಬಹಳ ವಿಶಾಲವಾದ ಸ್ಥಳದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಅದರ ಅಗಲವು ಹೆಚ್ಚು ಕಡಿಮೆಯಾಗಿ ೧೫೦೦ ಮೈಲು.

ಚನ್ನಪಟ್ಟಣ ಮೊದಲ್ಗೊಂಡು, ಕನ್ಯಾಕುಮಾರಿಯ ವರೆಗೆ ದ್ರಾವಿಡ ದೇಶವದೆ; ಚೋಳಮಂಡಲವೂ ಪಾಂಡ್ಯವೂ ಈ ದೇಶಕ್ಕೆ ಶೇರಿಕೆಯಾಗಿವೆ. ಚನ್ನಪಟ್ಟಣಕ್ಕೆ ಉತ್ತರದಲ್ಲಿರುವ ದೇಶಕ್ಕೆ ತೆಲುಗು ದೇಶವೆಂತಲೂ ಪಶ್ಚಿಮದಲ್ಲಿರುವ ದೇಶಕ್ಕೆ ಕರ್ನಾಟಕ ದೇಶವೆಂತಲೂ, ಹೇಳುತ್ತಾರೆ.

ಹಿಂದು ದೇಶದ ಜನಸಂಖ್ಯೆಯು ಹೆಚ್ಚು ಕಡಿಮೆಯಾಗಿ ೧೭೦೦೦೦೦೦೦ ಇರುವದು.

ಭರತ ಖಂಡವೆಂದು ಹೆಸರ್ಗೊಂಡ ಹಿಂದು ದೇಶದ ಪೂರ್ವ ಚರಿತ್ರವು ನಿಶ್ಚಯದ್ದಲ್ಲಾ, ಆದರೆ ಇಷ್ಟು ಹೇಳ ಬಹುದು. ಸುಮಾರು ೩೪೦೦ ವರುಷಗಳ ಹಿಂದೆ ಅಯೋಧ್ಯೆಯಲ್ಲಿ ರಾಮನು ಆಳಿದನು; ಇತ್ತಲಾಗೆ ೨೦೦ ವರುಷದ ಮೇಲೆ ದಿಲ್ಲಿ ಅಥವಾ ಹಸ್ತಿನಾಪುರದ ದೆಸೆಯಿಂದ ಪಾಂಡವ ಕೌರವರ ಯುದ್ಧವಾಯಿತು. ಆವಾಗ ಅಯೋಧ್ಯೆ, ಮಿಥಿಲೆ, ವೈಶಾಲಿ, ಹಸ್ತಿನಾಪುರ, ಕಾಶಿ, ಮಗಧ ಎಂಬ ೬ ಸಂಸ್ಥಾನಗಳು ಗಂಗಾನದೀ ತಗ್ಗಿನಲ್ಲಿದ್ದವು. ದಕ್ಷಿಣದಲ್ಲಿ ಚೋಳ ಮತ್ತು ಪಾಂಡ್ಯ ರಾಜ್ಯಗಳಿದ್ದವು. ಇವುಗಳವರು ಪಾಂಡವ ಕೌರವರಿಗೆ ಗಂಧದ ಕಟ್ಟಿಗೆ ಎಣ್ಣೆಗಳನ್ನು ಕಪವಾಗಿ ತಂದರು. ಕೃಷ್ಣಾನದಿಯ ಒಂದು ಸಂಗಮಹೊಳೆಯಲ್ಲಿ ಮಹಿಷ್ಮತಿ ಎಂಬ ರಾಜಧಾನಿಯಲ್ಲಿ ಆಳುವ ನೀಲನೆಂಬ ಅರಸನು ಕೌರವರಿಗೆ ಮೇಲೆ ಹೇಳಿದ ಯುದ್ಧದಲ್ಲಿ ಸಹಾಯಕನಾಗಿದ್ದನು.

೨೧೯೦ ವರುಷಗಳ ಹಿಂದೆ ಯವನರ (ಗ್ರೀಕರ) ಅರಸನಾದ ಸಿಕಂದರನು ದೊಡ್ಡ ದಂಡೆತ್ತಿ ಬಂದು, ಸಿಂಧುವಿನಲ್ಲಿ ಪೌರವ ವಂಶದ ಒಬ್ಬ ಹಿಂದು ರಾಜನನ್ನು (ಪುರುಷೋತ್ತಮ) ಎರಡು ಸರ್ತಿ ಜಯಿಸಿ, ಕೈಶೆರೆ ಹಿಡಿದು, ಅವನ ಮಹಿಮಾರೂಪ ನೋಡಿ, ಕೈಗೆ ಶಿಕ್ಕಿದಾಗ ನಿನ್ನ ಹತ್ತರ ನಡದು ಕೊಳ್ಳ ಬೇಕಾದ ರೀತಿ ಹ್ಯಾಗೆಂದು ಕೇಳಲು,—ಅರಸುಗಳಿಗೆ ತಕ್ಕ ಹಾಗೆ ನಡದು ಕೊಳ್ಳ ಬೇಕೆಂದು, ಹೇಳಿದನು. ಅದನ್ನು ಕೇಳುತ್ತಲೆ ಸಿಕಂದರನು ಆ ಪೌರವನ ಧೈರ್ಯಕ್ಕೆ ಮೆಚ್ಚಿ, ಅನೇಕ ಬಹುಮಾನಗಳ ಮಾಡಿ, ಶತ್ರುತ್ವ ಬಿಟ್ಟು ರಾಜ್ಯವಾಳುವ ಹಾಗೆ ಅವನನ್ನು ಒಡಂಬಡಿಸಿ, ಶತ

ದ್ರುಹೊಳೆ ತನಕ ಜೈಸುತ್ತಾ ಹೋದನು. ಆ ವೇಳೆ ಮಳೆಗಾಲ ಬಂದದರಿಂದ ಸಿಕಂದರನ ಸೈನ್ಯದವರು ಗುಣುಗುಟ್ಟಲಾಗಿ ಅವನು ಹಿಂದು ದೇಶವನ್ನು ಬಿಟ್ಟು, ಫಾರ್ಶಿ ದೇಶದ ಮಾರ್ಗವಾಗಿ ಬಾಬುಲ್ ನಗರಕ್ಕೆ ಹೊರಟು ಹೋಗಿ, ಅಲ್ಲಿ ೩೨ ವರುಷ ಪ್ರಾಯದವನಾಗಿ ಮೃತಿ ಹೊಂದಿದನು. ಅಷ್ಟರಲ್ಲಿ ಅವನ ಸೇನಾನಾಯಕರಲ್ಲಿ ಒಬ್ಬನಾದ ಸೆಲ್ಯೂಕನೆಂಬವನು ಹಿಂದು ದೇಶದ ಆ ಭಾಗದಲ್ಲಿ ಉಳಿದು, ರಾಜ್ಯ ಮಾಡುತ್ತಾ ಬಂದನು. ಅಂದು ಮಗಧದ ರಾಜಧಾನಿಯಾದ ಪಾಟಲಿಪುತ್ರದಲ್ಲಿ ಚಂದ್ರಗುಪ್ತನು ಆಳುವವನಾಗಿದ್ದನು. ಅವನು ಶೂದ್ರಕುಲದವನಾಗಿ, ಚಾಣಕ್ಯನೆಂಬ ಐಶ್ವರ್ಯವುಳ್ಳ ಬ್ರಾಹ್ಮಣನ ಸಹಾಯದಿಂದ ಧನನಂದನೆಂಬ ಮುಂಚಿನ ರಾಜನನ್ನು ಸಿಂಹಾಸನದಿಂದ ತಳ್ಳಿದ್ದನು. ಚಂದ್ರಗುಪ್ತನಿಗೂ ಸೆಲ್ಯೂಕನಿಗೂ ಸಿಂಧುನದಿಯ ಮೂಡಲಲ್ಲಿ ಹತ್ತಿದ್ದೊಂದು ಕದನದ ಈಚೆ ಚಂದ್ರಗುಪ್ತನು ಅವನಿಗೊಳಗಾಗಿ, ೫೦೦ ಆನೆಗಳನ್ನು ಇನಾಮಾಗಿ ಕೊಟ್ಟನು; ಆ ಯವನರ ಸೇನಾನಾಯಕನು ತನಗೆ ಸಿಂಧುವಿನ ಮೂಡಲಲ್ಲಿ ಇದ್ದ ನಾಡುಗಳನ್ನು ಆ ಹಿಂದು ಪತಿಗೆ ಬಿಟ್ಟು ಕೊಟ್ಟನು; ಬಳಿಕ ಅವರಿಬ್ಬರು ಸ್ನೇಹವಾಗಿದ್ದರು. ಸೆಲ್ಯೂಕನು ಸತ್ತು, ೧೧ ವರುಷವಾದ ಮೇಲೆ ಚಂದ್ರಗುಪ್ತನು ಸಹ ಮಡಿದನು. ಇದು ೨೧೫೩ ವರುಷಗಳ ಹಿಂದೆ ಸಂಭವಿಸಿತು. ಚಂದ್ರಗುಪ್ತನ ಮಗನು ಬಿಂದುಸಾರ; ಇವನ ಮಗನು ಧರ್ಮಾಶೋಕನು.

೧೯೪೮ ವರುಷಗಳ ಹಿಂದೆ ತುರ್ಕರು (ಸ್ಕಿತರು, ಶಕರು) ಹಿಂದು ದೇಶಕ್ಕೆ ಬಂದು, ಆ ಯವನರ ರಾಜ್ಯವನ್ನು ಹಿಡುಕೊಂಡರು. ಕ್ರಿಸ್ತಶಕದ ೭೮ನೇ ವರುಷದಲ್ಲಿ ಮಹಾರಾಷ್ಟ್ರ ರಾಜನಾದ ಶಾಲಿವಾಹನನು ಶಕರನ್ನು ಅಪಜಯ ಪಡಿಸಿದನು.

ಕ್ರಿಸ್ತನು ಹುಟ್ಟಿದ ೧೦೦೦ ಸಂವತ್ಸರಗಳ ಬಳಿಕ ಸಿಂಧುನದಿಗೆ ಪಶ್ಚಿಮ ದಿಕ್ಕಿನಲ್ಲಿರುವ ಘಜ್ನಿ ಪಟ್ಟಣದ ಸುಲ್ತಾನನಾದ ಮಹಮುದನೆಂಬವನು ಹನ್ನೆರಡಾವರ್ತಿ ಹಿಂದು ದೇಶದ ಮೇಲೆ ದಂಡೆತ್ತಿ ಬಂದು, ಬಹು ದೇಶಗಳ ಹಾಕ್ಕು, ಕಡೇ ಸರ್ತಿ ಸೋಮನಾಥದೇವಸ್ಥಾನವನ್ನು ನಾಶ ಮಾಡಿ, ಅದರೊಳಗಣ ಬೆಳ್ಳಿ ಬಂಗಾರದ ಬಹು ಬೆಲೆಯ ವಿಗ್ರಹಗಳನ್ನು ಕೆಡಿಸಿ, ಮಿತಿ ಇಲ್ಲದ ದ್ರವ್ಯಗಳನ್ನು ಕೊಳ್ಳೆ ಮಾಡಿಕೊಂಡು ಹೋದನು. ತರುವಾಯ ೧೩೯೮ನೇ ವರುಷದಲ್ಲಿ ತೀಮೂರ್‌ಲಂಗ್ ಎಂಬ ತುರುಕನು ಡಿಲ್ಲಿ ನಗರದ ಪರಿಯಂತ ಹೋಗಿ, ಅನೇಕ ಊರುಗಳನ್ನು ಹಾಳು ಮಾಡಿ, ಬಹು ಜನರನ್ನು ಸಂಹರಿಸಿದನು. ೧೫೨೬ನೇ ಸಂವತ್ಸರದಲ್ಲಿ ಸುಲ್ತಾನ್ ಬಾಬರನೆಂಬವನು ಮೊಗಲಾಯಿ ರಾಜ್ಯವನ್ನು ಸ್ಥಾಪಿಸಿ, ಡಿಲ್ಲಿ ನಗರದಲ್ಲಿ ವಾಸವಾಗಿ, ಪ್ರಭುತ್ವ ಮಾಡುತ್ತಾ ಬಂದನು. ಆ ಮೇಲೆ ೧೭೩೮ನೇ ಸಂವತ್ಸರದಲ್ಲಿ ಫಾರ್ಶಿ ಅರಸನಾದ ನಾದಿರ್‌ಶಾಹನೆಂಬವನು ವಿಶೇಷವಾಗಿ ಬಲವನ್ನು ಕೂಡಿಸಿ

ಕೊಂಡು, ಹಿಂದು ದೇಶಕ್ಕೆ ಬಂದು, ಅದರಲ್ಲಿ ಕೇಡು ಹುಟ್ಟಿಸಿದನು. ತದನಂತರ ಮೊಗಲಾಯಿ ರಾಜ್ಯ ಕಳೆಗುಂದಿ, ಅಲ್ಲಿ ಅಲ್ಲಿ ಚಿಕ್ಕ ಪತಿಗಳು ಬಲವುಳ್ಳವರಾದರು. ಅವರಲ್ಲಿ ನಿಜಾಮನೆಂಬವನೂ ಕರ್ನಾಟಕ ನವಾಬನೂ ಮುಖ್ಯರು. ನಿಜಾಮನ ರಾಜಧಾನಿ ಹೈದರಾಬಾದು, ನವಾಬನ ರಾಜಧಾನಿ ಆರ್ಕಾಡು.

೧೬೯೮ನೇ ಸಂವತ್ಸರದಲ್ಲಿ ಈಸ್ಟು ಇಂಡಿಯ ಕುಂಪಣಿ ಎಂಬ ಹೆಸರುಳ್ಳ ವರ್ತಕರು ಕಲ್ಕತ್ತ ಕೊಂಡು ಕೊಂಡು, ಕೋಟೆ ಕಟ್ಟಿ ಕೊಂಡರು. ೧೭೫೭ನೇ ವರುಷದಲ್ಲಿ ಅವರು ಅನ್ಯಾಯ ಮಾಡಿದ ಸಿರಾಜ್ ಉದ್ದೌಲನನ್ನು ಪಲಸೀ (ಪಾಲಸಿ) ಕಾಳಗದಲ್ಲಿ ಜಯಿಸಿ, ಬಂಗಾಳ ತಮ್ಮದು ಮಾಡಿ ಕೊಂಡು, ೧೭೬೫ನೇ ವರುಷದಲ್ಲಿ ಕರ್ನಾಟಕ ಶೀಮೆಯನ್ನು ನಿಜಾಮನಿಂದ ಪಡಕೊಂಡು, ಅದೇ ವರುಷದಲ್ಲಿ ಹೈದರ್ ಅಲೀ ಸಂಗಡ ಯುದ್ಧ ಮಾಡ ತೊಡಗಿದರು. ಇವನು ಮೊದಲು ಮೈಸೂರಿನ ರಾಜನ ದಂಡಿನಲ್ಲಿ ಶಿಪಾಯಿಯಾಗಿದ್ದು, ಬರಬರ ತನ್ನ ಬಲಪರಾಕ್ರಮದಿಂದ ದಂಡುನಾಯಕನಾಗಿ, ೧೭೬೦ನೇ ವರುಷದಲ್ಲಿ ಮೈಸೂರು ಸಂಸ್ಥಾನವನ್ನು ಅಪಹರಿಸಿ ಕೊಂಡು, ಶ್ರೀರಂಗಪಟ್ಟಣವನ್ನು ಬಲ ಪಡಿಸಿ, ರಾಜ್ಯವಾಳುತ್ತಿದ್ದನು. ಅವನು ಕುಂಪಣಿಯವರನ್ನು ದ್ವೇಷಿಸಿ, ೧೭೬೭ನೇ ವರುಷದಲ್ಲಿ ನಿಜಾಮನ ಸಂಗಡ ಅವರ ಮೇಲೆ ಬಿದ್ದು, ಅನೇಕ ತೊಂದರೆ ಪಡಿಸುತ್ತಿದ್ದ ಈಚೆ ೧೭೮೨ನೇ ವರುಷದಲ್ಲಿ ಸತ್ತನು. ಆ ಬಳಿಕ ಆತನ ಕುಮಾರನಾದ ಟೀಪುಸುಲ್ತಾನನು ಸಿಂಹಾಸನವ ಹತ್ತಿ, ಯುದ್ಧ ಪ್ರಯತ್ನಗಳನ್ನು ಹೆಚ್ಚಾಗಿ ಮಾಡುತ್ತಾ ಇರಲು, ಅವನ ಸಂಗಡ ಯುದ್ಧವಾಗುತ್ತಿದ್ದ ೧೭ ವರುಷದ ಮೇಲೆ ಕುಂಪಣಿಯವರ ಸೈನ್ಯ ಅವನ ಮೇಲೆ ಹೊರಟು, ಕಾವೇರಿನದಿಯಿಂದ ಸುತ್ತಲ್ಪಟ್ಟ ರಾಜಧಾನಿಯಾದ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ, ಅದನ್ನು ಹಿಡಿದು ಕೊಂಡಿತು. ಕೋಟೆಯನ್ನು ಹಿಡಿಯುವಾಗ ಕೋಟೇ ಬಾಗಲಿನಲ್ಲಿದ್ದವರಲ್ಲಿ ಟೀಪುಸುಲ್ತಾನನನ್ನು ಕೊಂದು ಹಾಕಿದರು.

ಕುಂಪಣಿಯವರು ಕಲ್ಕತ್ತ, ಚನ್ನಪಟ್ಟಣ, ಮುಂಬಯಿ ಎಂಬ ಸ್ಥಳಗಳನ್ನು ಮುಖ್ಯ ಪಟ್ಟಣಗಳಾಗಿ ಮಾಡಿ ಕೊಂಡು, ರಾಜಕಾರ್ಯಗಳನ್ನು ನಡಿಸುತ್ತಾ ಬರುತ್ತಾರೆ. ವಿವಾದಗಳನ್ನು ತೀರಿಸುವದಕ್ಕೆ ನ್ಯಾಯಾಧಿಪತಿ ಮೊದಲಾದ ಅಧಿಕಾರಿಗಳನ್ನು ನೇಮಿಸಿ, ದೇಶದ ಶಾಂತಿಗಾಗಿ ದೊಡ್ಡ ದಂಡು ಕೂಡಿಸಿ ಇಟ್ಟು ಕೊಂಡಿದ್ದಾರೆ. ಈ ದೇಶದ ಸರಕುಗಳನ್ನು ಬೇರೆ ಬೇರೆ ದೇಶಗಳಿಗೆ ಕಳುಹಿಸುವದಕ್ಕೂ ಯೂರೋಪ ಸರಕುಗಳನ್ನು ತರಿಸುವದಕ್ಕೂ ಬೇಕಾದ ಸಹಾಯವನ್ನು ಹೆಚ್ಚಾಗಿ ಮಾಡುತ್ತಾ, ದೇಶದೊಳಗಣ ವ್ಯಾಪಾರ ವೃದ್ಧಿಸುತ್ತಾ, ಹಿರಿ ಕಿರಿ ಜನರಿಗೆ ಸುಖ ಹುಟ್ಟಿಸಲಿಕ್ಕೆ ಪ್ರಯತ್ನ ಪಡುತ್ತಾ ಇದ್ದಾರೆ.

———

## 52. PALESTINE

## ೫೨. ಪೇಲೆಸ್ತೈನು ದೇಶವು

### (ಕಾನಾನ್ ದೇಶ)



ಯೆರೂಸಲೇಮು ನಗರ.

“ದೇಶಗಳೊಳಗೆ ಬಹಳ ಚಿಕ್ಕದಿ—
ದಾಶಿಯದೊಳಗೆ ಪಡುಲಿನಲ್ಲಿ ಪ್ರ—
ಕಾಶಿಸುತಿಹುದು, ಬೆಳ್ಳಿ ಹಾಟಕ ರತ್ನವಿಲ್ಲದೆಯೂ.||
ವಾಶಿ ಬಂತದರಿಂದ ಜಗತಿಗೆ;
ಪಾಶಬಂಧದೊಳವನಿ ಯಿರಲಾ—
ಕಾಶದಿಂದಿಳಿದೊಗೆದನಲ್ಲಿಯೆ ಸರ್ವ ರಕ್ಷಕನೂ.„||



ಗಲಿಲಾಯ ಸರೋವರವೂ ಅದರ ಬಳಿಯಲ್ಲಿರುವ ತಿಬೇರಿಯಾವೆಂಬ ಪಟ್ಟಣವೂ.

ಪೋಲೆಸ್ತೈನು ದೇಶವು ಆಸ್ಯ ಖಂಡದ ಪಶ್ಚಿಮ ಭಾಗಕ್ಕೆ ಭೂಮಧ್ಯಸಮುದ್ರದ ತೀರದಲ್ಲಿ ಅದೆ. ಅದು ಯಹೂದಿ ದೇಶವೆಂದೂ ಪರಿಶುದ್ಧ ಕ್ಷೇತ್ರವೆಂದೂ ಪುಣ್ಯಭೂಮಿಯೆಂದೂ ಹೆಸರುಗೊಂಡದೆ. ಅಲ್ಲಿ ಜಗದ್ರಕ್ಷಕನಾದ ಕ್ರಿಸ್ತನು ಅವತರಿಸಿ, ಬದುಕಿದನು. ಆ ಸಮಯದಲ್ಲಿ ಆ ದೇಶವು ಮುಖ್ಯವಾಗಿ ಮೂರು ಭಾಗಗಳಲ್ಲಿ ವಿಭಾಗಿಸಲ್ಪಟ್ಟಿತ್ತು,—ಉತ್ತರದಲ್ಲಿ ಗಲಿಲಾಯವು, ಮಧ್ಯದಲ್ಲಿ ಸಮಾರ್ಯವು, ದಕ್ಷಿಣದಲ್ಲಿ ಯಹೂದವು. ಈ ದೇಶಕ್ಕೆ ಎರೂಸಲೇಮು ರಾಜಧಾನಿಯಾಗಿದೆ. ದೇಶದ ಉತ್ತರ ಭಾಗದಲ್ಲಿ ಲಿಬನೋನ್ ಗುಡ್ಡಗಳು ಮೇರೆಯಾಗಿ ಅವೆ; ಅವುಗಳಿಂದ ಅಲ್ಲಿಯ ನದಿಗಳಲ್ಲಿ ಪ್ರಧಾನವಾದ ಯೋರ್ದನು ನದಿಯು ಇಳಿದು, ಗಲಿಲಾಯ ಸರೋವರದಲ್ಲಿ ಸಂಗಮವಾಗಿ, ಅಲ್ಲಿಂದ ಪುನಹಾ ಹೊರಟು, ಮೃತ್ಯು (ಅಥವಾ ಸೊದೋಮು) ಸಮುದ್ರಕ್ಕೆ ಶೇರುತ್ತದೆ.

ಈ ದೇಶವು ದೇವರು ಇಸ್ರಯೇಲ್ಯರಿಗೆ ಕೊಟ್ಟನು. ಅವರು ರಕ್ಷಕನಾದ ಯೇಸು ಕ್ರಿಸ್ತನನ್ನು ವಿಶ್ವಾಸಿಸದೆ ಹೋದದರಿಂದ ಪ್ರವಾದಿಗಳು ಮುಂದೆ ಹೇಳಿದ ಹಾಗೆ ಪರರಿಂದ ಅಪಜಯ ಹೊಂದಿ, ಪಲಾಯನ ಮಾಡಿ, ಚದರಿ ಹೋಗಿದ್ದಾರೆ. ಆದಾಗ್ಯೂ ಅವರು ನಂಬಿದರೆ ತಮ್ಮ ದೇಶವನ್ನು ಪುನಹಾ ಸ್ವಾಧೀನ ಮಾಡಿ ಕೊಂಡು ಅದರಲ್ಲಿ ವಾಸ ಮಾಡುವರೆಂದು, ಪೂರ್ವನಿರ್ಧಾರ, ನವನಿರ್ಧಾರವೆಂಬ ದೇವ ವಾಕ್ಯದ ಪುಸ್ತಕದಲ್ಲಿ ಸೂಚಿಸಿ ಅದೆ.

## ಅ. ಎರೂಸಲೇಮಿನ ಚರಿತ್ರ.

ಎರೂಸಲೇಮಿಗೆ ಪೂರ್ವ ಕಾಲದಲ್ಲಿ ಸಾಲೇಮು ಎಂತಲೂ ಎಬೂಸು ಎಂತಲೂ ಹೆಸರಿತ್ತು. ಈಗ ಮುಸಲ್ಮಾನರು ಸೋಲಿಮಾನೆಂತ, ಅದರ ಹೆಸರು ಹೇಳುತ್ತಾರೆ. ಅದು ಅರಸನಾದ ದಾವೀದನ ಕಾಲದಿಂದ ಕಾನಾನ್ ದೇಶದಲ್ಲಿರುವ ಪಟ್ಣಗಳಲ್ಲಿ ಬಹಳ ದೊಡ್ಡದಾಗಿ ಇರುತ್ತಿತ್ತು. ಅದು ಮೃತ್ಯುಸಮುದ್ರಕ್ಕೆ ಪಶ್ಚಿಮವಾಗಿ, ಭೂಮಧ್ಯಸಮುದ್ರಕ್ಕೆ ಪೂರ್ವವಾಗಿ, ಯಹೂದ, ಬೆನ್ಯಮಿನ್ ಎಂಬ ಇಸ್ರಯೇಲ್ಯ ಗೋತ್ರದವರ ದೇಶಕ್ಕೆ ಮಧ್ಯದಲ್ಲಿದೆ. ಅದು ಯಾರ್ದನ್ ನದಿಗೆ ಹೆಚ್ಚು ಕಡಿಮೆ ೨೫ ಮೈಲು ದೂರದಲ್ಲಿಯೂ ಭೂಮಧ್ಯಸಮುದ್ರಕ್ಕೆ ೪೨ ಮೈಲು ದೂರದಲ್ಲಿಯೂ ಅದೆ. ಅದರೊಳಗೆ ಚೀಯೋನು ಬೆಟ್ಟವು, ಮೋರೀಯ ಬೆಟ್ಟವು ಇರುತ್ತವೆ; ಅದರ ಹೊರಗಡೆ ಪೂರ್ವದಲ್ಲಿ ಇಪ್ಪೆಗುಡ್ಡವು, ಪಶ್ಚಿಮದಲ್ಲಿ ಗೊಲ್ಗಥ ಬೆಟ್ಟವು. ಬೆಥಾನಿಯ, ಬೆತ್ಫಗೆ ಎಂಬ ಊರುಗಳೂ ಕೇದ್ರೋನ್ ಹಿನ್ನೋಮ್ ಎಂಬ

ಹಳ್ಳಗಳೂ ಅದರ ಹತ್ತರ ಅವೆ. ಹೊರಗಡೆ ನಿಂತು ನೋಡಿದರೆ ಆ ಪಟ್ಟಣ ಅತಿ ಸುಂದರವಾಗಿ ಕಾಣಿಸುತ್ತದೆ.



ಎರೂಸಲೇಮು ನಗರದ ದೊಡ್ಡದಾಗಿ ಬರೆದ್ದೊಂದು ಪಾಲು.

ದೇವರು ಇಸ್ರಯೇಲ್ಯರಿಗೆ ಮೂಲತಂದೆ ಎಂದು ೩೭೮೦ ವರುಷಗಳ ಹಿಂದೆ ಆರಿಸಿ ಕೊಂಡ ಅಬ್ರಹಾಮನ ಕಾಲದಲ್ಲಿ ಮೆಲ್ಕಿಸೇದೆಕನೆಂಬವನು ರಾಜ್ಯ ಮಾಡುತ್ತಿರಲು,—ಎರೂಸಲೇಮು ಸಾಲೇಮು ಎಂಬ ಹೆಸರಿನಿಂದ ಪ್ರಸಿದ್ಧವಾಗಿಯೂ ಪ್ರಧಾನನಗರವಾಗಿಯೂ ಇತ್ತೆಂದು ತೋರುತ್ತದೆ. ಆ ತರುವಾಯ ಯೆಹೋಶುವನೆಂಬ ನಾಯಕನ ಕಾಲದಲ್ಲಿ ೩೩೦೩ ವರುಷಗಳ ಮುಂಚೆ ಬಲಿಷ್ಠರಾದ ಎಬೂಸಿಯರಲ್ಲಿಯೂ ಅದು ರಾಜಧಾನಿಯಾಗಿತ್ತು. ಎಬೂಸಿಯರು ನಗರದ ಹೊರಗಡೆಯಲ್ಲಿದ್ದ ಚೀಯೋನು ಬೆಟ್ಟದ ಮೇಲೆ ಘಟ್ಟಿಯಾದ ಒಂದು ಕೋಟೆಯನ್ನು ಕಟ್ಟಿ, ಅದಕ್ಕೆ ಎಬೂಸು ಎಂಬ ಹೆಸರಿಟ್ಟರು. ಆ ತರುವಾಯ ೨೮೭೩ ವರುಷಗಳ ಹಿಂದೆ ಎರೂಸಲೇಮು (ಸಮಾಧಾನಸ್ಥಳ) ಎಂಬ ಹೆಸರಿನಿಂದ ಪ್ರಖ್ಯಾತಿ ಹೊಂದಿತು. ನಾಯಕನಾದ ಯೆಹೋಶುವನು ೩೩೧೪ ವರುಷದ ಹಿಂದೆ ಬಂದು, ಅದೋನಿಸೇದೆಕ್ ಎಂಬ ಎಬೂಸಿಯರ ಅರಸನ ಸಂಗಡ ಯುದ್ಧ ಮಾಡಿ, ಅವನನ್ನು ಓಡಿಸಿ ಬಿಟ್ಟನು; ಆದರೂ ಆ ಕೋಟೆಯನ್ನು ಸ್ವಾಧೀನ ಮಾಡಿ ಕೊಂಡ ಹಾಗೆ ತೋರುವದಿಲ್ಲ. ಯೆ

ಹೋಶುವನು ಮೃತಿ ಹೊಂದಿದ ಕೆಲವು ಕಾಲದ ಮೇಲೆ ಇಸ್ರಾಯೇಲ್ಯರಲ್ಲಿ ಯಹೂದಗೋತ್ರದವರು ಆ ನಗರವನ್ನು ಹಿಡಿದು, ಸುಟ್ಟು, ನಿರ್ಮೂಲ ಮಾಡಿದರು. ಎಬೂಸಿಯರು ಅದನ್ನು ತಿರುಗಿ ಕಟ್ಟಿ, ಯಹೂದವಂಶಸ್ಥ ರಾಜನಾದ ದಾವೀದನ ಕಾಲದ ವರೆಗೆ ರಾಜ್ಯವನ್ನು ನಡಿಸುತ್ತಾ ಬಂದರು. ೨೯೧೧ ವರುಷದ ಹಿಂದೆ ದಾವೀದನು ಅವರ ಸಂಗಡ ಯುದ್ಧ ಮಾಡಲಿಕ್ಕೆ ಹೊರಟಾಗ್ಯೆ ತಾವು ಬಹಳ ಭದ್ರವಾಗಿ ಕಟ್ಟಿದ ಕೋಟೆಯನ್ನು ದಾವೀದನು ಹಿಡಿಯುವದು ಅಸಾಧ್ಯವೆಂದು ಅವರು ನೆನಸಿದ್ದರಿಂದ ಅವನನ್ನು ದೂಷಿಸಿದರು; ಆದರೂ ದಾವೀದನು ದಂಡುಗಾರನಾದ ಯೋವಾಬನನ್ನು ಕಳುಹಿಸಿ, ಅದನ್ನು ಸ್ವಾಧೀನ ಮಾಡಿ ಕೊಂಡನು. ಹೀಗೆ ಯೋವಾಬನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರ ಮಾಡ ಚಿಂತಿಸಿ, ಅವನನ್ನು ತನ್ನ ಸೇನಾಧಿಪತಿಯಾಗಿ ನೇಮಿಸಿದನು. ರಾಜನು ಆ ಕೋಟೆ ಇದ್ದಲ್ಲಿ ಚೀಯೋನು ಬೆಟ್ಟದ ಮೇಲೆ ಒಂದು ರಾಜಸದನವನ್ನು ಕಟ್ಟಿಸಿದ್ದಲ್ಲದೆ ಅನೇಕ ಮನೆಗಳುಳ್ಳ ಒಂದು ನಗರವನ್ನು ನಿರ್ಮಿಸಿ, ಅದಕ್ಕೆ ದಾವೀದನ ಪಟ್ಟಣವೆಂಬ ಹೆಸರಿಟ್ಟನು; ಅದರ ಉದ್ದದ ಗೋಡೆಯಲ್ಲಿ ೧೦ ಬಾಗಲಿದ್ದವು. ಅಂದಿನಿಂದ ಅದು ದೇಶದ ಪ್ರಧಾನಪಟ್ಟಣ




ಊವೊಯಿದಮಲಕ ಅಂದರೆ ಯಹೂದಿ ಅರಸನು;
ಹಾಗಾದರೆ ಇದು ರೆಹಬಾಮನಾಕಾರ.

ವಾಗಿ ಇರುತ್ತಿತ್ತು. ದಾವೀದನ ಮಗನಾದ ಸಾಲೊಮೋನನು ರಾಜ್ಯವಾಳಿ, ಎರೂಸಲೇಮೆಂದು ಹೆಸರು ಸ್ಥಾಪಿಸಿ, ಶೀರಿ ಹೋದ ತರುವಾಯ ಅವನ ಪುತ್ರನಾದ ರೆಹಬಾಮನೆಂಬವನು ದೇವಭಕ್ತಿ ಬಿಟ್ಟು, ಎರೂಸಲೇಮೊಳಗೆ ೧೨ ಗೋತ್ರಗಳಲ್ಲಿ ಯಹೂದಿ ಗೋತ್ರಮಾತ್ರವನ್ನು ಆಳುತ್ತಿರುವಾಗ ಮಿಸ್ರದ ರಾಜನಾದ ಶೀಷಕನೆಂಬವನು ಬಂದು, ನಗರವನ್ನು ಹಿಡಿದು, ಕೊಳ್ಳೆ ಮಾಡಿ, ತನ್ನ ರಾಜಧಾನಿಗೆ ತಿರಿಗಿ ಬಂದು, ತನ್ನ ಜಯದ ಸಂಗತಿಗಳನ್ನು ಬಣ್ಣದಿಂದ ಒಂದು ಗೋಡೆಗೆ ಚಿತ್ರವಾಗಿ ಬರೆಸಿದನು.

ಯೇಸು ಕ್ರಿಸ್ತನು ಹುಟ್ಟುವದಕ್ಕೆ ಮುಂಚೆ ೬೦೦ ವರುಷಕ್ಕೆ ಮೊದಲು ಬಾಬುಲ್ ದೇಶದ ಅರಸನಾದ ನೆಬುಕದ್ನೆಜರನು ದಂಡೆತ್ತಿ ಬಂದು, ಜಯಿಸಿ, ಎರೂಸಲೇಮಿನ ಅರಸನನ್ನೂ ಅನೇಕ ಜನರನ್ನೂ ಹೇರಳ ಲೂಟಿಯನ್ನೂ ಹಿಡುಕೊಂಡು ಹೋಗಿ, ತರುವಾಯ ೧೦ ಸಂವತ್ಸರದ ಮೇಲೆ ಮರಳಿ ವಿಶೇಷ ಬಲವನ್ನು ಕೂಡಿಸಿ ಕೊಂಡು ಬಂದು, ದೇವಾಲಯವನ್ನೂ ನಗರವನ್ನೂ ಹಾಳು ಮಾಡಿ, ಮತ್ತನೇಕ ನಿವಾಸಿಗಳನ್ನು ಸ್ವದೇಶಕ್ಕೆ ವೈದನು. ಅಲ್ಲಿ ಆ ಯಹೂದಿಯರು ೭೦ ವರುಷ ಇದ್ದನಂತರ ದಾಸತ್ವದಿಂದ ಬಿಡುಗಡೆ ಹೊಂದಿ, ತಿರುಗಿ ತಮ್ಮ ದೇಶಕ್ಕೆ ಬಂದು, ಎರೂಸಲೇಮು ಪಟ್ಟಣವನ್ನೂ ದೇವಾಲಯವನ್ನೂ ಪುನಹಾ ಕಟ್ಟಿದರು. ಯೇಸು ಕ್ರಿಸ್ತನಿಗೆ ಮುಂಚಿನ ೧೬೦ನೇ ವರುಷದ ಬಳಿಕ ಸಿರಿಯ (ಶಾಮ್) ದೇಶದ ಅರಸರುಗಳಿಂದ ಎರೂಸಲೇಮ್ ನಗರದವರಿಗೆ ಬಾಧೆ ಬಂತು. ಆ ತರುವಾಯ ಯೇಸು ಕ್ರಿಸ್ತನು ಹುಟ್ಟುವದಕ್ಕೆ ಮುಂಚೆ ೬೪ನೇ ವರುಷದಲ್ಲಿ ರೂಮಿ ರಾಜ್ಯದ ಸೇನಾಪತಿಯಾದ ಪೊಂಪೇಯನು ಬಂದು ಆದಿತ್ಯವಾರದಲ್ಲಿ ಎರೂಸಲೇಮನ್ನು ತನ್ನಾಳು ಮಾಡಿಕೊಂಡು, ಪಟ್ಟಣದ ಗೋಡೆಗಳನ್ನು ಕೆಡವಿದನು. ಹಿಂದಗಡೆ ಯಹೂದಿ ಮತ ಶೇರಿದವನಾಬ್ಬ ಪರದೇಶಿಯಾದ ಹೆರೋದನೆಂಬವನಿಗೆ ರೂಮಿಯರಿಂದ ಅಧಿಕಾರ ಶಿಕ್ಕಿದಾಗ ಇವನು ೩೪ ವರುಷ ರಾಜ್ಯಚಾರ ಮಾಡಿದ ಈಚೆ ಕ್ರೈಸ್ತ ಧರ್ಮಸ್ಥಾಪಕನಾದ ಯೇಸು ಕ್ರಿಸ್ತನು ಬೆತ್ಲೆಹೇಮ್ ಊರಲ್ಲಿ ಪ್ರವಾದಿಗಳ ಮಾತಿನ ಪ್ರಕಾರ ಜನ್ಮಿಸಿದನು. ೭೦ ವರುಷದ ಬಳಿಕ ಯಹೂದ್ಯರು ರೂಮಿಯರಿಗೆ ತಿರುಗಿ ಬೀಳಲು,— ರೂಮಿಯರು ದಂಡು ಕಳುಹಿಸಿ, ಎರೂಸಲೇಮನ್ನು ನೆಲಸಮ ಮಾಡಿ, ದೇವಾಲಯವನ್ನು ಸುಟ್ಟು, ಅನೇಕರನ್ನು ದಾಸರಾಗಿ ಮಾರಿ ಬಿಟ್ಟರು. ಕ್ರಿಸ್ತಶಕದ ೬೩೬ನೇ ವರುಷದಲ್ಲಿ ಅರಬಿಯರು, ೧೦೭೬ನೇ ವರುಷದಲ್ಲಿ ತುರ್ಕರು ಪೇಲೆಸ್ತೈನ್ ದೇಶವನ್ನು ಹಿಡುಕೊಂಡು, ಈ ವರೆಗೂ ಆಳುತ್ತಾ ಬರುತ್ತಾರೆ.

## ೮. ಎರೂಸಲೇಮಿನ ದೇವಾಲಯದ ಚರಿತ್ರ

ದಾವೀದ ಧಾರೆಯು ಪೇಲೆಸ್ತೈನಿನಲ್ಲಿ ರಾಜ್ಯಭಾರ ಮಾಡುತ್ತಿರಲಾಗಿ ದೇವರಿಗೆ ಒಂದು ಆಲಯವನ್ನು ಕಟ್ಟುವದಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹ ಮಾಡಿಟ್ಟ ಮೇಲೆ ಅವನ ಕುಮಾರನಾದ ಸೊಲೊಮೋನನು ೨೯೭೫ ವರುಷಗಳ ಮುಂಚೆ



ಇದು ಯೊಪ್ಪೆ ಅಥವಾ ಯಫೋ ಎಂಬ ಕೀರ್ತಿ ಪಟ್ಟ ಯಹೂದಿ ಬಂದರ. ಸೊಲೊಮೋನನಿಗೆ ಬೇಕಾದ ಮರಗಳು ಅಲ್ಲಿ ಶೇರಿ, ಅವನು ಅಲ್ಲಿಂದ ಎರೂಸಲೇಮಿನ ವರೆಗೆ ಕಟ್ಟಿದ ರಾಜಮಾರ್ಗದಲ್ಲಿ ಮುಂದೆ ಸಾಗಿ ಬಂದವು.

ತಂದೆ ತೋರಿಸಿದ ಸ್ಥಳದಲ್ಲಿ, ಎರೂಸಲೇಮು ಪಟ್ಟಣಕ್ಕೆ ಶೇರಿದ ಮೋರೀಯ ಎಂಬ ಬೆಟ್ಟದಲ್ಲಿ ಅದನ್ನು ಕಟ್ಟಲಿಕ್ಕೆ ಹತ್ತಿದನು. ಅದನ್ನು ತೀರಿಸುವದಕ್ಕೆ ಏಳು ವರುಷ ಹಿಡಿಯಿತು. ಅದು ದೇವದಾರು ಇತ್ಯಾದಿ ಶ್ರೇಷ್ಠ ಮರಗಳಿಂದ ಕಟ್ಟಿದ್ದಾಗಿ, ಅಲ್ಲಲ್ಲಿ ಬಂಗಾರದ ಬೆಳ್ಳೀ ತಗಡುಗಳಿಂದ ಬಹಳ ಅಲಂಕರಿಸಿದ್ದಾಗಿ ಇತ್ತು. ಇದನ್ನು ಕಟ್ಟಿ ಮುಗಿಸಿದ ತರುವಾಯದ ೩೪ನೇ ಸಂವತ್ಸರದಲ್ಲಿ ದೇವರ ಭಯಭಕ್ತಿ ಯಹೂದಿ ಗೋತ್ರದಲ್ಲಿ ಕಡಿಮೆಯಾದದ್ದಕ್ಕೆ ದೇವರಿಂದ ಶಿಕ್ಷೆಯಾಗುವದಕ್ಕಾಗಿ ಮಿಸ್ರದ ಧೊರೆಯಾದ ಶೀಷಕನೆಂಬವನು ಬಂದು, ಎರೂಸಲೇಮನ್ನು ಹಿಡಿದು ಕೊಂಡು, ದೇವಾಲಯದಲ್ಲಿದ್ದ ದ್ರವ್ಯವನ್ನೆಲ್ಲಾ ಕೊಳ್ಳೆ ಮಾಡಿ, ತಕ್ಕೊಂಡು ಹೋದನು. ತರುವಾಯ ಅದೇ ಗೋತ್ರಿಗಾಗಿ ಬಾಬುಲಿನ ನೆಬುಕದ್ನೇಜರನು ಬಂದು, ದೇವಾಲಯವನ್ನು ಸುಟ್ಟನು. ಆ ಬಳಿಕ ೭೦ನೇ ವರುಷದಲ್ಲಿ ಯಹೂದಿಯರು ಜರುಬಾಬೇಲನೆಂಬ ನಾಯಕನಾಳಗೆ ದೇವಾಲಯವನ್ನು ಮತ್ತು ಕಟ್ಟುವವರಾದರು. ಸುಮಾರು ೫೦೦ ಸಂವತ್ಸರಗಳ ಈಚೆ ಹೆರೋದ ಅರಸನು ದೇವಾಲಯವು ಶಿಥಿಲವಾಗಿದ್ದದ್ದನ್ನು ನೋಡಿ, ತನ್ನ ಕ್ರೂರತನದಿಂದ ಮುನಿಯುತ್ತಿದ್ದ ಯಹೂದಿಯರನ್ನು ಶಾಂತಿ ಪಡಿಸುವದಕ್ಕೆ ೧೮೦೦೦ ಕೆಲಸದವರನ್ನು ಇಟ್ಟು, ಹೊಸದನ್ನು ಮಾಡುವವನಾದನು. ಹೆರೋದನು ೩೮ ವರುಷ ಸೌರಿಸಿ ಕೊಂಡು, ಕಟ್ಟುತ್ತಾ ಇದ್ದರೂ ಅದು ಅವನ ಆಳುವಿಕೆಯಲ್ಲಿ ಪೂರಾಗಿ ಮುಗಿಯಲಿಲ್ಲ; ಆದರೂ ಮುಗಿದ್ದು ಅತಿ ಸೌಂದರ್ಯವಾಗಿತ್ತು. ಕಂಡವನೊಬ್ಬ ಚರಿತ್ರಕರ್ತನು ಹೇಳಿದ್ದೇನಂದರೆ: ಹೊರಗಡೆ ಥಪ್ಪ ಬಂಗಾರತಗಡುಗಳು ಹತ್ತಿಸಿದ್ದವು; ಬಂಗಾರ ಎಲ್ಲಿ ಇರಲಿಲ್ಲ, ಅಲ್ಲಿ ಪ್ರಕಾಶಿಸುವಂಥ ಬಿಳೇ ಕಲ್ಲುಗಳು ಇದ್ದವು; ಸಾರಿ ಬರುವ ಪ್ರಯಾಣಸ್ಥರಿಗೆ ಆ ಆಲಯವು ಹಿಮ ಬಿದ್ದು ಸೂರ್ಯನ ಬಿಸಲಿನಲ್ಲಿ ಶೋಭಿಸುವಂಥ ಪರ್ವತದೋಪಾದಿ ಕಾಣಿಸಿತು. ಈ ದೊಡ್ಡ ಆಲಯವನ್ನು, ಕ್ರಿಸ್ತನು ಮುಂತಿಳಿಸಿದಂತೆ, ರೂಮಿಯರು ಹಾಳು ಮಾಡಿ ಬಿಟ್ಟರು. ರೂಮಿ ದಂಡುನಾಯಕನಾದ ತೀತನು ಎರೂಸಲೇಮ್ ಪಟ್ಟಣವನ್ನು ಹಿಡಿದು ಕೊಂಡಾಗ ಅಂಥ ಮಹಿಮಾದೇವಾಲಯವನ್ನು ರಕ್ಷಿಸುವದಕ್ಕೆ ಬಹಳ ಪ್ರಯತ್ನಗಳ ಮಾಡಿದಾಗ್ಯೂ ಅವನ ಸೈನ್ಯದವರು ಅವನ ಮಾತು ಕೇಳದೆ, ಯಹೂದಿಯರಲ್ಲಿ ದ್ವೇಷ ಉಳ್ಳವರಾಗಿ, ದೇವಾಲಯದಲ್ಲಿ ವಿಶೇಷ ದ್ರವ್ಯವಿರುವದೆಂದು ನೆನಸಿ, ಬೆಂಕಿ ಹತ್ತಿಸಿ, ಸುಟ್ಟು, ಭಸ್ಮ ಮಾಡಿದರು. ಜಯಶಾಲಿಯಾದ ತೀತನಿಗೆ ರೂಮು ಪಟ್ಟಣದಲ್ಲಿ ಕಟ್ಟಿದ ಕಲ್ಲುಮಂಟಪದಲ್ಲಿ ಅವನ ಜಯೋತ್ಸವದ

ಮೆರವಣಿಗೆಯೊಳಗೆ ದೇವಾಲಯದ ಸಾಮಾನು ತಕ್ಕೊಂಡು ಬಂದ ಯೆಹೂದಿಯರ ಚಿತ್ರವದೆ; ಇಲ್ಲಿ ಛಾಪಿಸಿದ ಚಿತ್ರವು ಅದೇ.



ತೀತನ ಮಂಟಪದ ಒಂದು ಚಿತ್ರ.

## 53. HISTORY OF MOSES

## ೫೩. ಮೋಶೆ

"ಮೂರು ಸಾವಿರ ವರ್ಷಗಳ ಹಿಂ—
ದೂರ ಬಿಟ್ಟಿಸ್ರಾಯೇಲ್ಯರು
ಶೇರಿ ಮಿಸ್ರದಲಿಹರು ಫರೋಹನರಸ ಕರುಣದಲೀ. ||
ತೋರಿತತಿ ಸುಖ ಮೊದಲಿಗವರಿಗೆ;
ಘೋರವಾಯಿತು ಕಷ್ಟ ಕಡೆಯಲಿ;
ಕೋರುವರು ಬಿಡುಗಡೆಯ ಪಥವನು ಬಿಟ್ಟಿಗಂಜುತಲೇ,,. ||

"ಇಷ್ಟ ದೇವರು ನೋಡಿಯುವರನು,
ಕಷ್ಟ ಬಿಡಿಸಲಿಕಾಗಿ ಮೋಶೆಯ
ದುಷ್ಟ ರಾಜನ ಬಳಿಗೆ ಕಳುಹಿಸಿ, ನಾಯ ತಿಳಿಸಿದನೂ. ||
ಸೃಷ್ಟಿಕರ್ತನದಾಜ್ಞೆ ಮೀರಲು,
ನಷ್ಟ ಪಟ್ಟನು ರಾಜ ಕಡಲಲಿ;
ತುಷ್ಟಿ ಗೊಂಡರು ಮೋಶೆಯೊಳಗಾ ಇಸ್ರಯೇಲಿಯರೂ. || ,,

೩೮೫೫ ವರುಷಗಳ ಹಿಂದೆ ಜನ್ಮಿಸಿದ ಅಬ್ರಹಾಮನ ಸಂತತಿಯವರಾದ ಇಸ್ರಯೇಲ್ಯರು ಮಿಸ್ರದೇಶಕ್ಕೆ ಹೋಗಿ, ಅಲ್ಲಿ ಸುಮಾರು ೧೨೦ ವರುಷ ದಾಸರಾಗಿದ್ದಾಗ ಆ ದೇಶದ ಫರೋಹನೆಂಬ ಅರಸನು ಅವರನ್ನು ಬಾಧಿಸಿದನು. ಮುಖ್ಯವಾಗಿ ಅವರು ಬಿಟ್ಟೀ ಮೇಲೆ ಇಟ್ಟಿಗೆಗಳನ್ನು ಮಾಡ ಬೇಕಾಯಿತು. (ಆ ಕಾಲ ಸೂಚಿಸ ಬಹುದಾದಂಥ ಒಂದು ಹಳೇ ಚಿತ್ರವು ಆ ದೇಶದಲ್ಲಿ ಶಿಕ್ಕಿತು. ಅದು ಇಲ್ಲಿ ಛಾಪಿಸಿ,



ಮಿಸ್ರದೇಶದಲ್ಲಿ ಇಟ್ಟಿಗೆ ಮಾಡಿಸಿದ ತರ. ಚಂದಾಗಿ ನೋಡಿದರೆ ಇಬ್ಬರಿಗೆ ಮಾತ್ರ ಗಡ್ಡವಿರುವದು ಕಾಣುತ್ತದೆ. ಇವರು ಪರಜನರಾಗಿರ ಬೇಕು, ಯಾಕಂದರೆ ಮಿಸ್ರದವರು ಗಡ್ಡ ಬೋಳಿಸಿಕೊಳ್ಳುತ್ತಿದ್ದರು.

ತೋರಿಸಿದೆ.) ಅದಲ್ಲದೆ ಯಹೂದಿಯರು ವೃದ್ಧಿ ಹೊಂದಿದರೆ ಯುದ್ಧ ಮಾಡಿ ತನ್ನನ್ನು ಜೈಸುವರೆಂದು, ಆ ರಾಜನು ನೆನಸಿ, ಅವರಿಗೆ ಹುಟ್ಟಿದ ಗಂಡುಮಕ್ಕಳೆಲ್ಲರನ್ನು ನೀಲುನದಿಯಲ್ಲಿ ಬಿಸಾಡುವ ಹಾಗೆ ಅಪ್ಪಣೆ ಕೊಟ್ಟನು. ಹೀಗೆ ಇರುವಾಗ ಲೇವಿಯ ಗೋತ್ರದವನೊಬ್ಬನಿಗೆ ಒಂದು ಗಂಡು ಕೂಸು ಹುಟ್ಟಿತು. ಆ ಮಗುವಿನ ತಾಯಿಯು ಅದನ್ನು ನೀರಿನಲ್ಲಿ ಬಿಸಾಡಿ ಕೊಲ್ಲ ಮನಸ್ಸಿಲ್ಲದೆ, ಮೂರು ತಿಂಗಳ ವರೆಗೆ ಬಚ್ಚಿಟ್ಟು, ತರುವಾಯ ಬಚ್ಚಿಡುವದಕ್ಕೆ ಆಗದೆ ಹೋದದರಿಂದ ಒಂದು ಗೂಡೆಯಲ್ಲಿ ಶಿಶುವನ್ನು ಇಟ್ಟು, ಹೊಳೆಯ ಬಳಿಗೆ ಹೋಗಿ, ಅಲ್ಲಿ ಬೆಳದಿರುವ ಆಪಿನ ಮರೆಯಲ್ಲಿ

ಇಟ್ಟಳು. ಅದಕ್ಕೇನು ಸಂಚವಿಸುವದೋ? ಅದನ್ನು ತಿಳಿಯಲಿಕ್ಕೆ ಅದರ ಅಕ್ಕ ದೂರ ದಲ್ಲಿ ನಿಂತು, ನೋಡುತ್ತಾ ಇದ್ದಳು. ಆ ಸಮಯದಲ್ಲಿ ಅರಸನ ಮಗಳು, ಪರಿವಾರ ಜನರ ಸಮೇತವಾಗಿ, ಸ್ನಾನ ಮಾಡುವದಕ್ಕೆ ನದಿತೀರಕ್ಕೆ ಬಂದು, ಆಪಿನಲ್ಲಿ ಇದ್ದ ಗೂಡೆಯನ್ನು ಕಂಡು, ಅದನ್ನು ತನ್ನ ಬಳಿಗೆ ತರಿಸಿ, ಮಗು ಅಳುವದನ್ನು ನೋಡಿ, ಅದರ ಮೇಲೆ ಕರುಣವಿಟ್ಟು, ಇದು ಇಸ್ರಯೇಲ್ಯ ಮಗುವೆಂದು ನಿಶ್ಚೈಸಿ ಕೊಂಡಳು. ಆಗಲಾಶಿಶುವಿನ ಸಹೋದರಿಯು ರಾಜಪುತ್ರಿಯ ಸಮೀಪಕ್ಕೆ ಬಂದು, ಈ ಮಗುವಿ ಗೆ ಹಾಲುಣ್ಣಿಸುವದಕ್ಕೆ ಇಸ್ರಯೇಲ್ಯ ಕುಲದವಳಾದ ಒಬ್ಬಳನ್ನು ಕರಕೊಂಡು ಬರು ವೆನೆಂದು ಹೇಳಿ, ಆಕೆಯ ಆಜ್ಞೆಯನ್ನು ಪಡಕೊಂಡು, ಆ ಮಗುವಿನ ತಾಯಿಯನ್ನು ಕರತಂದಳು. ರಾಜಪುತ್ರಿಯು ಆಕೆಯನ್ನು ನೋಡಿ, ಈ ಮಗುವನ್ನು ತಕ್ಕೊಂಡು ಹೋಗಿ ಹಾಲುಣ್ಣಿಸಿ ಕಾಪಾಡು, ನಿನಗೆ ಸಂಬಳವನ್ನು ಕೊಡುವೆನೆಂದು, ಹೇಳಿದಳು. ಹಾಗೆಯೇ ಅವಳು ಮಗುವನ್ನು ತೆಗದು ಕೊಂಡು ಹೋಗಿ, ಸಾಕಿ, ಬೆಳಸಿದಳು. ರಾಜಪುತ್ರಿಯು ಆ ಕೂಸಿಗೆ ಮೋಶೆ ಎಂಬ ಹೆಸರಿಟ್ಟು, ಸಕಲ ವಿದ್ಯಾಭ್ಯಾಸಸಾಧ ನೆಗಳನ್ನು ಮಾಡಿಸಿದಳು. ಅವನು ೮೦ ವರುಷವಯಸ್ಸುಳ್ಳವನಾದಾಗ ದೇವರು ಅವನಿಗೆ ಪ್ರಸನ್ನನಾಗಿ, ಇಸ್ರಯೇಲ್ಯರನ್ನು ದಾಸತ್ವದಿಂದ ಬಿಡುಗಡೆ ಮಾಡ ಬೇಕೆಂ ದು ಹೇಳಿ, ಮೋಶೆಯನ್ನು ಸೇನಾಧಿಪತಿಯಾಗಿ ನೇಮಿಸಿ, ಅವನ ಸಹೋದರನಾದ ಆರೋನನನ್ನು ಸಹಾಯಕನಾಗ ಮಾಡಿ, ನೀವಿಬ್ಬರು ಅರಸನ ಸಮುಖಕ್ಕೆ ಹೋಗಿ, ಇಸ್ರಯೇಲ್ಯರನ್ನು ಅವರ ದೇಶಕ್ಕೆ ಕಳುಹಿಸ ಬೇಕೆಂದು, ಬೇಡಿ ಕೊಳ್ಳಿರೆಂಬದಾಗಿ ಆಜ್ಞಾಪಿಸಿದನು. ಆ ಆಜ್ಞೆಯ ಪ್ರಕಾರ ಅವರಿಬ್ಬರು ಅರಸನೆದೆಗೆ ಹೋಗಿ, ತಾವು ಬಂ ದ ಕಾರ್ಯವನ್ನು ತಿಳಿಯ ಮಾಡಿದಾಗ್ಯೆ ಅರಸನು ಅದಕ್ಕೆ ಸಂಮತಿಸಲಿಲ್ಲ. ಆದದರಿಂ ದ ದೇವರು ಮಿಸ್ರದವರ ಮೇಲೆ ಆಶ್ಚರ್ಯ ರೀತಿಯಿಂದ ಹತ್ತು ವಿಧದ ಬಾಧೆಗಳ ಬೀಳ ಮಾಡಿದನು. ರಾಜನು ಆ ಬಾಧೆಗಳನ್ನು ಕಡೆಯಲ್ಲಿ ಸಹಿಸಲಾರದೆ, ಇಸ್ರಯೇ ಲ್ಯರನ್ನು ಬಿಟ್ಟು ಕೊಟ್ಟು, ಅವರು ಸ್ವಲ್ಪ ದೂರ ಹೋದ ಮೇಲೆ ಪುನಹಾ ಹೃದಯ ವನ್ನು ಕಠಿಣ್ಯ ಪಡಿಸಿ, ಅವರನ್ನು ಹಿಡಿಯ ಬೇಕೆಂದು, ಅವರ ಬೆನ್ನಟ್ಟಲು, ಅವರು ದಾಟಿ ಹೋದ ಕೆಂಪುಸಮುದ್ರದಲ್ಲಿ ಅವನೂ ಅವನ ಸೈನ್ಯವೂ ನಾಶವಾದರು. ಈ ಪ್ರಕಾರ ಹೊರಟು ಬಂದ ೬೦೦೦೦೦ ಇಸ್ರಯೇಲ್ಯರು ಕಾನಾನ್ ದೇಶಕ್ಕೆ ಹೋ ಗಲೆತ್ನೈಸಿ, ಪ್ರಯಾಣ ಮಾಡಿದರು. ಆದರೂ ದೇವರು ಹೇಳಿದ ಮಾತುಗಳನ್ನು ಅ ವರು ನಂಬದೆ, ಮೋಶೆಗೆ ವಿರೋಧವಾಗಿ ಗುಣುಗುಟ್ಟಿ, ಅವನ ಸಂಗಡ ಅನೇಕಾವ ರ್ತಿ ಕಲಹಿಸಿದದರಿಂದ ದೇವರು ಅವರನ್ನು ೪೦ ವರುಷ ಅರಣ್ಯದಲ್ಲಿ ಬಹಳ ಅಲೆ ಯುವ ಹಾಗೆ ಮಾಡಿ, ಇಬ್ಬರು ಉತ್ತಮರು ಹೊರ್ತಾಗಿ ಅವರನ್ನು ಅಲ್ಲ, ಅವರ

ಮಕ್ಕಳನ್ನು ಮಾತ್ರ ವಾಗ್ದತ್ತ ಕೊಟ್ಟ ದೇಶದಲ್ಲಿ ಶೇರಿಸಿದನು. ಇಸ್ರಯೇಲ್ಯರು ಪ್ರಯಾಣ ಮಾಡಿ, ೯೦ನೇ ದಿನದಲ್ಲಿ ಸೀನಯಿ ಎಂಬ ಪರ್ವತದ ಸಮೀಪಕ್ಕೆ ಬಂದರು.



ಸೀನಯಿ ಪರ್ವತದ ಹತ್ತಿರ ಕಟ್ಟಿರುವ ಕಥರೀನಳ ಮಠವೆಂಬ ಒಂದು ಮಠವು ಇಲ್ಲಿ ಕಾಣುತ್ತದೆ.

ಆಗ ದೇವರು ಮೋಶೆಯನ್ನು ಆ ಪರ್ವತದ ಮೇಲಕ್ಕೆ ಕರದು, ಜನರು ಸನ್ಮಾರ್ಗದಲ್ಲಿ ನಡದು ಕೊಳ್ಳುವ ಹಾಗೆ ಅವರಿಗೆ ಹತ್ತು ಆಜ್ಞೆಗಳನ್ನು ಕೊಟ್ಟನು, ಯಾವವಂದರೆ:

೧. ನಿನ್ನ ದೇವರಾದ ಯೆಹೋವನು ನಾನೇ; ನನ್ನ ಮುಂದೆ ನಿನಗೆ ಬೇರೆ ದೇವರುಗಳಿರ ಬಾರದು.
೨. ವಿಗ್ರಹಾರಾಧನೆ ಮಾಡ ಬೇಡ.
೩. ನನ್ನ ಹೆಸರನ್ನು ವ್ಯರ್ಥವಾಗಿ ತೆಗಿಯ ಬೇಡ.
೪. ಸಬ್ಬತ್ ಎಂಬ ಹಬ್ಬದಿವಸವನ್ನು ಪರಿಶುದ್ಧ ಮಾಡುವ ಹಾಗೆ ಜ್ಞಾಪಕ ಮಾಡಿಕೋ.
೫. ನಿನ್ನ ತಂದೆ ತಾಯಿಗಳವರನ್ನು ಸನ್ಮಾನಿಸು.
೬. ಕೊಲ್ಲ ಬೇಡ.
೭. ವ್ಯಭಿಚಾರ ಮಾಡ ಬೇಡ.
೮. ಕದಿಯ ಬೇಡ.
೯. ಅಪಸಾಕ್ಷಿ ಹೇಳ ಬೇಡ.
೧೦. ನಿನ್ನ ನೆರೆಯವನಿಗೆ ಇರುವ ಯಾವದನ್ನಾದರೂ ಆಶಿಸ ಬೇಡ.

ಅವರು ತನ್ನ ವಾಕ್ಯದಲ್ಲಿ ನಂಬಿಕೆ ಇಡುವದಕ್ಕಾಗಿ ದೇವರು ಅವರನ್ನು ಅರಣ್ಯದಲ್ಲಿ ಆಶ್ಚರ್ಯ ರೀತಿಯಿಂದ ಕಾಪಾಡಿದನು. ಅದಕ್ಕೆ ಮೋಶೆಯು ಮಧ್ಯಸ್ಥನಾಗಿ, ಅವರಿಗೆ ಆಹಾರಕ್ಕಾಗಿ ಮನ್ನಾ ಎಂಬ ಶೀಯಾದ ಪದಾರ್ಥವು ಆಕಾಶದಿಂದ ಸುರಿಯುವ ಹಾಗೆ ಮಾಡಿ, ಬಂಡೆಯ ಕಲ್ಲಿನಿಂದ ನೀರು ಹರಿಯ ಮಾಡಿ, ಲಾವಕ್ಕಿ ಎಂಬ ಅನೇಕ ಪಕ್ಷಿಗಳನ್ನು ಬರ ಮಾಡಿದನು. ಜನರು ಉಟ್ಟು ಕೊಂಡಿದ್ದ ವಸ್ತ್ರಗಳು ಸಾರ್ವದಾ ಹೊಸದಾಗಿಯೇ ಇದ್ದು, ಅವರ ಪಾದರಕ್ಷೆಗಳು ಸವದು ಹೋಗಲಿಲ್ಲ. ಮಿಸ್ರದಿಂದ ಹೊರಟ ಇಸ್ರಯೇಲ್ಯರ ಮಕ್ಕಳು ಅರಣ್ಯವಾಸದ ೪೦ ವರುಷಗಳಾದ ಮೇಲೆ ತಮ್ಮ ಮುಂದಿನ ಶತ್ರುಗಳನ್ನು ದೇವರ ಸಹಾಯದಿಂದ ಜೈಸಿ, ಕಾನಾನ್ ದೇಶ ಹೊಕ್ಕರು. ಅದಕ್ಕೆ ಮೊದಲು ಮೋಶೆಯು ತನಗೆ ಬದಲಾಗಿ ಯೆಹೋಶುವ ಎಂಬವನನ್ನು ನಾಯಕನಾಗಿ ನೇಮಿಸಿ, ಪಿಸ್ಗಾ ಬೆಟ್ಟವನ್ನು ಹತ್ತಿ, ಅಲ್ಲಿ ಮೃತವಾಗಿದ್ದನು. ಆ ತರುವಾಯ ಇಸ್ರಯೇಲ್ಯರು ದುಷ್ಟರೂ ವಿಗ್ರಹಾರಾಧಕರೂ ಆದ ಕಾನಾನ್ಯರನ್ನು ದೇವರ ಅಪ್ಪಣೆಯ ಮೇರೆಗೆ ದೇಶದಿಂದ ಹೊರಡಿಸಿ, ಅದನ್ನು ತಮ್ಮಲ್ಲಿ ಹಂಚಿ ಕೊಂಡು, ವಾಸಿಸುವವರಾದರು.

# 54. HISTORY OF THE KINGS OF ISRAEL

# ೫೪. ಇಸ್ರಯೇಲ್ಯರ ಅರಸರುಗಳ ಚರಿತ್ರವು

"ತಿರಿಗಿ, ತಿರಿಗೀ ಕಷ್ಟವೇತಕೆ,
ಮರಳಿ, ಮರಳೀ ಹಾನಿಯೇತಕೆ
ಕರುತಪಟ್ಟವೆರೂಸಲೇಮಿಗೆ ಬಂದುದುಸುರಿರೆಲೇ!||
ಮರೆತು ದೇವರು ತನ್ನ ಮುದದ ಜ__
ನರನು, ಕಾಯೊದು ಬಿಟ್ಟು ಬಿಟ್ಟನೊ?
ಮುರಿದನಾತನು ತಾನೆ ಕಟ್ಟಿದೊಡಂಬಡಿಕೆಯನ್ನೋ?,,||

"ಅಲ್ಲವಲ್ಲದು; ಜನರು ತಮ್ಮಿಂ—
ದೊಲ್ಲೆವೆನ್ನುತಲವಗೆ ಸೇವೆಯ
ಸಲ್ಲಿಸದವನ ತಳ್ಳಿ ಬಿಟ್ಟರು ಮೂಢತನದಿಂದಾ.॥
ನಲ್ಲ ದೇವರ ಪ್ರೀತಿಯೈಕ್ಯದಿ
ನಿಲ್ಲದಿದ್ದರು, ತಿರುಗಿ ತಿರುಗಿಯೆ
ಕಲ್ಲಹೃದದವರಾಗಿ; ನಶಿಸಿತು ಹಾಗೆ ಯಾ ನಗರಾ.„॥

ಅಬ್ರಹಾಮನೆಂಬ ಸದ್ಭಕ್ತನು ಇಸ್ರಯೇಲ್ಯರಿಗೆ ಮೂಲಪಿತೃ. ಅಂಥವನಾಗುವದಕ್ಕಾಗಿ ದೇವರು ಜಲಪ್ರಳಯವಾಗಿ ೪೨೭ ವರುಷವಾದ ಈಚೆ ಅವನನ್ನು ನೇಮಿಸಿದನು. ಇಸ್ರಯೇಲ್ಯರಾದ ಅವನ ವಂಶದವರು ೩೩೦೦ ವರುಷಗಳ ಹಿಂದೆ ಕಾನಾನ್ ದೇಶದಲ್ಲಿ ಶೇರಿದ ಮೇಲೆ ೩೭೦ ವರುಷ ಅಧಿಪತಿಗಳಲ್ಲಿ ಬದುಕಿದರು; ಬಳಿಕ ತಮ್ಮ ಮೇಲೆ ಅರಸರುಗಳನ್ನು ಮಾಡಿ ಕೊಂಡರು. ಮೊದಲನೇ ಅರಸನು ಸೌಲನೆಂಬವನು. ಇವನು ೨೯೪೩ ವರುಷಗಳ ಹಿಂದೆ ಇಸ್ರಯೇಲ್ಯರಿಗೆ ಮೊದಲನೇ ಅರಸನಾಗಿ, ಹನ್ನೆರಡು ಗೋತ್ರಗಳಾಗಿರುವ ಅವರನ್ನು ಆಳಿ, ಕೆಲವು ಕಾಲ ರಾಜ್ಯಭಾರ ಮಾಡುತ್ತಾ ಬಂದನು. ಆ ಮೇಲೆ ದಾವೀದನು, ಇವನ ಮಗ



ಪೂರ್ವಕಾಲದ ಯುದ್ಧಹಡಗಗಳು

ನಾದ ಸಾಲಾಮೋನನು ಆಳಿದರು. ಇವರಿಬ್ಬರು ತಮ್ಮ ಕಾಲದ ಉಳಿದ ಸಕಲ ರಾಜರಿಗಿಂತ ಪ್ರಸಿದ್ಧರಾದವರು. ಸಾಲಾಮೋನನ ಹಡಗಗಳು ಹಿಂದು ದೇಶದಲ್ಲಿಯ ಅಭೀರರ ರಾಜ್ಯಕ್ಕೂ ಬಂದು, ಬಂಗಾರ ಇತ್ಯಾದಿ ತಕ್ಕೊಂಡು ಹೋಗುತ್ತಿದ್ದವು. ಅರಬಿ ದೇಶದ ಷೇಬ ಅಥವಾ ಯವನು ಶೀಮೆಯ ರಾಣಿಯು ಅವನ ಪರಮ ಜ್ಞಾನದ ಸುದ್ದಿ ಕೇಳಿ, ಒಮ್ಮೆ ಬಂದು ಪರೀಕ್ಷಿಸಿದಾಗ ತನಗೆ ಅರೆವಾಸಿ ಅದರ ವಿಷಯವಾಗಿ ತನ್ನ ಶೀಮೆಯಲ್ಲಿ ಹೇಳಿರಲಿಲ್ಲವೆಂದು, ಆಶ್ಚರ್ಯ ಪಟ್ಟಳು. ಆವಾಗ ದೇವರು ವಿಧೇಯರಾದ ತನ್ನ ಇಸ್ರಯೇಲ್ಯರಿಗೆ ಬಹು ಆಶೀರ್ವಾದ ಪಾಲಿಸುತ್ತಿದ್ದನು. ಮೇಲೆ ಹೇಳಿದ ಮೂರು ಅರಸರುಗಳು ಆಳುತ್ತಿದ್ದ ೧೦೦ ವರುಷ ಶೀರಿದನಂತರ ಸಾಲಾಮೋನನ ಮಗನಾದ ರೆಹಬಾಮನು ಅರಸನಾದನು. ಇವನನ್ನು ಹತ್ತು ಗೋತ್ರದವರು ಕೂಡಿ ಬಿಟ್ಟು, ಯೆರಾಬಾಮನೆಂಬವನಿಗೆ ಒಳಬಿದ್ದರು. ಆವಾಗ ಇಸ್ರಯೇಲ್ಯ ರಾಜ್ಯವು ಎರಡು ಭಾಗವಾಯಿತು. ರೆಹಬಾಮನು ಆಳಿದ ಭಾಗದ ಹೆಸರು ಯಹೂದ ರಾಜ್ಯವೆಂತ ಆಯಿತು; ಇದರಲ್ಲಿ ಯೆರೂಸಲೇಮು ಇತ್ತು. ಯೆರಾಬಾಮನು ಆಳಿದ ಭಾಗದ ಹೆಸರು ಇಸ್ರಯೇಲ್ಯ ರಾಜ್ಯವೆಂತಾಯಿತು. ಅಂದಿನಿಂದ ಬಹು ಕೆಟ್ಟವರಾದ ಇಸ್ರಯೇಲ್ಯರು ಬೇಗ, ಯಹೂದಿಯರು ಆ ಮೇಲೆ ಕಳೆಗುಂದಿ ಹೋದರು; ಯಾಕಂದರೆ ಅವರವರು ದೇವರು ಮೆಚ್ಚುವದನ್ನು ಮಾಡದವರಾದರು. ಇಸ್ರಯೇಲ್ಯರಾದವರ ಮೇಲೆ ೧೯ ರಾಜರು ೨೫೩ ವರುಷ ಆಳಿದ ಇತ್ತಲಾಗೆ ಸಲ್ಮನಸ್ಸರನೆಂಬ ಅಸುರಿಯನಾದ ರಾಜನು ಕ್ರಿಸ್ತನು ಹುಟ್ಟುವದಕ್ಕೆ ಮೊದಲು ೭೨೨ನೇ ವರುಷದಲ್ಲಿ ದಂಡು ಸಮೇತವಾಗಿ ಬಂದು, ಇಸ್ರಯೇಲ್ಯ ರಾಜಧಾನಿಯಾದ ಸಮಾರ್ಯ ನಗರವನ್ನು ಜಯಿಸಿ, ೧೦ ಗೋತ್ರಗಳನ್ನು ಶೆರೆ ಹಿಡಿದು ಕೊಂಡು, ಹೋದನು. ಯಹೂದ ರಾಷ್ಟ್ರವ ೩೮೭ ವರುಷ ಆಳುತ್ತಿದ್ದ ೨೦ ಅರಸುಗಳಲ್ಲಿ ಕೆಲವರು ದೇವಭಕ್ತಿಯುಳ್ಳವರಾದದರಿಂದ ಈ ಸಂಸ್ಥಾನವು ಕ್ರಿಸ್ತನು ಹುಟ್ಟುವದಕ್ಕೆ ಮೊದಲು ೫೮೯ನೇ ವರುಷದ ವರೆಗೆ ಕ್ಷಯವಾಗಲಿಲ್ಲ. ಈ ವರುಷದಲ್ಲಿ ಬಾಬುಲ್ ದೇಶದ ಅರಸನಾದ ನೆಬುಕದ್ನೇಜರನು ಯೆರೂಸಲೇಮನ್ನು ಹಿಡಿದು ಕೊಂಡು, ಅಲ್ಲಿಯ ಅರಸನಾದ ಜೆದೆಕೀಯನ ಕಣ್ಣುಗಳನ್ನು ಕಿತ್ತು ಹಾಕಿಸಿ, ಅನೇಕ ಪ್ರಜೆಯನ್ನು ಸ್ವದೇಶಕ್ಕೆ ವೈದನು. ಈ ಪ್ರಕಾರ ಬಾಬುಲಿಗೆ ಕೈಶೆರೆಯಾಗಿ ಹೋದವರು ಅಲ್ಲಿ ೭೦ ವರುಷ ಕಷ್ಟ ಅನುಭವಿಸುತ್ತಾ ಇದ್ದ ತರುವಾಯ ಬಾಬುಲ್ ರಾಜ್ಯವನ್ನು ಸ್ವತಂತ್ರಿಸಿ ಕೊಂಡು ಫಾರ್ಶಿ ರಾಜ್ಯವನ್ನು ಸ್ಥಾಪಿಸಿದ ಕೋರ ರಾಜನು ಅವರಿಗೆ



ಹಾಳಾದ ಬಾಬುಲ್ ಪಟ್ಟಣವಿದ್ದೆಡೆ ಶಿಕ್ಕಿದ್ದೊಂದು ಇಟ್ಟಿಗೆಯಾಕಾರ. ಅದರ ಬರಹದ ಅರ್ಥ ಈ ವರೆಗೆ ಆಗಲಿಲ್ಲ.

ಬಿಡುಗಡೆ ಕೊಟ್ಟನು. ಆಗ ಅವರದೊಂದು ಗುಂಪು ಹೋಗಿ ಯೆರೂಸಲೇಮಿಗೆ ಮುಟ್ಟಿ, ಅಂದಿನಿಂದ ೧೯ ವರುಷದೊಳಗೆ ದೇವಾಲಯ ತಿರಿಗಿ ಕಟ್ಟಿತು. ಆ ಮೇಲೆ ಎಜ್ರನೆಂಬ ಶಾಸ್ತ್ರಿಯ ಕೆಳಗೆ ಮತ್ತೊಂದು ಗುಂಪು ಬಂದು, ಮೊದಲು ಬಂದಿದ್ದವರ ಸಂಗಡ ಶೇರಿ ಕೊಂಡು, ನೆಹೆಮಿಯನೆಂಬ ಮುಖ್ಯನ ಪಾರುಪತ್ಯದಲ್ಲಿ ಯೆರೂಸಲೇಮು ಮತ್ತು ಏರಿಸಿತು. ಬಾಬುಲಿನ ಶೆರೇ ದಿವಸಗಳ ಈಚೆ ಇಸ್ರಯೇಲ್ಯ ಮತ್ತು ಯಹೂದಿ ಎಂಬ ಭೇದ ಹೋಯಿತು; ಯಹೂದಿ ಎಂಬ ಒಂದೇ ಹೆಸರು ಉಳಿಯಿತು. ಯಹೂದಿಯರು ಫಾರ್ಶಿಯರ ಅಧಿಕಾರದೊಳಗೆ ನೆಹೆಮಿಯನಿಗೀಚೆ ೧೨೧ ವರುಷ ಸ್ವಲ್ಪ ಸಮಾಧಾನವಾಗಿದ್ದ ಮೇಲೆ ಸಿಕಂದರನೆಂಬ ಯವನರ ಅರಸನು ಅವರನ್ನು ತನ್ನ ವಶ ಮಾಡಿ ಕೊಂಡನು. ಬಳಿಕ ಮಿಸ್ರ ದೇಶದ ಒಬ್ಬ ರಾಜನು ೧೦೦೦೦ ಯಹೂದಿಯರನ್ನು ಶೆರೆ ಹಿಡಿದು, ಮಿಸ್ರಕ್ಕೆ ವೈದನು. ಅಲ್ಲಿ ಇಬ್ರಾನಿ ಭಾಷೆಯಲ್ಲಿದ್ದ ಹಳೇ ಒಡಂಬಡಿಕೆ ಎಂಬ ದೇವರ ವಾಕ್ಯಪೂರ್ವಭಾಗವು ಕ್ರಿಸ್ತ ಶಕದ ಮುಂಚಿನ ೨೭೭ನೇ ವರುಷದಲ್ಲಿ ಯವನರ ಭಾಷಾಂತರ ಮಾಡಲಾಯಿತು. ೧೦೭ ವರುಷಗಳ ಈಚೆ ಸುರಿಯ ದೇಶದ ಅರಸನು ಯೆರೂಸಲೇಮೊಳಗೆ ಹೊಕ್ಕು,



ಸುರಿಯ (ಶಾಮ್) ದೇಶದ ರಾಜಧಾನಿಯಾದ ದಮಸ್ಕು ಪಟ್ಟಣದ ಒಂದು ಪಾಲು.

ಬಹಳ ಪ್ರಜೆ ಕೊಂದು, ದೇವಾಲಯವನ್ನು ಅಶುದ್ಧ ಮಾಡಿದನು. ೩೨ ವರುಷಗಳ ಮೇಲೆ ಯಹೂದಿಯರು ಸುರಿಯ ದೇಶದ ಅಧಿಕಾರದಿಂದ ಬಿಡಿಸಿ ಕೊಂಡು, ೭೪ ವರುಷ ತಾವೇ ಆಳಿ ಕೊಂಡು, ತದನಂತರ ರೂಮಿಯವರ ವಶದವರಾದರು. ಹ್ಯಾಗಂಡ ಮಕಬೇಯ ವಂಶದವರಾದ ಇಬ್ಬರು ಸಹೋದರರು ರಾಜಪಟ್ಟಕ್ಕಾಗಿ ಜಗಳಾಡುವಾಗ ರೂಮಿ ಸೇನಾನಾಯಕನು ಸಂಧಾನ ಮಾಡುವ ನೆವದಿಂದ ಯೇಸು ಕ್ರಿಸ್ತನ ಮುಂಚಿನ ೬೪ನೇ ವರುಷದಲ್ಲಿ ಬಂದು, ಪಟ್ಟಣ ದೇವಾಲಯಗಳನ್ನು ಸಾಧಿಸಿ ಕೊಂಡನು. ಅವನು ಅದರೊಳಗೆ ಪ್ರವೇಶಿಸಿ, ವಿಗ್ರಹಗಳಿಲ್ಲದ್ದನ್ನು ಕಾಣಲಾಗಿ ಬಹು ಆಶ್ಚರ್ಯ ಪಟ್ಟನು. ರೂಮಿಯರು ಪರದೇಶಿಯಾದ ಹೆರೋದನಿಗೆ ರಾಜಪಟ್ಟ ಕಟ್ಟಿದರು. ಇವನು ಘೋರ ಅನ್ಯಾಯದಿಂದ ೩೪ ವರುಷ ಆಳಿದ ಬಳಿಕ ಯೇಸು ಕ್ರಿಸ್ತನು ಅವತಾರ ತಾಳಿ ಬಂದನು. ಹೆರೋದನು ಇನ್ನೂ ೪ ವರುಷ ದೇಶಪಾಲಕನಾಗಿದ್ದ ಮೇಲೆ, ಮೈ ಹುಳ ತಿಂದು, ಸತ್ತಾಗ ಅವನ ಮಕ್ಕಳು ಸ್ವಲ್ಪ ವರುಷ ಕ್ರೂರವಾಗಿ ಆಳಿದರು. ಯಹೂದಿ, ಸಮಾರ್ಯ ನಾಡು ಆಳಿದವನ ಚಾಕರಿಯನ್ನು ರೂಮಿಯರು, ಅವನಿಗೆ ಬೇಸತ್ತು, ೬ ವರುಷದ ಮೇಲೆ ತೆಗೆದು, ತಾವೇ ಆ ನಾಡುಗಳ ಅಧಿಕಾರ ನಡಿಸುವವರಾಗಿ, ಕ್ರಿಸ್ತಶಕದ ೨೬ನೇ ವರುಷದಲ್ಲಿ ಪೊಂತಿಪಿಲಾತನನ್ನು ಪ್ರತಿನಿಧಿಯಾಗಿ ನೇಮಿಸಿದರು. ಅವನು ಅವರ ಐದನೇ ಪ್ರತಿನಿಧಿಯಾಗಿದ್ದನು. ಇವನ ಕಾಲದೊಳಗೆ ಯೇಸು ಕ್ರಿಸ್ತನು ಯಹೂದ್ಯರಿಂದ ಕ್ರೂಜೆಯ ಮರಣ ಹೊಂದಿ, ಪರಲೋಕಕ್ಕೆ ಎತ್ತಲ್ಪಟ್ಟನು.

ಕ್ರಿಸ್ತಶಕದ ೩೭ನೇ ವರುಷದಲ್ಲಿ ಹೆರೋದನ ಮೊಂಮಕ್ಕಳಲ್ಲಿ ಒಬ್ಬನಾದ ಹೆರೋದ ಅಗ್ರಿಪ್ಪನು ರೂಮಿಯರಿಂದ ಯಹೂದ ದೇಶದ ಅಧಿಪತ್ಯ ಪಡಕೊಂಡು,

ಬಹು ಗರ್ವ ತಾಳಿ, ಫಕ್ಕನೆ ಕೈಸರಿಯ ಪಟ್ಟಣದಲ್ಲಿ ೭ ವರುಷದ ಮೇಲೆ ಸತ್ತನು. ಕ್ರಿಸ್ತಶಕದ ೭೦ನೇ ವರುಷದಲ್ಲಿ ಯಹೂದ್ಯರು ಕಲಹ ತೆಗೆಯಲಾಗಿ ತೀತನೆಂಬ ರೂಮಿ ಸೇನಾಪತಿ ಬಂದು, ಯೆರೂಸಲೇಮು ಹಾಳು ಮಾಡಿ, ಕ್ರಿಸ್ತನು ಮುಂತಿಳಿಸಿದ ಹಾಗೆ ಯಹೂದ್ಯರನ್ನು ನಾಲ್ಕು ದಿಕ್ಕಿಗೆ ಚದರಿಸಿ ಬಿಟ್ಟನು.




ರೂಮಿಯರು ಯಹೂದಿ ದೇಶವನ್ನು ಸ್ವತಂತ್ರಿಸಿ ಕೊಂಡ ಬಳಿಕ ಛಾಪಿಸಿದ ನಾಣ್ಯದ ಎರಡು ಕಡೆಗಳು. ದುಃಖ ಪಡುವ ಆ ದೇಶವು ಸ್ತ್ರೀಯಾಕಾರವಾಗಿ ಒಂದು ಖರ್ಜೂರಮರದಡಿಯಲ್ಲಿ ಕೂತು ಕೊಂಡಿದ್ದಾಳೆ. ಆ ಬರಹವು "ಜಯಿಸಲ್ಪಟ್ಟ ಯಹೂದಿ ದೇಶ„ ಎಂಬರ್ಥದ್ದು.

## 55. EUROPE

# ೫೫. ಯೂರೋಪು ಖಂಡವು

## (ವಿಲಾಯತಿ)

"ಅತುಲ ಕೀರ್ತಿಯು ಧನವು ತೀವಿದ,
ಮತಿಯು ಯುಕ್ತಿಯು ಘನದ ವಿದ್ಯೆಯು
ವಿತತ ಮಾನವರಾಗಿ ಯೂರೋಪಿಯರು ಹೊಳೆಯುವರೂ.||
ಮಿತಿಯ ಕಾಣದ ಸಾಹಸಂಗಳ,
ನುತಿಯ ಪಡೆಯುವ ಹಾಗೆ, ಸಾಗಿಸಿ,

ಪತಿಗಳಾಗಿಹರಿಳೆಯನಾಳುತಲೆಲ್ಲ ದಿಕ್ಕಿನಲೀ. || ೧||
ಭಕುತಿಬಲವೆಲೆಯುದಕೆ ಮೂಲವು;
ಶಕುತಿಯುಳ್ಳವರಾದರದರಿಂ.
ಸಕಲವೊದುಗುವದಮಲ ದೇವರ ವಿಮಲ ಭಜನೆಯಲೀ. ||
ಸುಕರವಾಗೀಗೆಸೆವರವರು ಕು—
ಹಕರ ಬುದ್ಧಿಯ ತೆಗದು, ಸೊಕ್ಕಲು,—
ಮುಕುಟವಧಿಕಾರಾದಿ ದೊಡ್ಡಸ್—
ತಿಕೆಯು ಪೋಪುದು, ದೂಳು ತಿಂಬರು ದೇವಕೋಪದೊಳೂ,,. || ೨||



ಇತಲಿ ದೇಶದ ಸೂರ್ಯೋದಯ.

ಅಸ್ತ್ರಾಲ್ಯದ ಹಾರ್ತು ಯೂರೋಪು ಬೇರೆ ಖಂಡಗಳಿಗಿಂತ ಬಹಳ ಸಣ್ಣದಾಗಿದ್ದಾಗ್ಯೂ ನೆಲಪ್ರಮಾಣ ನೋಡಿದರೆ ಜನಸಂಖ್ಯೆಯಲ್ಲಿ ಹೆಚ್ಚಿನವಾಗಿದೆ.

ಯೂರೋಪಿನ ದಕ್ಷಿಣ ಪ್ರದೇಶಗಳು ತಕ್ಕಷ್ಟು ಉಷ್ಣವಾಗಿರುವದರಿಂದ ಚತ್ತ್ರದ ಪೈರು, ಕಿತ್ತ್ರಲೆಹಣ್ಣು, ಕಬ್ಬು ಮೊದಲಾದ ಫಲಗಳು ಬೆಳೆಯುತ್ತವೆ. ತುರ್ಕಿ, ಯವನ (ಗ್ರೀಕ), ಇತಲಿ, ಹಿಸ್ಪಾನಿ, ಪುರ್ತುಕಾಲಿ ದೇಶಗಳಲ್ಲಿ ಮುಖ್ಯವಾಗಿ ಆ ಪೈರು ಆಗುವದು. ಈ ದೇಶಗಳಲ್ಲಿರುವವರು ಛಾಯೆ ಛಾಯೆಯಿಂದ ಬಿಳುಪಾಗಿರುತ್ತಾರೆ, ಅವರ ಕೂದಲು ಕಪ್ಪಾಗಿರುವದು; ಅವರಿಗೂ ಬಡಗ ವಿಲಾಯತಿಯವರಿಗೂ ಇರುವ ಭೇದವಿದೇ.

ವಿಲಾಯತಿಯ ಮಧ್ಯಮಶೀತಪ್ರದೇಶಗಳಲ್ಲಿ ಮೇಲೆ ಹೇಳಿದ ಫಲೋತ್ಪತ್ತಿ ಆಗದಿದ್ದಾಗ್ಯೂ ಅನೇಕ ತರದ ಗೋಧಿಯೂ ಹಿಂದು ಜನರರಿಯದ ಇತ್ಯಾದಿ ಬಗೆ ಬಗೆಯ ಧಾನ್ಯವೂ ನಾನಾ ವಿಧ ಜಾತೀ ಪಲ್ಯವೂ ಶ್ರೇಷ್ಠ ವೃಕ್ಷಫಲಗಳೂ ಆಗುವವು. ಹೆಸರು ಹೇಳಿದರೂ ವಿವರಿಸಲಿಕ್ಕೆ ಪ್ರಯತ್ನ ಪಟ್ಟರೂ ಹಿಂದು ಹುಡುಗರಿಗೆ ಚಂದಾಗಿ ತಿಳಿಯ ಕೂಡದ್ದರಿಂದ, ಹಾಗಿ ನೋಡಿರೆಂದು ಮಾತ್ರ ಹೇಳ ಬೇಕು. ಮಧ್ಯಮಶೀತಪ್ರದೇಶಗಳಿಗೆ ಹೆಚ್ಚು ಕಡಿಮೆಯಾಗಿ ಕೂಡಿದವು ಯಾವವು ಅಂದರೆ: ಆಸ್ತ್ರಿಯ, ಪ್ರುಸ್ಸಿಯ ಇತ್ಯಾದಿ ಜರ್ಮನಿ ದೇಶಗಳು, ಹಾಲ್ಲಾಂಡು, ಬೆಲ್ಜಿಯ, ಫ್ರಾಂಚು, ಇಂಗ್ಲಾಂಡು, ಸ್ಕಾತ್ಲಾಂಡು. ಇವೆರಡು ಕೂಡಿ, ಒಂದು ದ್ವೀಪವಾಗಿವೆ; ಐರ್ಲಾಂಡು ಒಂದು ಪ್ರತ್ಯೇಕ ದ್ವೀಪವಾಗಿ ಅವುಗಳ ಹತ್ತರ ಪಶ್ಚಿಮದಲ್ಲಿ ಅದೆ.

ಯೂರೋಪು ಖಂಡದಲ್ಲಿ ಬಹಳ ಪರ್ವತಗಳು ಸಾಲುಸಾಲಾಗಿರುತ್ತವೆ. ಅವುಗಳಲ್ಲಿ ಅಲ್ಪುಗಳು ಬಹಳ ಉದ್ದವಾಗಿವೆ. ಇವುಗಳಲ್ಲಿ ಧವಳಗಿರಿ (ಮೌಂಟ್ ಬ್ಲಂಕ್) ಎಂಬದು ೧೫೦೦೦ ಅಡಿ ಎತ್ತರವಾಗಿ ಶೋಭಿಸುತ್ತದೆ.

ಯೂರೋಪು ಖಂಡದ ಪೂರ್ವೋತ್ತರ ಭಾಗದಲ್ಲಿ ರುಸ್ಸಿಯ ದೇಶವದೆ. ಇದು ಆ ಖಂಡದ ಮಿಕ್ಕ ದೇಶಗಳಿಗಿಂತ ದೊಡ್ಡದಾಗಿರುವದರಿಂದ ಅಲ್ಲಿ ಅತಿಶೀತ, ಶೀತ, ಮಧ್ಯಮಶೀತ, ಉಷ್ಣಪ್ರದೇಶಗಳು ಅವೆ. ಅತಿಶೀತಪ್ರದೇಶಗಳು ಉತ್ತರದವು. ಅಲ್ಲಿ ಧಳಿಗೆ ಪೈರಾಗ ಕೂಡದು, ದನಾದಿಗಳಿಗೆ ಮೇವು ಶಿಕ್ಕುವದಿಲ್ಲ, ಒಂದು ಜಾತೀ ಮೆಗ ಮಾತ್ರ ಅಲ್ಲಿಯವರಿಗೆ ಮನೆಪಶುವಾಗಿರುವದು; ಇದರ ಹಾಲಿನಿಂದಲೂ ಬೇಟೆಯಿಂದಲೂ ಮೀನಿನಿಂದಲೂ ಅವರು ಬದುಕುವರು; ಅವರ ಮನೆಗಳು ಭೂಮಿಯೊಳಗೆ ಅವೆ.

ಶೀತಪ್ರದೇಶಗಳು ನಡುಭಾಗದಲ್ಲಿ ಅವೆ. ಅದು ಒಂದು ವಿಸ್ತಾರವಾದ ಬೈಲು; ಕಾಡು, ಸರೋವರ, ನೀರುಭಾಗಗಳು ಅದರಲ್ಲಿ ಬಹಳ. ಪೀತರ್ಸ್ಬುರ್ಘ ಎಂಬ ರುಸ್ಸಿಯದ ರಾಜಧಾನಿ ಅವರಲ್ಲಿಯೇ. ಅದರ ಹತ್ತರ ಫಲವೃಕ್ಷಗಳು ಚಂದಾಗಿ ಬೆಳಿಯುವದಿಲ್ಲ, ಒಂದು ಜಾತೀ ಜವೆಗೋಧಿಯಲ್ಲದೆ ಬೇರೆ ಧಾನ್ಯವಾಗುವದಿಲ್ಲ.



ಅತಿ ಶೀತಪ್ರದೇಶಗಳಲ್ಲಿ ಬಿಳೇ ಕರಡಿ (ಹಿಮಕರಡಿ) ಬದುಕುತ್ತದೆ. ಅಂಥಾದು ಈ ಚಿತ್ರದಲ್ಲಿ ಒಬ್ಬ ನಾವಿಕನ ಮೇಲೆ ಬೀಳುವದು ಕಾಣುತ್ತದೆ. ಆ ನಾವಿಕನು ಜತೆಯವರಿಂದ ರಕ್ಷಣೆ ಹೊಂದಿದನು.

ಅದರ ಬಳಿಯ ನದೀ ನೀರು ವರುಷಕ್ಕೆ ೬ ಮಾಸ ಥಳಿಯಿಂದ ಗಡ್ಡೆ ಕಟ್ಟಿರುವದು; ಸಮುದ್ರದ ನೀರು ಸಹಾ ಗಡ್ಡೆ ಕಟ್ಟಿ, ಕೆಲವು ತಿಂಗಳು ಅದರ ಬಂದರಸ್ಥಳ ಮುಚ್ಚುವದು.

ಆ ಮೇಲೆ ದಕ್ಷಿಣದಲ್ಲಿ ಮಧ್ಯಮಶೀತಪ್ರದೇಶಗಳು ಅವೆ. ಅಲ್ಲಿ ಉತ್ಕೃಷ್ಟ ಭೂಮಿ; ಧಾನ್ಯದ ಪೈರು ಹೇರಳ. ಹೆಚ್ಚು ತೆಂಕಲಲ್ಲಿ ವಿಸ್ತಾರವಾದ, ಅಡವಿಯುಳ್ಳ ಬೈಲುಗಳಿದ್ದು, ಸ್ತೆಪ್ಪೆಗಳೆಂಬ ಹೆಸರಿನಿಂದ ಖ್ಯಾತಿ ಹೊಂದಿದ್ದಾವೆ. ಅವುಗಳಲ್ಲಿ ದನ, ಕುದುರೆ, ಕುರಿಗಳ ಹಿಂಡುಗಳು ಬೇಸಿಗೆಗಾಲದಲ್ಲಿ ಮೇಯುತ್ತಿರುವವು; ಆವಾಗ ಬಿಸಿಲು ಹೆಚ್ಚಾಗಿ, ಬಹಳ ಸರ್ತಿ ಹುಲ್ಲು ಬೆಂದು, ನೀರು ಬತ್ತಿ, ಸಂಕಟವಾಗುವದು. ಥಳಿಗಾಲದ ಘಾಳಿ ಅತಿ ತೀಕ್ಷ್ಣವಾಗಿ ಆ ಬೈಲುಗಳಲ್ಲಿ ಹಾದು ಬರುವದರಿಂದ ಅನೇಕರು ಅದರ ಕಾಟಕ್ಕಂಜಿ, ಮನೆಯನ್ನು ಭೂಮಿಯೊಳಗೆ ಮಾಡಿ ಕೊಳ್ಳುವರು; ಅಂದು ಮೂರು ತಿಂಗಳು ಹಿಮ ಬೀಳುತ್ತಿರುವದು.

ಹೆಚ್ಚು ತೆಂಕಲಲ್ಲಿರುವ ಉಷ್ಣಪ್ರದೇಶಗಳಲ್ಲಿ ಹತ್ತಿ, ಕಬ್ಬು ಇತ್ಯಾದಿ ಆಗುವದು; ಆದರೂ ಥಳಿಗಾಲದಲ್ಲಿ ಅತಿಶೀತಘಾಳಿಯೂ ಹಿಮವೂ ತಪ್ಪುವದಿಲ್ಲ.

ರುಸ್ಸಿಯದ ಪಶ್ಚಿಮದಲ್ಲಿ, ಕಾಲುನಡೆಯಾಗಿ ಅಲ್ಲಿಂದ ಹೋಗ ಬಹುದಾದ, ನಾರ್ವೇ, ಸ್ವೀಡನ್ ಎಂಬ ಎರಡು ದೇಶಗಳು ಒಂದು ಅರ್ಧ ದ್ವೀಪವಾಗಿ ಅವೆ.

ನಾರ್ವೇಯಲ್ಲಿ ಉದ್ದಕ್ಕೆ ಒಂದು ಪರ್ವತಾವಳಿ ಅದೆ. ಎರಡು ದೇಶಗಳ ಮುಖ್ಯ ಉತ್ಪತ್ತಿಯು ಕಟ್ಟಲಿಕ್ಕೆ ಒಳ್ಳೇ ಮರಗಳು; ಅದಲ್ಲದೆ ಅತ್ಯುತ್ತಮ ಕಬ್ಬಿಣ ಶಿಕ್ಕುತ್ತದೆ. ದಕ್ಷಿಣ ಪ್ರದೇಶಗಳಲ್ಲಿ ಸ್ವಲ್ಪ ಗೋಧಿ ಮೊದಲಾದ ಧಾನ್ಯಗಳ ಬೆಳೆಯಾಗುವದು; ಉತ್ತರಕ್ಕೆ ದನ ಇತ್ಯಾದಿ ಮೇಯಿಸುವದಕ್ಕೆ ಅಡಿವೆ ಅದೆ, ಆದರೆ ಅಲ್ಲಿ ಜನರು ಸ್ವಲ್ಪ.

ಲಪ್ಲಾಂಡು ಎಂಬದು ಯೂರೋಪಿನಲ್ಲಿ ಅಧಿಕ ಉತ್ತರದ ಶೀಮೆ; ಅದು ರುಸ್ಸಿಯರದು. ಅಲ್ಲಿ ವರುಷಕ್ಕೊಮ್ಮೆ ಗ್ರೀಷ್ಮಕಾಲದಲ್ಲಿ ಸುಮಾರು ೨ತ್ತಿ ತಿಂಗಳು ಸೂರ್ಯ ಮುಳುಗುವದಿಲ್ಲ, ಒಮ್ಮೆ ಶೀತಕಾಲದಲ್ಲಿ ೨ತ್ತಿ ತಿಂಗಳು ಮೂಡುವದಿಲ್ಲ; ನಡುವೆ ಸೂರ್ಯನು ಆಕಾಶದಲ್ಲಿ ಸ್ವಲ್ಪ ಮಾತ್ರ ಏರುವದು. ದೊಡ್ಡ ರಾತ್ರೀ ವೇಳೆಯಲ್ಲಿ ಉತ್ತರ ಪ್ರಕಾಶವೆಂಬದು ತೋರುತ್ತಿರುವದು, ಮತ್ತು ನಕ್ಷತ್ರಗಳು ಅತಿ ಮಹಿಮೋರೀತಿಯಾಗಿ ಎಸೆಯುವವು.

ಇಂಥ ಉತ್ತರ ಶೀಮೆಗಳಲ್ಲಿ ಛಳಿ ಬಹಳ ತೀಕ್ಷ್ಣವಾದದ್ದು; ಆದರೆ ಉಷ್ಣವಾಗುವದಿಲ್ಲವೆಂತ, ನೆನಸ ಬೇಡ. ಬೇಸಿಗೆಗಾಲದಲ್ಲಿ ಸೂರ್ಯನು ಅನೇಕ ದಿವಸ ಮೂಡಿರುವಂದು, ಉಷ್ಣವು ಆರುವದಕ್ಕೆ ರಾತ್ರಿ ಇಲ್ಲದೆ, ಅದು ಬಹಳವಾಗುವದು; ಆ ಸಮಯ ಬೆಳೆಯಲಾಗುವಂಥಾದ್ದು ಬೇಗ ಬೇಗ ಬೆಳೆಯುವದು; ಲಂಡನ್ ಪಟ್ಟಣಕ್ಕೆ ಸುಮಾರು ೧೩೮೦ ಮೈಲು ಉತ್ತರದಲ್ಲಿ ಬಿತ್ತಿದ ಜವೆಗೋಧಿ ೭ ವಾರದೊಳಗೆ ಬೆಳದು ಮಾಗಿತು; ಅದೇ ಜವೆಗೋಧಿ ಲಂಡನ್ ಪಟ್ಟಣದ ಹತ್ತರದ ಹೊಲದಲ್ಲಿ ಬೆಳೆದು ಕಾಯ್ಯಲಿಕ್ಕೆ ಬರುವದಕ್ಕೆ ೨೮ ವಾರಗಳು ಬೇಕಾಗುವವು. ಈ ಧಾನ್ಯದ ವಿಷಯವಾಗಿ ಹೇಳಿದ್ದು ಎಲ್ಲಾ ಉದ್ಭಿಜ್ಜಗಳಿಗೆ ಸರಿ ಬೀಳುತ್ತದೆ; ಸ್ವಲ್ಪ ದಿವಸಗಳ ಅತಿ ಉತ್ತರ ದಿಕ್ಕಿನ ಬೇಸಿಗೆಗಾಲದಲ್ಲಿ ಅವು ಆರು ವಾರದೊಳಗೆ ಮೊಳತು, ಅರಳಿ, ಬೀಜ ಬಂದು, ಸಾಯುತ್ತವೆ.

ಯೂರೋಪು ಖಂಡದ ಜನರು ಕ್ರೈಸ್ತ ಮತಸ್ಥರು. ಅವರು ಲೋಕದೊಳಗಣ ಬೇರೆ ದೇಶದವರಿಗಿಂತ ವಿಶೇಷ ಪಾಂಡಿತ್ಯ ಉಳ್ಳವರಾಗಿಯೂ ಸಂಪತ್ತುಳ್ಳವರಾಗಿಯೂ ಇದ್ದಾರೆ; ಲೋಕದಲ್ಲಿ ಎಲ್ಲಿಯೂ ಅವರ ಅಧಿಕಾರ ನಡೆಯುತ್ತದೆ. ಯೂರೋಪಿನಲ್ಲಿಯ ತುರ್ಕರು ಮಾತ್ರ ಮುಹಂಮದಿ ಮತವನ್ನು ಅವಲಂಬಿಸಿದ್ದಾರೆ.



## 56. ENGLAND

# ೫೬. ಇಂಗ್ಲಾಂಡು

"ಅಮಲ ಶೋಭಾರಾಜಧಾನಿಯು—
ನಮಿತ ಕೀರ್ತಿಯ ಲಂಡನೆಂದರಿ!
ರಮಣೀತರದ ವಿಚಿತ್ರಗಳೆಸೆವವಲ್ಲಿ ಯಬ್ಬರದೀ.||
ಗಮನಕುಚಿತದ ಪೊಗೆಯ ಗಾಡಿಯು,
ಶಮಿಸದೋಡುತಿಹುಬ್ಬೆಹಡಗವು,
ಸಮತೆಯಿಂದಲಿ ನಿಲ್ವ ಮಂದಿರವೆಷ್ಟೊ ಇಹವಲ್ಲೀ!,,||

"ಗುಲ್ಲುವೆಷ್ಟೆಲೆ, ದಿಕ್ಕುದಿಕ್ಕಿಂ—
ದಲ್ಲಿ ಗೈದಿಹ ವರ್ಣವರ್ಣಗ—
ಳಲ್ಲಿ ತೋರುವ ಮನುಜರೆಷ್ಟೆಲೆ, ಭಾಷೆಯೆಷ್ಟೆಲವೋ!||
ಜಿಲ್ಲೆ ಗೋಪುರವೆಷ್ಟೊ! ಯೆಣಿಕೇ—
ನಿಲ್ಲ ಸೂತ್ರದ ಯಂತ್ರರಾಶಿಗೆ!
ಸೊಲ್ಲಿ ಬಣ್ಣಿಸೊದಾಗದೆಲ್ಲವ; ಹೋಗಿ ನೋಡಿರೆಲೇ!,,||

ಇಂಗ್ಲಾಂಡು ವಿಲಾಯತಿಯ ವಾಯುವ್ಯ ದಿಕ್ಕಿನ ತೀರದ ಆಚೇ ಕಡೆಯಲ್ಲಿರುವ ದ್ವೀಪದ ಒಂದು ಭಾಗ.

ಹಿಂದುಸ್ಥಾನದಿಂದ ಇಂಗ್ಲಾಂಡಿಗೆ ನೆಟ್ಟಗೆ ಹೋಗುವ ಒಂದು ದಾರಿ ಇದ್ದದ್ದಾದರೆ, ಅದು ೪೨೦೦ ಮೈಲ್, ಅಂದರೆ ೧೪೦೦ ಹರದಾರಿ, ಉದ್ದವಾಗಿ, ಉಳಿದ ಮಾರ್ಗಗಳಿಗಿಂತ ಸಮೀಪವಾಗಿರುವದು; ಆದರೆ ಅಂಥ ದಾರಿ ಈಗ ಇರದು; ಯಾಕಂದರೆ ಹಾಗೆ ಹೋದರೆ ಬಲು ಕಾಡೂ ಕಾಡುಜನರೂ ಇರುವ ದೇಶಗಳನ್ನು ದಾಟಬೇಕು.

ಈಗ ಇಂಗ್ಲಾಂಡಿಗೆ ಹೋಗಲಿಕ್ಕೆ ಮಾರ್ಗಗಳು ಎರಡು. ಒಂದು ಇಲ್ಲಿ ಸಮುದ್ರದಲ್ಲಿ ಅಲ್ಲಿ ನೆಲದಲ್ಲಿ ಇದ್ದು, ಸುಮಾರು ೬೬೦೦ ಮೈಲ್, ಅಂದರೆ ೨೨೦೦ ಹರದಾರಿ ಉದ್ದವಾಗಿದೆ. ಮೊದಲು ಮುಂಬೈಗೆ ಹೋಗಿ, ಅಲ್ಲಿ ಆವೀ ಹಡಗವೇರುವದು; ಇದು ಬೇರೆ ಹಡಗಗಳಿಗಿಂತ ಬೇಗ ನಡಿಯುತ್ತದೆ, ಒಳ್ಳೇ ಘಾಳಿ ಇರುವಾಗ ಮಾತ್ರವಲ್ಲ, ಎದುರು ಘಾಳಿ ಇದ್ದರೂ ಘಾಳಿ ಏನೂ ಇಲ್ಲದಿದ್ದರೂ ಹೋಗುತ್ತದೆ. ಆವೀ ಹಡಗವು ಹ್ಯಾಗಾದರೂ ದಿವಸಕ್ಕೆ ೬೦ ಹರದಾರಿ ನಡಿಯದೆ ಇರದು.





GATEWAY OF THE VICTORIA TOWER IN THE HOUSE OF LORDS
ಪ್ರಭುಗಳ ಸಭಾಮಂದಿರದ ವಿಕ್ಟೋರಿಯಳ ಗೋಪುರವೆಂಬ ಗೋಪುರದ ಬಾಗಿಲು



INTERIOR OF THE HOUSE OF LORDS ಇಂಗ್ಲಿಷ ಪ್ರಭುಗಳ ಸಭಾಮಂದಿರ

ಮುಂಬೈಯಿಂದ ಅರಬಿಸ್ಥಾನದ ನೈರುತ್ಯದಲ್ಲಿ ಇಂಗ್ಲಿಷ ಬಂದ್ರವಾಗಿರುವ ಅದನ್ ಎಂಬಲ್ಲಿಗೆ ಹೋಗ ಬೇಕು. ಇಲ್ಲಿಂದ ಅರಬಿಸ್ಥಾನದ ಪಶ್ಚಿಮ ಕರೆಯನ್ನೇ ಹಿಡಿದು, ಕೆಂಪುಸಮುದ್ರದ ಬಡಗ ತುದಿಯಲ್ಲಿ ಸಣ್ಣ ಮಿಸ್ರಿ ಬಂದ್ರವಾಗಿರುವ ಸೂವೆಜ್ ಎಂಬಲ್ಲಿಗೆ ಮುಟ್ಟುವದು. ಸೂವೆಜಿನಲ್ಲಿ ಹೊಗೆಬಂಡಿಯ ಹತ್ತಿ, ಉಸುಬಿನ ಬೈಲು ದಾಟಿ, ಮಿಸ್ರ ದೇಶದ ರಾಜಧಾನಿಯಾದ ಕಾಹಿರು ಪಟ್ಟಣಕ್ಕೆ ಹೋಗಿ, ಅಲ್ಲಿಂದ ಅತ್ಲಾಗಿನ ತೀರದಲ್ಲಿ ಮಿಸ್ರಿ ಬಂದ್ರವಾಗಿರುವ ಸಿಕಂದರಿಯವನ್ನೈದ ಬೇಕು. ಸೂವೆಜಿನಿಂದ ಸಿಕಂದರಿಯಕ್ಕೆ ೧೫೦ ಮೈಲ್ ಅಂದರೆ ೫೦ ಹರದಾರಿಗಿಂತ ಹೆಚ್ಚು ಇದ್ದರೂ ೧೦ ತಾಸು ಸಾಕು. ಸಿಕಂದರಿಯದಲ್ಲಿ ಒಂದು ಆವೀ ಹಡಗವೇರಿ, ಭೂಮಧ್ಯಸಮುದ್ರಮಾರ್ಗವಾಗಿ ವಿಲಾಯತಿಯ ನೈರುತ್ಯ ತೀರದ ಕರೆ ಹಿಡಿದು, ಇಂಗ್ಲಾಂಡಿಗೆ ಹೋಗ ಬೇಕು. ಇದಕ್ಕೂ ಸಿಕಂದರಿಯಕ್ಕೂ ೧೫ ದಿವಸದ ಪಯಣ. ಈ ಪ್ರಕಾರ ೬೬೦೦ ಮೈಲ್ ಅಂದರೆ ೨೨೦೦ ಹರದಾರಿ ದೂರವಾಗಿರುವ ಇಡೀ ಮಾರ್ಗಕ್ಕೆ ಸುಮಾರು ಒಂದು ತಿಂಗಳು ಸಾಕಾಗುತ್ತದೆ.

ಇದರ ಹೊರ್ತು ಮತ್ತೊಂದು ಮಾರ್ಗವುಂಟು. ಅದು ಸಮುದ್ರದಲ್ಲಿಯೇ ಅಫ್ರಿಕ ಖಂಡದ ಸುತ್ತಲು ಸುಮಾರು ೧೨,೦೦೦ ಮೈಲ್, ಅಂದರೆ ೪೦೦೦ ಹರದಾರಿ, ದೂರವಾಗಿದೆ. ಈ ಪ್ರಯಾಣವನ್ನು ಸಾಧಾರಣ ಹಡಗಗಳಲ್ಲಿ ಮಾಡಿದರೆ ಇಂಗ್ಲಾಂಡಿಗೆ ಹೋಗಲಿಕ್ಕೆ ನಾಲ್ಕು ತಿಂಗಳು ಹಿಡಿದಾವು ಸರಿ, ಆದರೆ ಖರ್ಚು ಸ್ವಲ್ಪ ಹಿಡಿಯುತ್ತದೆ.

ಇಂಗ್ಲಾಂಡು ವಿಲಾಯತಿಯ ವಾಯುವ್ಯ ಕಡೆಯಲ್ಲಿರುವ ದ್ವೀಪದ ಒಂದು ಭಾಗವೆಂತ ಮೊದಲು ಹೇಳಿದೆವು. ಈ ದ್ವೀಪದ ಹೆಸರು ಗ್ರೇಟ್ ಬ್ರಿಟೈನ್ ಎಂಬದು, ಆದರೆ ಒಂದೊಂದು ಸಾರಿ ಅದಕ್ಕೆಲ್ಲಾ ಇಂಗ್ಲಾಂಡೆಂಬ ಹೆಸರೂ ಬರುತ್ತದೆ. ಈ ಸಮಸ್ತ ದ್ವೀಪವು ನಿಜಾಮನ ಕೆಳಗಣ ಹೈದರಾಬಾದು ದೇಶದಷ್ಟು ದೊಡ್ಡದಲ್ಲ, ಮದ್ರಾಸು ಆಧಿಪತ್ಯದ ಅರ್ಧಕ್ಕಿಂತ ಸ್ವಲ್ಪ ದೊಡ್ಡದಾಗಿ, ಮೈಸೂರು ಶೀಮೆಗಿಂತ ಮೂರಷ್ಟು ದೊಡ್ಡದಾಗಿ, ಕನ್ನಡ ಜಿಲ್ಲೆಗಿಂತ ಹನ್ನೊಂದಷ್ಟು ದೊಡ್ಡದಾಗಿ ಇದ್ಧೀತು. ಆ ದ್ವೀಪವನ್ನು ಮೂರು ಭಾಗ ಮಾಡುತ್ತಾರೆ. ಇವುಗಳಲ್ಲಿ ದೊಡ್ಡದು ದ್ವೀಪದ ದಕ್ಷಿಣ ಕಡೆಯೂ ಪೂರ್ವ ಕಡೆಯೂ ಅದೆ. ಈ ಭಾಗಕ್ಕೆ ಇಂಗ್ಲಾಂಡೆಂದು ಹೆಸರುಂಟು. ಎರಡನೇ ಭಾಗವು ಇಂಗ್ಲಾಂಡಿನ ಪಶ್ಚಿಮ ಕಡೆಯಲ್ಲಿದೆ; ಇದರ ಹೆಸರು ವೇಲ್ಜ್. ಮೂರನೇದು ಇಂಗ್ಲಾಂಡಿನ ಉತ್ತರದಲ್ಲಿ; ಇದರ ಹೆಸರು ಸ್ಕಾಟ್ಲಾಂಡು.

ಗ್ರೇಟ್ ಬ್ರಿಟ್ಟೆನ್ ದ್ವೀಪದ ಪಶ್ಚಿಮಕ್ಕೆ ಮತ್ತೊಂದು ದೊಡ್ಡ ದ್ವೀಪವಿದ್ದು, ಅದಕ್ಕೆ ಶೇರುತ್ತದೆ; ಆದರೆ ಇದು ಅದರ ಅರ್ಧಕ್ಕಿಂತ ಕಡಿಮೆ. ಇದರ ಹೆಸರು ಐರ್ಲಾಂಡು. ಎರಡು ದ್ವೀಪಗಳ ಮಧ್ಯದಲ್ಲಿ ಸಮುದ್ರವು ಒಳ ಶೇರಿ ಅದೆ. ಈ ನಡು ನೀರು ಬಹಳ ಇಕ್ಕಟ್ಟು ಇರುವಲ್ಲಿ ೨೦ ಮೈಲ್, ಅಂದರೆ ಸುಮಾರು ೭ ಹರದಾರಿ ಅಗಲವಾಗಿದೆ. ಐರ್ಲಾಂಡು ಮೈಸೂರು ಶೀಮೆಗಿಂತ ಸ್ವಲ್ಪ ದೊಡ್ಡದಾದೀತು, ಕನ್ನಡ ಜಿಲ್ಲೆಗಿಂತ ನಾಲ್ಕಷ್ಟು ದೊಡ್ಡದಾಗಿದೆ.

ಎರಡು ದ್ವೀಪಗಳೂ ಅವುಗಳ ಸಮೀಪದಲ್ಲಿರುವ ಬೇರೆ ಕೆಲವು ಸಣ್ಣ ದ್ವೀಪಗಳೂ ಕೂಡಿ ಬ್ರಿಟ್ಟಿಷ ದ್ವೀಪಗಳೆಂಬ ಹೆಸರ ಹೊಂದಿ ಅವೆ. ಅವುಗಳ ಕ್ಷೇತ್ರಫಲವು ಮದ್ರಾಸು ಆಧಿಪತ್ಯಕ್ಕಿಂತ ಬಹಳ ಕಡಿಮೆ ಆದರೂ ಅವುಗಳಲ್ಲಿ ಮದ್ರಾಸು ಆಧಿಪತ್ಯಕ್ಕಿಂತ ೫೦ ಲಕ್ಷ ಜನರು ಹೆಚ್ಚು. ಮದ್ರಾಸು ಆಧಿಪತ್ಯವು ೧೩೬೮೭೨ ಚಚ್ಚೌಕ ಮೈಲಾಗಿ, ಅದರಲ್ಲಿ ೨೨೩೨೫೫೦೩ ಜನರು ಇರುತ್ತಾರೆ; ಆದರೆ ಬ್ರಿಟ್ಟಿಷ ದ್ವೀಪಗಳ ಕ್ಷೇತ್ರಫಲವು ೧೧೯೦೭೯ ಚಚ್ಚೌಕ ಮೈಲು ಮಾತ್ರವಾಗಿದ್ದರೂ ಇವುಗಳಲ್ಲಿ ೨೭೪೫೨೨೬೨ ಜನರು ಇದ್ದಾರೆ.

ಬ್ರಿಟ್ಟಿಷರು ಭೂಮಿಯ ಸಮಸ್ತ ದಿಕ್ಕಿನಲ್ಲಿ ತಮ್ಮ ಅಧಿಕಾರವನ್ನು ಸ್ಥಾಪಿಸಿ, ವಿಲಾಯತಿಯಲ್ಲಿಯೂ ಆಸ್ಯದಲ್ಲಿಯೂ ಅಫ್ರಿಕದಲ್ಲಿಯೂ ಅಮೆರಿಕದಲ್ಲಿಯೂ ಔಸ್ತ್ರಾಲ್ಯದಲ್ಲಿಯೂ ಸ್ವಾಸ್ಥ್ಯಗಳನ್ನು ಪಡಕೊಂಡಿದ್ದಾರೆ. ಅವರ ಸಾಮ್ರಾಜ್ಯವು ಹಿಂದು ದೇಶಕ್ಕಿಂತ ಐದಷ್ಟು ಪಾಲು ದೊಡ್ಡದಾಗಿದೆ. ಅದು ೭೫೦೦೦೦೦ ಚಚ್ಚೌಕ ಮೈಲಿನದು, ಅಥವಾ ಭೂಮಿಯ ೭ನೇ ಪಾಲು; ಅದರಲ್ಲಿ ೧೮೦೦೦೦೦೦೦ ಜನರಿದ್ದಾರೆ ಅಥವಾ ಸುಮಾರು ಸಕಲ ಭೂಜನರ ೫ನೇ ಪಾಲು.

ಈ ವಿಸ್ತಾರವಾದ ಮಹಾ ರಾಜ್ಯದ ರಾಜಧಾನಿಯು ಇಂಗ್ಲಾಂಡಿನಲ್ಲಿರುವ ಲಂಡನು ನಗರವೇ. ಅಲ್ಲಿ ವಿಕ್ಟೋರಿಯ ರಾಣಿಯು ನಿವಾಸ ಮಾಡಿ ಕೊಂಡಿದ್ದಾಳೆ. ಲಂಡನು ಲೋಕದ ಎಲ್ಲಾ ಪಟ್ಟಣಗಳಲ್ಲಿ ಅತಿ ದೊಡ್ಡದಾಗಿದೆ. ಈ ಒಂದು ನಗರದಲ್ಲಿ ೨೮ ಲಕ್ಷಕ್ಕಿಂತ ಹೆಚ್ಚು ಜನರು ಇದ್ದಾರೆ. ಹ್ಯಾಗಂದರೆ ಕನ್ನಡ ಮಲೆಯಾಳ ಜಿಲ್ಲೆಗಳ ಜನರೆಲ್ಲರೂ ಒಟ್ಟುಗೂಡಿ ಬಂದು ಮಂಗಳೂರಲ್ಲಿ ನಿವಾಸ ಮಾಡಿದ ಹಾಗೆ ಆಯಿತು.

ಲಂಡನು ಪಟ್ಟಣವು ೧೯೨೦ ವರುಷಗಳ ಹಿಂದೆ ಕಾಡಿನೊಳಗೆ ಒಂದು ಚಿಕ್ಕ ಹಳ್ಳಿಯಾಗಿತ್ತು; ೨೦೦ ವರುಷಗಳ ಹಿಂದೆ ಅದು ಬೆಳೆದು, ಅದರಲ್ಲಿ ೫೦೦೦೦೦ ಪ್ರಜೆಗಳು ಶೇರಿ ಇದ್ದರು. ಈಗ ಅದರ ಒಂದೊಂದು ಕಡೆಯು ೧೧ ಮೈಲಿನದಾಗಿ, ಅದರೊಳಗೆ ೧೨೦ ಚಚ್ಚೌಕ ಮೈಲು ಅವೆ; ಅದರಲ್ಲಿ ೫೦೦ ದೊಡ್ಡ ಬೀದಿಗಳವೆ;

ಅದರ ಮನೆಗಳನ್ನೆಲ್ಲಾ ಒಂದೇ ಸಾಲಾಗಿ ಇಟ್ಟರೆ ಅದು ಕಂನ್ಯಾಕುಮಾರಿಯಿಂದ ಕಲ್ಕತ್ತೆ ಪಟ್ಟಣದ ವರೆಗೆ ಹೋದೀತು. ಆ ಪಟ್ಟಣದಲ್ಲಿ ಪ್ರತಿವಾರಕ್ಕೆ ಸುಮಾರು ೧೭೦೦ ಜನರು ಹುಟ್ಟುತ್ತಾರೆ, ೧೨೦೦ ಜನರು ಸಾಯುತ್ತಾರೆ. ಅದರಲ್ಲಿ ೨೩೫೧೭ ದರ್ಜಿಗಳು, ೭೫೦೦ ರೊಟ್ಟಿಗಾರರು, ೨೫೭೪ ವೈದ್ಯರು, ೭೦೦೦ ನ್ಯಾಯಶಾಸ್ತ್ರಿಗಳು, ೪೦೦೦ ದೇವವಾಕ್ಯಬೋಧಕರು ಇದ್ದಾರು; ಅದಲ್ಲದೆ ಅದರಲ್ಲಿ ೭೬೪ ದೇವಾಲಯಗಳು, ೪೯೧ ಧರ್ಮಶಾಲೆಗಳು ಇದ್ದಾವು; ಟಪ್ಪಾಲಿಗೆ ಹಾಕುವ ಕಾಗದಗಳು ೫೯೩೦೦೦೦೦೦ ಆದಾವು; ಬೀದಿಗಳಲ್ಲಿ ರಾತ್ರಿ ಒಂದಕ್ಕೆ ೩೬೦೦೦೦ ದೀಪಗಳು ಜನೋಪಕಾರಕ್ಕೆ ಉರಿದಾವು.

ಸ್ಕೋತ್ಲಾಂಡಿನ ಮುಖ್ಯ ಪಟ್ಟಣವು ಎಡಿನ್ಬರ್ಗ್, ಮತ್ತು ಐರ್ಲಾಂಡಿನದು ಡಬ್ಲಿನು.

ಇಂಗ್ಲಾಂಡು ಹಿಂದು ದೇಶದ ಹಾಗೆ ಉಷ್ಣ ದೇಶವಲ್ಲ. ಅಲ್ಲಿ ಬೇಸಿಗೇ ಕಾಲದಲ್ಲಿ ಇಲ್ಲಿಯ ಛಳೀ ಕಾಲದಲ್ಲಿ ಆಗುವಷ್ಟು ಶೆಖೆ ಆದರೆ ಬಹಳವಾಯಿತು. ಅಲ್ಲಿ ಬೇಸಿಗೇ ಕಾಲದಲ್ಲಿ ಮಳೆ ಬರುತ್ತಾ ಬರುತ್ತಾ ಇರುವಾಗ ಹೊಲಗಳೆಲ್ಲಾ ಹಸುರಾಗುತ್ತವೆ; ಶೀತಕಾಲದಲ್ಲಿ ಮರಗಳ ಎಲೆಗಳೆಲ್ಲಾ ಬಿದ್ದು ಹೋಗುತ್ತವೆ; ಆಗ ಛಳಿಯು ವಿಪರೀತವಾಗಿರಲಾಗಿ, ನೀರು ಗಡ್ಡೆ ಕಟ್ಟುತ್ತದೆ. ಕೆರೆಗಳಲ್ಲಿಯೂ ಹೊಳೆಗಳಲ್ಲಿಯೂ ಇರುವ ನೀರು ಗಡ್ಡೆಯಾಗಿ ಹೋಗಿರುವಂದು ನಯವಾದ ನೆಲದ ಮೇಲೆ ಹ್ಯಾಗೋ ಹಾಗೆಯೇ ಜನರು ಅದರ ಮೇಲೆ ನಡಿಯ ಬಹುದು. ಅನೇಕರು ತಮ್ಮ ಕಾಲಿಗೆ ಒಂದು ತರದ ಕಬ್ಬಿಣಪಟ್ಟಿ ಕಟ್ಟಿ ಕೊಂಡು, ಅದರಿಂದ ಆ ನುಣುಪಾದ ಗಡ್ಡೀ ದಾರಿಯಲ್ಲಿ ಕುದುರೆಯಷ್ಟು ವೇಗವಾಗಿ ಸರಿಸಿ ಕೊಂಡು ನಡೆಯುತ್ತಾರೆ. ವಾಯು ಸಹ ಬಹಳ ಛಳಿಯಾಗಿರುವದರಿಂದ ಮಳೆಯು ಕೆಳಗೆ ಬೀಳುವ ಮೊದಲೇ ಹಿಮವಾಗುತ್ತದೆ. ಹಿಮವು ಬಿದ್ದರೆ ಅದು ಹೊಲ ಹಿತ್ಲು ಮರ ಮನೆ ಮಾಡುಗಳನ್ನೆಲ್ಲಾ ಮುಚ್ಚಿ ಕೊಳ್ಳುತ್ತದೆ. ಆಗ್ಯೆ ಅದು ನೋಡಲಿಕ್ಕೆ ಬಹಳ ಬೆಳ್ಳಗಾದ ಹತ್ತಿ ಹಾಸಿದ ಹಾಗೆ ಇರುತ್ತದೆ. ಇಂಗ್ಲಾಂಡಿನ ಹುಡುಗರು ಹಿಮದಲ್ಲಿ ಆಡುವದಕ್ಕೆ ಮೆಚ್ಚಿ, ಅದನ್ನು ಒತ್ತಿ ಉಂಡೆಗಳನ್ನು ಮಾಡಿ, ಒಬ್ಬರಿಗೊಬ್ಬರು ಹೊಡ ಕೊಳ್ಳುತ್ತಾರೆ. ವಾಯು ತಿರಿಗಿ ಸ್ವಲ್ಪ ಕಾವಾದ ಮೇಲೆ ಹಿಮವೂ ನೀರುಗಡ್ಡೆಯೂ ಕರಗಿ ನೀರಾಗುತ್ತದೆ.

ಇಂಗ್ಲಿಷರ ಆಹಾರವು ಮುಖ್ಯವಾಗಿ ಗೋಧಿಯ ರೊಟ್ಟಿ, ಹಿರೇ ಮಾಂಸ, ಕುರೀ ಮಾಂಸ, ಮೀನು, ಇದೇ. ಅಕ್ಕಿ ಅಲ್ಲಿ ಬೆಳಿಯುವದಿಲ್ಲ, ಅದೇ ಪ್ರಕಾರ ತೆಂಗಿನ ಕಾಯಿಯೂ ಬಾಳೇ ಹಣ್ಣೂ ಮಾವಿನ ಹಣ್ಣೂ ಆಗುವದಿಲ್ಲಾ; ಆದರೆ ಗೋಧಿ

ಯೂ ಬೇರೆ ಬೇರೆ ಧಾನ್ಯಗಳೂ ಹಿಂದುಸ್ಥಾನದಲ್ಲಿ ಬೆಳಿಯದಂಥ ಬೇರೆ ಬಹಳ ತರದ ಹಣ್ಣುಗಳೂ ಸಮೃದ್ಧಿಯಾಗಿವೆ. ಇಂಗ್ಲಿಷ ಪಶು ಕುರಿ ಕುದುರೆಗಳು ಸೌಂದರ್ಯದಿಂದಲೂ ಸುಗುಣಗಳಿಂದಲೂ ಅಮೂಲ್ಯವಾದವುಗಳು. ಇಂಗ್ಲಾಂಡಿನಲ್ಲಿ ಸಕ್ಕರೆ, ಚಾ, ಕಾಫಿಬೀಜ ಬಹಳ ಖರ್ಚು ಆದರೂ ಇವು ಅಲ್ಲಿ ಬೆಳಿಯುವದಿಲ್ಲ, ಇವೆಲ್ಲಾ ಹಿಂದುಸ್ಥಾನ ಮೊದಲಾದ ಉಷ್ಣ ಪ್ರದೇಶಗಳಿಂದ ಬರುತ್ತವೆ. ಇಂಗ್ಲಿಷರ ಕುರಿಯ ಉಣ್ಣೆಯು ಬಹಳ ನಯವಾಗಿದೆ, ಅದರಿಂದ ಅತ್ಯುತ್ತಮವಾದ ವಸ್ತ್ರ ಮಾಡುತ್ತಾರೆ; ಆದರೆ ಅದರ ಸಂಗಡ, ಮತ್ತು ತಮ್ಮಲ್ಲಿ ಆಗುವ ಅಗಸೇ ನಾರಿನ ಸಂಗಡ, ಉಷ್ಣ ಪ್ರದೇಶಗಳಿಂದ ಬರುವಂಥಾ ಹತ್ತಿಯನ್ನೂ ರೇಶಿಮೆಯನ್ನೂ ಬಟ್ಟೆಗೆ ಬಹಳ ಪ್ರಯೋಗಿಸುತ್ತಾರೆ. ಕಲ್ಲಿದ್ದಲಿ, ಕಬ್ಬಿಣ, ತವರ, ತಾಂಬ್ರ, ಶೀಸ, ಕಲ್ಲುಪ್ಪು, ಬಳಪುಗಲ್ಲು ಇತ್ಯಾದಿಗಳ ಅತಿ ಲಾಭಕರವಾದ ಗಣಿಗಳು ಬ್ರಿಟ್ಟೆನಿನಲ್ಲಿ ಅವೆ.

ಬ್ರಿಟ್ಟೆನಿನಲ್ಲಿ ಕೆಟ್ಟ ಸರ್ಪಗಳೂ ಚೇಳುಗಳೂ ಗೆದಲೆಗಳೂ ನುಶಿಗಳೂ ಹುಲಿ, ಚಿರತೆ, ತರಕ್ಷು, ಆನೆ ಮೊದಲಾದ ಕಾಡುಮೃಗಗಳೂ ಇರುವದೇ ಇಲ್ಲ. ಮನೆ ಮುಂತಾದವುಗಳನ್ನು ಕಟ್ಟುವದಕ್ಕೆ ಸಾಕುವ ಕಾಡುಗಳು ಕೆಲವು ಉಂಟು; ಇವುಗಳಲ್ಲಿ ಬೇಟೆಯಾಡಲಿಕ್ಕೆ ಮುಖ್ಯವಾಗಿ ಮೊಲ, ನರಿ, ಜಿಂಕೆಗಳು.

ಈಗಿನ ಕಾಲದಲ್ಲಿ ಬ್ರಿಟ್ಟಿಷರ ಐಶ್ವರ್ಯವೂ ಪ್ರಾಣವೂ ಅತಿಶಯವಾಗಿರುವದರಿಂದ ಅವರು ಎಲ್ಲಾ ಜನಾಂಗಗಳಲ್ಲಿ ಮುಖ್ಯರೆಂದು ಹೇಳ ಬಹುದು. ಚಮತ್ಕಾರಕೃತ್ಯದಲ್ಲಿಯೂ ವ್ಯಾಪಾರದಲ್ಲಿಯೂ ನಾವಿಕಬಲದಲ್ಲಿಯೂ ಯಾರೂ ಅವರಿಗೆ ಸಮ ಬಾರರೆಂತ ಕಾಣುತ್ತದೆ.



ಉಬ್ಬೇ ಹಡಗು.

## 57. BRITONS

# ೫೭. ಇಂಗ್ಲಾಂಡು ದೇಶದವರ ಅಭಿವೃದ್ಧಿಯು

“ಚರ್ಮದುಡಿಗೆಯು, ಕಲ್ಲುಗತ್ತಿಯು,
ವರ್ಮಗೈವರೆ ಕಲ್ಲುಖಡ್ಗವು,
ನಿರ್ಮುಕುತ ರೋಮಗಳು, ತಲೆಯಲಿ ಕೋಣಗೊಂಬುಗಳೂ,||
ಧರ್ಮಹೀನತೆಯುಡಿವೆಬುದ್ಧಿಯು,
ದುರ್ಮತೀ ನರಬಲಿಗಳೀಯುವ,
ಕರ್ಮದು ಸ್ಥಿತಿಯುಳ್ಳರಾರ್ಯೈಯೊಗಟ ತೆರೆಯೆನಗೇ!„||

“ಹೊಲದ ಕೃಷಿಯನರಿಯದಿರುತ, ತೊ—
ಗಲಿನ ದೋಣಿಲಿ ಮೀನು ಹಿಡಿಯುತ,
ಹಲವು ಬೇರನು ಕಾಡುಫಲವನು ತಿನುತ ಗುಡಸಿನೊಳೂ,||
ಕಲಿಕೆಯಿಲ್ಲದೆ, ಜ್ಞಾನವಿಲ್ಲದೆ,
ಬಲದ ಶತ್ರುವಿಗೋಡುತಿದ್ದವ_
ರೆಲವೊ ಯಾರ್ಕೈಯವರು ಹಳೆಯಿಂಗ್ಲಾಂಡ ಮಾನವರೇ!„||

ಮೊದಲು ಇಂಗ್ಲಿಷ ದೇಶದಲ್ಲಿ ವಾಸಿಸುತ್ತಿದ್ದ ಜನರು ಕಾಡರಾಗಿಯೂ ಮೂಢರಾಗಿಯೂ ಚಿಕ್ಕ ಗುಡಸಲುಗಳಲ್ಲಿ ಬದುಕುತ್ತಿದ್ದರು. ಅವರ ಭಕ್ತಿಯು ವಿಗ್ರಹಾರಾಧನೆಯೇ; ಅವರ ವಸ್ತ್ರ ಮೃಗದ ಚರ್ಮವೇ. ಚರ್ಮದ ಹರಿಗೋಲುಗಳ ಮೇಲೆ ಸಮುದ್ರದಲ್ಲಿ ಹೋಗುತ್ತಿದ್ದರು. ಅಷ್ಟು ಹೀನ ಸ್ಥಿತಿಯಲ್ಲಿ ಇದ್ದ ಬ್ರಿಟ್ಟಿಷರು ಪ್ರಕೃತದಲ್ಲಿ ಶ್ರೇಷ್ಠ ನಾಗರೀಕರಾಗಿಯೂ ಬಲಿಷ್ಠರಾಗಿಯೂ ವಿದ್ವಾಂಸರಾಗಿಯೂ ಇದ್ದಾರೆ; ಒಳ್ಳೇ ವಸ್ತ್ರ ಅವರಲ್ಲಿಯೇ ಆಗುವದು; ಅವರ ಪಟ್ಟಣಗಳು ಬಹು ದೊಡ್ಡವು; ಅವರು ಉಗಿಹಡಗುಗಳಲ್ಲಿಯೂ ಉಗಿಬಂಡಿಗಳಲ್ಲಿಯೂ ಅತಿ ವೇಗದಿಂದ ಸಮುದ್ರಮಾರ್ಗವಾಗಿ ಭೂಮಾರ್ಗವಾಗಿ ಪ್ರಯಾಣ ಮಾಡುತ್ತಾರೆ; ದೇವರ ಸದ್ಭಕ್ತರಲ್ಲಿ ಅವರೇ

ಶೋಭಿಸುತ್ತಾರೆ. ಹಿಂದು ಜನರು ಹಾಗೆ ವೃದ್ಧಿಸದೆ, ಎರಡು ಸಾವಿರ ವರ್ಷಕ್ಕೆ ಮೊದಲು ಇದ್ದ ಹಾಗೆಯೇ ಈಗಲೂ ಇದ್ದಾರೆ.

ಇಂಗ್ಲಿಷರು ವೃದ್ಧಿ ಹೊಂದಿದ ಮೊದಲನೇ ಮುಖ್ಯ ಕಾರಣವೇನಂದರೆ—ತಾವು ಪರರಿಂದ ಕಲಿತು ಕೊಂಡದ್ದೇ. ರೋಮಿಯರು ಇಂಗ್ಲಾಂಡಿಗೆ ಬಂದು ೪೦೦ ವರುಷಗಳಾದ ಮೇಲೆ ಅಲ್ಲಿ ಇವರ ಮುಖಾಂತರದಿಂದ ವಿದ್ಯೆ, ನಾಗರೀಕತನ, ಸಾಗುವಳಿ, ನೇಯುವ ಕೆಲಸ ಇತ್ಯಾದಿ ಹೆಚ್ಚಾಗಿ ಹುಟ್ಟಿದ್ದಲ್ಲದೆ ಕ್ರೈಸ್ತ ಧರ್ಮ ಅವರಲ್ಲಿ ಸ್ಥಾಪನೆಯಾಗಿತ್ತು. ಈ ಧರ್ಮದಿಂದ ಒಂದು ತರದ ಮನಸ್ಸು ಬರುತ್ತದೆ, ಏನಂದರೆ ಸತ್ಯ, ಹಿತ, ಪ್ರಯೋಜನ, ಶುಭ ಯಾವದೋ ಅದನ್ನೇ ಹಿಡುಕೊಳ್ಳ ಬೇಕು; ಅದು ಹೊರತಾಗಿ ಆ ಧರ್ಮವು ಒಳ್ಳೇ ರಾಜನೀತಿಯ ಪಾಯವಾಗಿದೆ.

ಹಿಂದು ದೇಶದವರು ಪರರಿಂದ ಕಲಿತು ಕೊಳ್ಳ ಬೇಕು. ತಾವು ಪ್ರಾಯ ಬಂದವರೆಂದು, ತಮಗೆ ದೇವರು ಕೊಟ್ಟ ಬುದ್ಧಿಬಲವನ್ನು ಒಳಿತಾಗಿ ಪ್ರಯೋಗಿಸಿ, ೨ ಸಾವಿರ ಸಂವತ್ಸರ ಮೊದಲ್ಗೊಂಡು ನಡಿಯುತ್ತಾ ಬಂದವರ ಪಾಮರ ಸ್ಥಿತಿಯನ್ನು ಬಿಟ್ಟು, ಕಾಲ ದೇಶ ವರ್ತಮಾನ ಸತ್ಯಾಸತ್ಯಗಳನ್ನು ತಿಳಿದು, ನಡದು ಕೊಳ್ಳ ಬೇಕು. ಶಂಕರಾಚಾರ್ಯ ಹೇಳಿದ್ದೊಂದು ಮಾತು ನೆನಸ ತಕ್ಕದ್ದು, ಏನಂದರೆ:

"ನ ಹಿ ಪೂರ್ವಜೋ ಮೂಢ ಆಸೀದ್ ಇತ್ಯ್ ಆತ್ಮನ್<br>ಅಪಿ ಮೂಢೇನ ಭವಿತವ್ಯಮ್ ಇತಿ ಕಿಂಚಿದ್ ಅಸ್ತಿ ಪ್ರಮಾಣಂ" ||

ಶಂಕರನ ವ್ಯಾಖ್ಯಾನ.

ಅಂದರೆ:

ಪೂರ್ವದವನು ಮೂಢನಾಗಿದ್ದನೆಂತ ಹೇಳಿ, ತಾನು ಮೂಢನಾಗಿರ ಬೇಕೆಂಬದಕ್ಕೆ ಸ್ವಲ್ಪ ಪ್ರಮಾಣವೂ ಇಲ್ಲ.

ಹಾಗೆ ಪ್ರವರ್ತಿಸದಿದ್ದರೆ ಯಾವ ವಿಷಯದಲ್ಲಿ ಆದರೂ ವೃದ್ಧಿ ಹೊಂದದೆ, ಸುಮಾರದವರಾಗಿಯೇ ಇರ ಬೇಕಾದೀತು.

ಇಂಗ್ಲಿಷರ ಅಭಿವೃದ್ಧಿಗೆ ಮತ್ತೊಂದು ಕಾರಣ ಉಂಟು, ಅದೇನಂದರೆ: ತಮ್ಮ ಸದ್ಧರ್ಮಶಕ್ತಿಯಿಂದ ಜನಿಸಿದ ಸಾಹಸವು. ಅವರು ಸೋಮಾರಿತನವನ್ನು ಬಿಟ್ಟು, ಕಷ್ಟ ಪಡುವವನು ಕಾರ್ಯವಂತನೂ ದೊಡ್ಡವನೂ, ಕಷ್ಟಕ್ಕಂಜಿ ಮಾಡದವನು ಅಪ್ರಯೋಜಕನೂ ನೀಚನೂ ಎಂದು ಹೇಳಿ, ಅದರ ಪ್ರಕಾರ ಮಾಡುವರು. ದೃಷ್ಟಾಂತ—ಇಂಗ್ಲಾಂಡಿನಲ್ಲಿ ಪೀಲೆಂಬ ಒಬ್ಬ ನೇಯಿಕಾರನಿದ್ದನು. ಇವನು ಜಾಗರದಿಂದಲೂ ಪ್ರೌಢತ್ವದಿಂದಲೂ ತನ್ನ ಕೆಲಸ ನಡಿಸುತ್ತ ಬರಲಾಗಿ ಈಸವೀ ೧೭೮೮ನೇ ವರುಷದಲ್ಲಿ ರೋಬರ್ಟನೆಂಬ ಚೊಚ್ಚಲು ಮಗನು ಹುಟ್ಟಿದನು. ತಂದೆಯು ಯಥಾ

ಪ್ರಕಾರ ಕೆಲಸ ಗೈಯುತ್ತಾ, ಸಂಪತ್ತು ಘಳಿಸಿ ಕೊಳ್ಳುತ್ತಾ, ಅನೇಕ ಜನರಿಗೆ ಕೆಲಸ ಕೊಡುತ್ತಾ ಬಂದು, ೧೮೦೦ನೇ ವರುಷದಲ್ಲಿ ರಾಜಸಭೆಯಿಂದ ಪ್ರಭುತನ ಹೊಂದಿದನು. ೧೫೦೦೦ ಆಳುಗಳು ಅವನ ಕೂಲಿಯಲ್ಲಿದ್ದರು. ಅವನು ಸತ್ತು ಉಳಿಸಿದ ದ್ರವ್ಯ ೨೦೦೦೦೦೦೦ ರೂಪಾಯಿ. ಅವನ ಮಗನಾದ ರೋಬರ್ಟನು ಒಳ್ಳೇ ಸಾಲೆಯಲ್ಲಿ ಅಭ್ಯಾಸ ಮಾಡಿದ ಹಿಂದೆ ತಂದೆಯು ತನ್ನ ಕೀರ್ತಿಯ ಹೆಸರಿನಿಂದ ಅವನಿಗೆ ರಾಜ್ಯಸಭೆಯಲ್ಲಿ ಒಂದು ಮಾನಸ್ಥಳ ಘಳಿಸಿ ಕೊಟ್ಟನು. ೧೮೨೨ನೇ ವರುಷದಲ್ಲಿ ರೋಬರ್ಟನು ತನ್ನ ಚಾತುರ್ಯದಿಂದ ಪ್ರಧಾನಿಯಾಗಿ, ದೇಶಸಕಲಶ್ರೇಷ್ಠರ ಗೆಳೆಯನಾಗಿ ಇದ್ದನು. ಈ ಪ್ರಕಾರವೇ ಇಂಗ್ಲಾಂಡು ದೇಶದಲ್ಲಿ ಕಷ್ಟ ಪಡುವವರೆಲ್ಲರೂ ಸಕಲ ವಿಧವಾದ ದೊಡ್ಡಸ್ತನವನ್ನು ಪಡೆಯುತ್ತಾ, ಯೋಗ್ಯ ಸ್ಥಿತಿಯನ್ನು ಸಂಪಾದಿಸುತ್ತಾ ಇದ್ದಾರೆ. ನನ್ನ ಜಾತಿ ತನ್ನ ಜಾತಿ ಎಂಬ ಗರ್ವವುಳ್ಳ ವಾಗ್ವಾದ ಅಲ್ಲಿ ಇಲ್ಲದ್ದರಿಂದ ಯಾರೂ ವೃದ್ಧಿಸ ಬಹುದು.



## 58. AFRICA

## ೫೮. ಅಫ್ರಿಕ ಖಂಡವು



"ಅತಿ ದೊಡ್ಡ ದುಸುಬುಕಾನನದೊಳಗೆ ಗರ್ಜಿಸುತ,
ಗತಿಸುವದು ಮೃಗರಾಜ; ಮಾಯಾಮರೀಚಿಕೆಗೆ
ಮತಿಗೆಡೊರು ದಾರಿಗರು, ನೀರಂತೆ ಪಟ್ಟದಂತೆಸದದ್ದು ತಪ್ಪಲಕಟಾ!||
ಪತವಿರದು, ದಿಕ್ಕಡ್ಡಿಯಿಂದ ಕಡಲಂತೆಯೆ ಯು—
ಕುತಿ ಮಾಡಿಯದ ದಾಟಿ ಹೋಗುವರು; ಬಲು ತೃಷೆಯ
ಕ್ಷಿತದ ಬಾಧನೆಯಹುದು; ಕಾಡಿಸೊದು ಬಿಸಿಘಾಳಿಯಾಶ್ರಯಗಳಿಲ್ಲದೆಡೆಲೀ.,,||

ಫ್ರಿಕವು ಆಸ್ಯ ಖಂಡಕ್ಕೆ ಸೂವೆಜ್ ಎಂಬ ಮಿಸ್ರದ ಶೀಮೆಯಿಂದ ಕೂಡಿ ಅದೆ. ಅಫ್ರಿಕ ಬಹಳ ಉಷ್ಣ ಉಳ್ಳದ್ದು; ಇತರ ಖಂಡಗಳ ಹಾಗೆ ಇದರಲ್ಲಿ ಬಹಳ ಸಂಚಾರ ಮಾಡಿ ಸ್ಥಿತಿಯನ್ನು ಚನ್ನಾಗಿ ನೋಡಿದವರು ಇಲ್ಲ. ಉತ್ತರ ಭಾಗವಲ್ಲಿ ವಿಶಾಲವಾದ ಮಳಲಿನ ಬೈಲುಭೂಮಿ ಅದೆ. ಅಲ್ಲಿ ಬೀಸುವ ಬಿರುಘಾಳಿಯಿಂದ ಮಳಲೆದ್ದರೆ ಸಮುದ್ರದಲ್ಲಿ ತೆರೆಗಳಾದ ಹಾಗಾಗುವದು. ಅಲ್ಲಲ್ಲಿ

ಕೆಲವು ಉತ್ಪತ್ತಿ ಗಿಡಗಳೂ ಸ್ವಲ್ಪ ನೀರೂ ಇರುವ ಹಸುರಾದ ಸ್ಥಳಗಳು ಮಾರ್ಗಯಾಸ ಪಡುವ ಪ್ರಯಾಣಸ್ಥರಿಗೆ ಮಹಾಸಮುದ್ರಮಧ್ಯದ ದ್ವೀಪಗಳ ಹಾಗೆ ಕಾಣಿಸುವವು.



ಉಸುಬುಬೈಲಿನಲ್ಲಿಯ ಒಂದು ಉತ್ಕೃಷ್ಟ ಸ್ಥಳ.

ಅಫ್ರಿಕದ ಸಮುದ್ರತೀರಪ್ರದೇಶಗಳೂ ನದಿಪ್ರದೇಶಗಳೂ ಬಹಳ ಸಾರ ಉಳ್ಳವುಗಳಾಗಿವೆ.

ಅಫ್ರಿಕ ಖಂಡದ ಈಶಾನ್ಯ ಭಾಗದಲ್ಲಿ ಮೊದಲು ಅತಿ ಪ್ರಖ್ಯಾತಿ ಹೊಂದಿದ ಮಿಸ್ರ ದೇಶವು ಇರುತ್ತದೆ. ಅಲ್ಲಿ ದಕ್ಷಿಣದಿಂದ ಉತ್ತರಕ್ಕೆ ಹರಿಯುವ ನೀಲ್ ನದಿಯು ಸಂವತ್ಸರಕ್ಕೆ ಒಮ್ಮೆ ಪ್ರವಾಹವಾಗಿ, ದಿನ್ನೆಯ ಮೇಲೆ ಹರಿದು, ಸಮೀಪದಲ್ಲಿರುವ ಭೂಮಿಗೆ ಸಾರವನ್ನುಂಟು ಮಾಡುತ್ತದೆ. ಮಿಸ್ರಕ್ಕೆ ದಕ್ಷಿಣವಾಗಿ ಹಬಸಿ ದೇಶವಿರುವದು; ಅದು ಉತ್ಕೃಷ್ಟ ಪರ್ವತಪ್ರದೇಶವು. ಅಧಿಕ ದಕ್ಷಿಣದಲ್ಲಿ ಕೇಪ್ಲಾಂಡೆಂಬ ದೇಶವು ಇಂಗ್ಲಿಷರದಾಗಿದೆ; ಅಲ್ಲಿಯ ಫಲಗಳಲ್ಲಿ ದ್ರಾಕ್ಷೇ ಹಣ್ಣುಗಳು ಶೋಭಿಸುತ್ತವೆ. ಉತ್ತರ ತೀರದಲ್ಲಿ ಅಲ್ಜೀರು, ಮೊರೊಕ್ಕೊ ಎಂಬ ಇತ್ಯಾದಿ ತುರ್ಕರಿರುವ ದೇಶಗಳೂ ಪಶ್ಚಿಮದಲ್ಲಿ ಸಿನಿಗಾಂಬಿಯ, ಗಿನಿಯ ಎಂಬ ದೇಶಗಳೂ ಪೂರ್ವದಲ್ಲಿ ಜಂಗ್ ಅಥವಾ ಜಂಜಿ ಮೊದಲಾದ ದೇಶಗಳೂ ಅವೆ.

ದೊಡ್ಡ ಉಸುಬುಬೈಲಿನ ತೆಂಕಣಗಡೆ ಮುಖ್ಯವಾಗಿ ನೀಗರುಗಳು ನಿವಾಸಿಗಳಾಗಿ, ವಿಗ್ರಹಾರಾಧಕರೂ ಮಹಮ್ಮದನ ಭಕ್ತರೂ ಆಗಿದ್ದಾರೆ. ಅವರು ನಾಗರೀಕತನವಿಲ್ಲದ ಮನುಷ್ಯರು.

ಈ ಖಂಡದಲ್ಲಿ ೧೨೦೦೦೦೦೦ ಚಚ್ಚೌಕ ಮೈಲ ಭೂಮಿ. ಉತ್ಪತ್ತಿ, ಕಾಪಿ, ಹತ್ತಿ, ಕಬ್ಬು, ಹಾಗೆಸೊಪ್ಪು, ಕಿತ್ತಲೆ, ನಿಂಬೆ, ಬಾಳೆ, ಗಾಂಧಿ, ಖತ್ತ ಇತ್ಯಾದಿ ಅದರ ಮುಖ್ಯ ಉತ್ಪತ್ತಿಯಾಗಿದೆ.



ಮಿಸ್ರ ದೇಶದ ರಾಜಧಾನಿಯಾದ ಕಾಹಿರ ಪಟ್ಟಣಕ್ಕೆ ಸ್ವಲ್ಪ ದೂರವಾಗಿರುವ, ಪೂರ್ವ ಅರಸರು ಕಟ್ಟಿಸಿದ ಪಿರಮಿಡ್ ಎಂಬ ರಾಜಸಮಾಧಿಗಳು.

# 59. AMERICA

# ೫೯. ಅಮೆರಿಕ ಖಂಡವು

"ಹದಿನಾಲ್ಕು ನೂರ ತೊಂಭತ್ತೆರಡು ಸಂವತ್ಸ—
ರದ ಮುಂಚೆ ಕೋಲಂಬ ನಾವಿಕನು ಸ್ಪೇನು ದೇ—
ಶದರಸನ ಮೂರ್ಹಡಗಗಳನೇರಿ, ತೊಂಭತ್ತು ಜನಸಹಿತ ಹೊರಟು ಹೋಗೀ, ||
ಮುದದಿಂದ ಹಡಗವನು ನಡಿಸುತ್ತ ಪಡುವಲಿಗೆ,
ಹೆದರದಲೆ ಬಹು ದೊಡ್ಡ ಸಾಗರವ ದಾಟುತಿರ—
ಲದ ಕಾಣುತಂಜಿದರು ಹಡಗಾಳುಗಳು, ಸುತ್ತು ನಿಲುಗಡೆಯನೀಕ್ಷಿಸದಿರೇ.,, ||

"ಬೆದರ ಬೇಡಿರೆಲೆನ್ನೆಯಾ ಹಡಗಪತಿಯು,—ಬೇ—
ಗದಲವರು ಸಮ್ಮತಿಯ ಪಡದಿನ್ನು ನಿನ್ನನ ಜ—
ಲದಿ ದೊಬ್ಬಿ ಮುಳುಗಿಸುವೆವೆನಲಾಗ ಮೂರು ದಿನ ತಾಳಿ ಕೊಳಿರೆಂದುಸುರಿದಾ. ||
ಅದಕೇಚೆ ಮೂರನೇ ದಿನದಿರುಳುಹೊತ್ತು ಜಾ—
ಮದೊಳು ಥಡಗಡೆ ದ್ವೀಪ ಹೊಳೆವದನು ನೋಡುತ್ತ—
ಲೊದರಿದನು ಕೂವೆಗಾವಲಿಯವನು;—ಶಿಕ್ಕಿತಾಗತಿ ಬಯಸಿದಮೆರಿಕವಗೋ!,, ||

ಅಮೆರಿಕ ಖಂಡವು ಬಹು ವಿಶಾಲವಾದದ್ದಾಗಿ, ಆಸ್ಯಕ್ಕೆ ಸ್ವಲ್ಪ ಕಡಿಮೆಯಾಗಿದೆ. ಆದರೆ ಅದರಲ್ಲಿ ವಿಶೇಷ ಜನಸಂಖ್ಯೆ ಇಲ್ಲ. ಈ ಖಂಡವನ್ನು ಕ್ರಿಸ್ತಶಕದ ೧೪೯೨ನೇ ಸಂವತ್ಸರದಲ್ಲಿ ಕ್ರಿಸ್ತಫರ್ ಕಾಲಂಬನೆಂಬವನು ಕಂಡು ಕಾಂಡನು; ಅದಕ್ಕಿಂತ ಮುಂಚೆ ಅಮೆರಿಕ ಖಂಡವಿದೆ ಎಂದು, ಯೂರೋಪಿನವರಿಗೆ ತಿಳಿದಿರಲಿಲ್ಲ. ಅದು ದಕ್ಷಿಣ ಅಮೆರಿಕ, ಉತ್ತರ ಅಮೆರಿಕ ಎಂದು, ಎರಡು ಭಾಗ ಉಳ್ಳದ್ದು. ಆ ಎರಡು ಭಾಗಗಳು ಕೂಡುವ ಮಧ್ಯದ ಭೂಮಿ ಭೂಕಂಠವಾಗಿದೆ.

ಉತ್ತರ ಅಮೆರಿಕದ ಉತ್ತರದ ಬಹು ಪ್ರದೇಶಗಳು ಬೈಲುಭೂಮಿಯಾಗಿವೆ. ಅವುಗಳಲ್ಲಿ ಅರ್ಧ ವರುಷ ಹಿಮ ಬಿದ್ದಿರುವದು. ಅಲ್ಲಿಯ ಸ್ವಲ್ಪ ಮೂಲನಿವಾಸಿಗಳು ಕಾಡವರಾಗಿ ಸಂಚರಿಸುತ್ತಾ, ಬೇಟೆಯಾಡುತ್ತಾ, ಮೀನು ಹಿಡಿಯುತ್ತಾ ಇರುವರು. ಅಲ್ಲಿಯ ಸಮುದ್ರ ಥಳಿಯಿಂದ ಗಡ್ಡೆ ಕಟ್ಟಿ ಕಾಳ್ಳುವದು. ಅತ್ಲಾಗಿನ ನಾಡುಗಳು ಮುಖ್ಯವಾಗಿ ಬ್ರಿಟ್ಟಿಷರವು; ಬಹಳ ವ್ಯವಸಾಯವಾಗುವದಿಲ್ಲ. ಎಸ್ಕಿಮೋವರೆಂಬವರು ಅಲ್ಲಿಯ ಮೂಲಜನರಲ್ಲಿ ಒಂದು ಭಾಗ; ವಿಲಾಯತಿಯಿಂದ ಬಂದವರು ಅವರಿಗಾಮ್ಮೆ ಒಂದು ನೂಲುಬಟ್ಟೆ ತೋರಿಸುವಾಗ ಅವರು ಅದರ ಜಾ

ತಿಯರಿಯದೆ, ಯಾವ ಮೃಗಚರ್ಮವೆಂದು ಕೇಳಿದರು. ಆ ಕಡೇ ವಿಲಾಯತಿಯ ವ್ಯಾಪಾರಸ್ಥರು ಮೂಲಜನರಿಗೆ ತುಬಾಕಿ, ಮದ್ದು, ಕತ್ತಿ, ಕೊಡ್ಲೆ ಮುಂತಾದದ್ದು ಕೊಟ್ಟು, ಉತ್ತಮ ಮೃಗಚರ್ಮಗಳನ್ನು ಕೊಂಡು ಕೊಳ್ಳುತ್ತಾರೆ. ಸಮುದ್ರದಲ್ಲಿಯೂ ನದಿ ಸರೋವರಗಳಲ್ಲಿಯೂ ಹೇರಳ ಒಳ್ಳೇ ಮೀನುಗಳು ಶಿಕ್ಕುತ್ತವೆ.



ಉತ್ತರ ಅಮೆರಿಕದ ಸಮುದ್ರದಲ್ಲಿ ಶಿಕ್ಕುವ ಹ್ವೇಲ್ ಮೀನಿನ ಕೊಬ್ಬು ತೆಗೆಯುವ ಕೆಲಸ. ಇಲ್ಲಿ ಕಾಣುವ ಬೆಟ್ಟಗಳು ಕಲ್ಲಿನವಲ್ಲ, ಹಿಮುಗಡ್ಡೆಯವು.

ಉತ್ತರ ಅಮೆರಿಕದ ಮಧ್ಯಭಾಗವು ಯುನೈಟೆಡ್ ಸ್ಟೇಟ್ಸ್ ಎಂದೆನ್ನಿಸಿ ಕೊಳ್ಳುತ್ತದೆ. ಅದರಲ್ಲಿ ಮುಖ್ಯವಾಗಿ ಇಂಗ್ಲಿಷರ ವಂಶದವರು ಇದ್ದಾರೆ. ಅವರು ವಿದ್ಯೆಯಲ್ಲಿಯೂ ಸಾಹಸಕಾರ್ಯಗಳಲ್ಲಿಯೂ ಘಟ್ಟಿಗರು. ಅವರು ಮೊದಲು ಇಂಗ್ಲಾಂಡಿನ ಅರಸುಗಳ ಕೆಳಗಿದ್ದರೂ, ಹಿಂದಗಡೆ ತಮ್ಮನ್ನು ಬಿಡಿಸಿ ಕೊಂಡರು. ಇಲ್ಲಿ ಮುಖ್ಯವಾಗಿ ಗೋಧಿ, ಜೋಳ, ಹೊಗೆಸೊಪ್ಪು, ಭತ್ತ, ಹತ್ತಿ, ಒಳ್ಳೇ ಮರ ಮೊದಲಾದವುಗಳ ಬೆಳೆಯಾಗುವದು. ಯುನೈಟಡ್ ಸ್ಟೇಟ್ಸ್ ಎಂಬ ಸಖ್ಯರಾಜ್ಯವು ಈಗ ಎರಡು ಪಾಲಾಗುವ ಕಂಟಕದಲ್ಲಿದೆ. ಹೆಚ್ಚು ದಕ್ಷಿಣವಾಗಿ ಮೆಕ್ಸಿಕೋ, ಗ್ವಾತಿಮಾಲ ಎಂಬ ದೇಶಗಳಿರುತ್ತವೆ. ಅವುಗಳಲ್ಲಿ ಅನೇಕರು ಸ್ಪೇನ್ ದೇಶಸ್ಥರಾಗಿದ್ದಾರೆ.

ದಕ್ಷಿಣ ಅಮೆರಿಕದಲ್ಲಿ ಅಮಜೋನ್ ಎಂಬ ಲೋಕದ ಎಲ್ಲಾ ನದಿಗಳಿಗಿಂತ ದೊಡ್ಡದಾದ ನದಿ ಅದೆ. ಹೀಗೆ ಅಮೆರಿಕ ಖಂಡದಲ್ಲಿ ಅತಿ ದೊಡ್ಡ ನದಿ ಇರುವದಲ್ಲದೆ ಅದರ ಪಶ್ಚಿಮ ತೀರದಲ್ಲಿ ಉತ್ತರದ ತುದಿಯಿಂದ ದಕ್ಷಿಣದ ತುದೀ ವರೆಗೆ ಇರುವ ಪರ್ವತಾವಳಿಯು ಲೋಕದ ಎಲ್ಲಾ ಪರ್ವತಾವಳಿಗಳಿಗಿಂತ ಹೆಚ್ಚು ಉದ್ದಕ್ಕೆ ಹೋಗುತ್ತದೆ. ದಕ್ಷಿಣ ಅಮೆರಿಕದ ಉತ್ತರ ಭಾಗವು ಬಹಳ ಉಷ್ಣ ಉಳ್ಳದ್ದು; ದಕ್ಷಿಣ ಭಾಗದಲ್ಲಿ ಶೀತೋಷ್ಣಗಳು ಮಿತವಾಗಿವೆ. ದಕ್ಷಿಣ ಅಮೆರಿಕದ ಲಾನೋಗಳೆಂಬ ದೊಡ್ಡ ಬೈಲುಗಳು ಬೇಸಿಗೆಗಾಲದಲ್ಲಿ ಬೆಂದು ಹೋಗಿ, ಅವುಗಳಲ್ಲಿ ಬದುಕುವ

ಕಾಡುಗುದುರೆ, ಕಾಡುಗತ್ತೆಗಳು ರಾಶಿರಾಶಿಯಾಗಿ ನೀರಡಿಸಿ, ಸಾಯುವವು; ಮಳೆಗಾಲದಲ್ಲಿ ಅನೇಕವುಗಳು ಜಲಪ್ರವಾಹದಲ್ಲಿ ಅಳಿಯುವವು. ಅಮಜಾನ್ ನದಿ



ಅಮೆರಿಕ ಬೈಲುಗಳಲ್ಲಿ ಗುಂಪುಗುಂಪುಗಳಾಗಿ ಬದುಕುವ ನಾಯಿಗಳ ಒಂದು ಊರು. ಅವು ಮಾಡುವ ಗುಹೆಗಳೊಳಗೆ ಗೂಬೆಗಳೂ ಹಾವುಗಳೂ ಕೂಡಿ ವಾಸಿಸುವವು.

ಯ ಸುತ್ತಲಿನ ಕಾಡು ವಿಲಾಯತಿಯ ೩ನೇ ಪಾಲಷ್ಟು ವಿಶಾಲವಾಗಿ, ಏಕದಲ್ಲಿ ಅದರೊಳಗೆ ಚರಿಸುವ ಮಂಗಗಳು ತುಂಬಿ, ದೊಡ್ಡ ಮರಗಳು ಒತ್ತರ ಒತ್ತರವಾಗಿ

ಅವೆ. ಹಲವು ಕಾಲಕ್ಕೆ ಮೊದಲು ಸ್ಪೇನಿನವರೂ ಪುರ್ತಕಾಲ್ ದೇಶದವರೂ ಆ ಸೀಮೆಯನ್ನು ಅನುಭವಿಸುತ್ತಾ ಬಂದರು; ಈಗ ಅದು ಅನೇಕ ಭಾಗಗಳಾಗಿ, ಬೇರೆ ಬೇರೆ ರಾಜ್ಯಗಳಾಗಿ ಅದೆ. ಅದಕ್ಕೆ ಉತ್ತರದಲ್ಲಿ ಗಿಯಾನ, ಗ್ರೇನದ, ಇಕ್ವಾದಾರ್, ವೆನೆಜುವೇಲ ಎಂಬ ದೇಶಗಳೂ ಪೂರ್ವ ದಿಕ್ಕಿನಲ್ಲಿ ಹೆಚ್ಚಾಗಿ ವಜ್ರವಿರುವ ಬ್ರೇಜಿಲೆಂಬ ಮಹಾರಾಷ್ಟ್ರವೂ ಪಶ್ಚಿಮದಲ್ಲಿ ಹೆಚ್ಚಾಗಿ ಬೆಳ್ಳಿ ಸಿಕ್ಕುವದರಿಂದ ಪ್ರಸಿದ್ಧಿಗೆ ಬಂದಿರುವ ಪೇರೂ, ಚಿಲ್ಲಿ ಸಂಸ್ಥಾನಗಳೂ ಅವೆ. ದಕ್ಷಿಣದ ತುದಿಯಲ್ಲಿ ಪತಗಾನಿಯ ದೇಶವುಂಟು. ದಕ್ಷಿಣ ಅಮೇರಿಕದಿಂದ ಕಾಫಿ, ಸಕ್ಕರೆ, ನೀಲಿ, ತಾಂಬಾಕು, ಮೃಗಚರ್ಮ ಇತ್ಯಾದಿ ಬೇರೆ ದೇಶಗಳಿಗೆ ವೈಯುವರು. ದನ ಕುದುರೆಗಳು ಅದರ ಬೈಲುಗಳಲ್ಲಿ ಬಹಳ.

ಉತ್ತರ ಅಮೇರಿಕಕ್ಕೆ ಸೇರಿದ ಕಲಿಫಾರ್ನಿಯ ಸೀಮೆಯಲ್ಲಿ ಅಧಿಕವಾಗಿ ಬಂಗಾರ ಸಿಕ್ಕುತ್ತದೆ.

# V. ASTRONOMY

# ೫. ಜ್ಯೋತಿಷವರ್ಗವು

## 60. INTRODUCTION

## ೬೦. ಪೀಠಿಕೆ

"ಆಶಿಸಿದರಾದಿಕಾಲದ ಮನುಜರುನ್ನತಾ—
ಕಾಶದಾ ಮಹಿಮೆಯನು ಚನ್ನಾಗಿ ತಿಳಿಯುವರೆ;
ರಾಶಿರಾಶಿಯ ತಾರೆಗಳ ನಾಡಿ ಶೋಧಿಸುತ, ನಮಿಸಿದರು ಮಹಿಮಾತ್ಮಗೇ.॥
ನಾಶವಾಯ್ತಿಗಲಾ ಜ್ಯೋತಿಷ್ಯ ಜನರಾಳು; ಪ್ರ—
ಕಾಶಕ್ಕೆ ಮೆಚ್ಚದಲೆ, ಗಾಢಾಂಧಕಾರಾತಿ
ಪಾಶದಾಳು ಸಿಕ್ಕಿರುವ ನಾಸ್ತಿಕರು—ಹಾಟ್ಟಿ ದೇವರೆಯೆನುವರೂ."॥

ಆಕಾಶಮಂಡಲಗಳಲ್ಲಿ ಸೂರ್ಯನ ಹಾಗೆ ಉಳಿದ ಅಚರನಕ್ಷತ್ರಗಳಿಗೂ ಪ್ರಕಾಶ ಸ್ವಾಭಾವಿಕವು. ಚರನಕ್ಷತ್ರ ಅಥವಾ ಗ್ರಹಗಳು ಚಂದ್ರನ ಹಾಗೆ ಸೂರ್ಯಪ್ರಕಾಶದಿಂದ ಪ್ರಕಾಶಿಸಿ, ಸೂರ್ಯನನ್ನು ಸುತ್ತಿ ಪರಿವರ್ತಿಸುತ್ತವೆ. ಭೂಮಿಯೂ ಸೂರ್ಯನನ್ನು ಸುತ್ತುವದು. ಚಂದ್ರನು ಭೂಮಿಯ ಸುತ್ತಿ ಹೋಗುತ್ತಾ, ಸೂರ್ಯನಿಗೂ ಭೂಮಿಗೂ ನಟ್ಟ ನಡುವೆ ಬಂದರೆ ಸೂರ್ಯಗ್ರಹಣವಾಗುತ್ತದೆ; ಸೂರ್ಯನಿಗೂ ಚಂದ್ರನಿಗೂ ನಟ್ಟ ನಡುವೆ ಭೂಮಿ ಬಂದಾಗ ಚಂದ್ರಗ್ರಹಣವಾಗುತ್ತದೆ.

ಬೃಹಸ್ಪತಿ ಎಂಬ ಗ್ರಹಕ್ಕೆ ಸುತ್ತಲು ೪ ಚಂದ್ರಗಳೂ, ಶನಿ ಎಂಬ ಗ್ರಹಕ್ಕೆ ಸುತ್ತಲು ೭ ಚಂದ್ರಗಳೂ ತಿರುಗುತ್ತವೆ. ಶನಿಗೆ ಸುತ್ತಲು ಎರಡು ಚಕ್ರಗಳವೆ; ಇವು ಮತ್ತು ಆ ಗ್ರಹಗಳ ಚಂದ್ರಗಳು ದುರ್ಬಿನಿಯಂತ್ರದಿಂದಲ್ಲದೆ ಬರೀ ಕಣ್ಣಿಂದ ನೋಡಿದರೆ ಕಾಣುವದಿಲ್ಲ. ಬರೀ ಕಣ್ಣಿಗೆ ಕಾಣಿಸುವ ನಕ್ಷತ್ರಗಳಿಗಿಂತ ಅನೇಕ ಕೋಟಿ ಇತರ ನಕ್ಷತ್ರಗಳು ದುರ್ಬಿನಿಯಂತ್ರದಿಂದ ಕಾಣಿಸುತ್ತವೆ. ಆಕಾಶದಲ್ಲಿ ಹಾಲಿನ ಹಾಗೆ ಬಿಳುಪಾಗಿ ಕಾಣಿಸುವದೆಲ್ಲ ನಕ್ಷತ್ರಗಳಾಗಿವೆ.

ನಕ್ಷತ್ರಗಳ ಸ್ಥಾನವನ್ನೂ ಗ್ರಹಗಳು ಹೋಗುವ ಮಾರ್ಗವನ್ನೂ ತಿಳಿದು, ನಾವಿಕರು ಸಮುದ್ರದ ಬೈಲಿನಲ್ಲಿ ದಿಕ್ಕು ಹಿಡಿದು, ದಾರಿ ತಪ್ಪದೆ, ಹೋಗುತ್ತಾರೆ.

ಭೂಮಿಯು ತನ್ನ ಅಚ್ಚಿನಲ್ಲಿ ತಿರುಗುತ್ತಾ, ಸೂರ್ಯನ ಸುತ್ತು ಹೋಗುವದು; ತನ್ನ ಅಚ್ಚಿನಲ್ಲಿ ತಿರುಗುವದರಿಂದ ಹಗಲೂ ರಾತ್ರೆಯೂ ಆಗುತ್ತದೆ. ಒಂದು ಸರ್ತಿ ಸೂರ್ಯನನ್ನು ಸುತ್ತಿ ಬರುವದರಿಂದ ಸಂವತ್ಸರ ಉಂಟಾಗುತ್ತದೆ.

ಅಂಗಾರಕನಿಗೂ ಬೃಹಸ್ಪತಿಗೂ ಮಧ್ಯದಲ್ಲಿ ೫೩ ಸಂಣ ಗ್ರಹಗಳವೆ; ಅವಲ್ಲದೆ ಇನ್ನೂ ಹೆಚ್ಚು ಇದ್ದಾವು.

ಗ್ರಹಗಳನ್ನು ಪೂರ್ವಗ್ರಹಗಳೂ ನವೀನಗ್ರಹಗಳೂ ಎಂದು ವಿಶೇಷಿಸುತ್ತಾರೆ. ಮಂಗಳ (ಅಂಗಾರಕ), ಶುಕ್ರ (ಬೆಳ್ಳಿ), ಭೂಮಿ, ಬುಧ, ಬೃಹಸ್ಪತಿ, ಶನಿ ಎಂಬ ಪೂರ್ವ ಕಾಲದಲ್ಲಿ ಗೊತ್ತಾದವುಗಳು ಪೂರ್ವಗ್ರಹಗಳು, ಊರನಸ್, ನೆಪ್ತೂನ್ ಮುಂತಾದ ೫೫ ಗ್ರಹಗಳು ಹೊಸತಾಗಿ ಗೊತ್ತಾದ್ದರಿಂದ ನವೀನಗ್ರಹಗಳು ಎನ್ನಿಸಿ ಕೊಳ್ಳುತ್ತವೆ.



# 61. THE SOLAR SYSTEM

# ೬೧. ಸೂರ್ಯಸ್ಥಿರತ್ವ

"ನಡೆಯುವದು ಚಂದ್ರನವನಿಯ ಸುತ್ತು ಮಾಸದೊಳು;
ನಡೆವರೀರ್ವರು ರವಿಯ ಸುತ್ತು ವರುಷಕ್ಕೊಂಮೆ;
ನಡೆಯುವದು ತನ್ನಚ್ಚ ಸುತ್ತವನಿ ಹಗಲಿರುಳಿಗೊಂಮೆ ಮನುಜರ ಹಿತಕ್ಕೇ;||
ನಡೆಯುವವು ಗ್ರಹರಾಶಿ ರವಿಯ ಸುತ್ತಲು ಕೂಡಿ;
ನಡೆಯುವವು ಗ್ರಹಚಂದ್ರ, ಗ್ರಹಗಳನು ಸುತ್ತಿಸುತ;
ನಡೆಯುವವು ತಮ್ಮಚ್ಚ ಸುತ್ತಿಸುತ ತಾರೆ ಗ್ರಹ; ರವಿಯೆಲವೊ ಗ್ರಹರಾಜನೊ.,.||

ಭೂಮಿಯು ಸ್ಥಿರವಾಗಿರುವ ಹಾಗೆಯೂ ಸೂರ್ಯ ತಾರೆಗಳು ಅದರ ಸುತ್ತಲೂ ತಿರುಗುವ ಹಾಗೆಯೂ ಕಂಣುಗಳಿಗೆ ಕಾಣ ಬಂದಾಗ್ಯೂ ಅದು ನಿಜವೆಂದು ನೆನಸ ಬಾರದು. ತರಂಗಗಳಿಲ್ಲದ ಸಮುದ್ರದಲ್ಲಿ ದೇಶದ ಹತ್ತರ ಹಡಗಿನ ಮೇಲೆ ಹೋದದ್ದಾದರೆ ನಾವು ಚಲಿಸುತ್ತೇವೆಂದು, ಎಷ್ಟು ಮಾತ್ರವೂ ತಿಳಿಯದೆ, ತೀರವು ಚಲಿಸುವ ಹಾಗೆ ಕಾಣುತ್ತದೆ. ಆ ಪ್ರಕಾರವೇ ನಾವು ಇರುವ ಭೂಮಿಯು ತಿರುಗುತ್ತಿದ್ದರೂ ಅದರ ಚಲನೆ ಕಾಣ ಬಾರದೆ, ಸೂರ್ಯ ನಕ್ಷತ್ರಗಳು ತಿರುಗುವಂತೆ ತೋರುತ್ತದೆ; ಆದರೂ ನಕ್ಷತ್ರಗಳು ಸ್ಥಿರವಾಗಿಯೂ ಭೂಮಿ ಚರವಾಗಿಯೂ ಇದೆ. ಭೂಚಲನೆಗೆ ಎಲ್ಲಿಯೂ ಅಡ್ಡಿ ಆಗದದರಿಂದ ಮತ್ತು ಭೂಮಿ ಹೊಂದಿ ಕೊಂಡಿರುವ ಘಾಳಿ ಸಂಗಡ ತಿರುಗುವದರಿಂದ ಭೂಮಿ ತಿರುಗುತ್ತದೆಂದು, ಅದರಲ್ಲಿದ್ದು ಇಂದ್ರಿಯಗಳಿಂದ ತಿಳಿಯ ಕೂಡದು.

ಆದರೆ ಹಾಗೆ ಇರ ಬೇಕೆಂತ ಬುದ್ಧಿವಂತರೆಲ್ಲರೂ ಅರಿತಿದ್ದಾರೆ. ಸ್ವಲ್ಪ ಕೇಳಿರಿ: ಸೂರ್ಯನು ಭೂಮಿಗಿಂತ ೧೪೦೦೦೦೦ದಷ್ಟು ದೊಡ್ಡವನಾಗಿದ್ದಾನೆ; ನಕ್ಷತ್ರಗಳಲ್ಲಿ ಅನೇಕವು ಸೂರ್ಯನಿಗಿಂತ ದೊಡ್ಡವಾಗಿವೆ; ಬರೀ ಕಣ್ಣಿಗೆ ೫೦೦೦ ಅಚರ ನಕ್ಷತ್ರಗಳು ಅಥವಾ ಸೂರ್ಯರುಗಳು ಕಾಣಿಸುತ್ತವೆ; ದುರ್ಬಿನೀ ಬಲದಿಂದ ೭೦೦೦೦ ಅಂಥ ಸೂರ್ಯರುಗಳನ್ನು ಎಣಿಸುತ್ತಾರೆ; ಲೆಖ್ಖಾಚಾರದ ಪ್ರಕಾರ ೫೦೦೦೦೦೦೦೦೦೦೦ ಸೂರ್ಯರುಗಳಿರ ಬೇಕು;—ಇಂತಾದರೆ ಆ ಅಚರನಕ್ಷತ್ರಗಳು ಎಲ್ಲಾ ಅಣುವಿನ ಹಾಗಿರುವಂಥ ಭೂಮಿಯ ಸುತ್ತು ದಿನದಿನಕ್ಕೆ ತಿರುಗುತ್ತವೆಂಬದು ಯೋಗ್ಯವೋ? ಹುಡುಗರು ಆಟವಾಡುವಾಗ ಗರಗರನೆ ತಿರುಗೋಣ ಎಂದು ಪಂಥ ಮಾಡಿ ಕೊಂಡು, ಕೈಗಳನ್ನು ಚಾಚಿ ತಿರುಗುತ್ತಾ ಇರಲು,—ಮನೆ

ಮರ ಬೆಟ್ಟ ಮೊದಲಾದವುಗಳು ತಿರುಗುತ್ತವೆನ್ನುವ ಹಾಗಾಗಲೋ? ಅದಲ್ಲದೆ ದುರ್ಬಿನಿಯಿಂದ ಗ್ರಹಗಳನ್ನು ನೋಡಿದರೆ ಅವೆಲ್ಲವು ತಮ್ಮ ಅಚ್ಚಿನಲ್ಲಿ ತಿರುಗುತ್ತಿದ್ದ ಮೇಲೆ ಭೂಗ್ರಹ ತಿರುಗದಿರುವದೋ? ಅಚ್ಚಿನಲ್ಲಿಯ ತಿರಿಗ್ಯಾಟವು ಸೂರ್ಯನಲ್ಲಿಯೂ ತೋರಿತಲ್ಲ?

## 62. THE SUN

## ೬೨. ಸೂರ್ಯಮಂಡಲ




೧. ಸೂರ್ಯ ೨. ಬೃಹಸ್ಪತಿ ೩. ಶನಿ ೪. ಭೂಮಿ ೫. ಚಂದ್ರ.

ಬೃಹಸ್ಪತಿ ಶನಿ ಭೂಮಿ ಚಂದ್ರ ಎಂಬವುಗಳಿಗಿಂತ ಸೂರ್ಯನು ಇಷ್ಟು ದೊಡ್ಡವನೆಂದು ಈ ಚಿತ್ರವು ತೋರಿಸುತ್ತದೆ. ಭೂಮಿಗೂ ಚಂದ್ರನಿಗೂ ಇಷ್ಟು ದೂರವೆಂಬದು ಅದೇ ಹಾಳತೆಯಲ್ಲಿ ಆ ಗೆರೆಗಳಿಂದ ಕಾಣುತ್ತದೆ. ಭೂಮಿಯು ಸೂರ್ಯನಿಗೆ ಇಷ್ಟು ದೂರವೆಂದು ಅದೇ ಹಾಳತೆಯಲ್ಲಿ ತೋರಿಸ ಹೋದರೆ ಈ ಚಿತ್ರದ ಸೂರ್ಯಮಂಡಲಕ್ಕೆ ಭೂಮಿಯು ಸೊಂನೆ ೬೦ ಅಡಿ ದೂರ ಹಾಕ ಬೇಕು.

"ಜಗಕೆ ಹರುಷವ ಕೊಡುವ ಸೂರ್ಯನ—
ನಗಲಲಿರುಳಲಿ,—ಮುಚ್ಚಿ ಮುಖವನು,
ಖಗವು ಮೃಗ ನರ ವೃಕ್ಷವೆಲ್ಲವು ನಿದ್ದೆ ಗೈಯುವದೂ;||
ಹಗಲಲರುಣೋದಯವ ಕಂಡತಿ
ಬಗೆಯ ದನಿಯಿಂ ರಾಗಸರದಿಂ
ಚಿಗರರುಲಿನಿಂದಾಟ ವೃತ್ತಿಗಳಿಂದ ತುತಿಸುವದೂ.,,||

ಗ್ರಹಗಳೆಲ್ಲ ಸೂರ್ಯನ ಸುತ್ತು ತಿರುಗುತ್ತಾ, ಸೂರ್ಯಪ್ರಕಾಶವನ್ನೂ ಉಷ್ಣವನ್ನೂ ಹೊಂದುತ್ತವೆ. ಸೂರ್ಯನ ಸುತ್ತಳತೆಯು ೨೮ ಲಕ್ಷ ಮೈಲು ಉಂಟು; ನಮಗೆ ವಾಸಸ್ಥಾನವಾದ ಈ ಲೋಕದಂಥಾ ಲೋಕಗಳು ೧೪ ಲಕ್ಷ ಕೂಡಿದರೆ ಸೂರ್ಯನಿಗೆ ಸಮಾನವಾಗುವವು. ಈ ಭೂಮಿಯು ಸೂರ್ಯನಿಗೆ ೯ ಕೋಟಿಯ ೩೦ ಲಕ್ಷ ಮೈಲು ದೂರದಲ್ಲಿರುವದರಿಂದ ಸೂರ್ಯ ನಮ್ಮ ಕಣ್ಣುಗಳಿಗೆ ಬಹಳ ಸಣ್ಣವನಾಗಿ ಕಾಣುತ್ತಾನೆ. ಸೂರ್ಯಮಂಡಲಕ್ಕೆ ಹೋಗುವ ಒಂದು ಮಾರ್ಗವಿದ್ದರೆ ಹಗಲಿರುಳು ಓಡುತ್ತಿದ್ದ ಒಂದು ಚುರುಕಾದ ಅಶ್ವವು ಅದರಲ್ಲಿ ಹೋಗಿ ಮುಟ್ಟುವದಕ್ಕೆ ಸುಮಾರು ೭೦೦ ವರುಷ ಹಿಡಿಯುವದು.

ಸೂರ್ಯನ ಸ್ವಭಾವವಿಂಥಾದ್ದೆಂದು ಬಹಳ ತಿಳಿಯುವದಿಲ್ಲ; ಆದರೂ ಅವನ ದೇಹಕ್ಕೆ ಪ್ರಕಾಶವಿಲ್ಲವೆಂತಲೂ ಅವನ ಸುತ್ತಲೂ ಅಗ್ನಿಮಯವಾದ ಅಣುವುಗಳವೆ ಎಂತಲೂ ಕಾಣುತ್ತದೆ. ಅದು ಕಂಡು ಬರುವದು ಹ್ಯಾಗಂದರೆ: ಸೂರ್ಯಕಿರಣಗಳನ್ನು ಮಂದ ಮಾಡುವಂಥಾ ವರ್ಣದ ಒಂದು ಕನ್ನಡಿಯನ್ನು ದುರ್ಬಿನಿಯಂತ್ರಕ್ಕೆ ಸೇರಿಸಿ, ಅದರಿಂದ ಸೂರ್ಯನನ್ನು ನೋಡಲು,—ಕಪ್ಪಾದ ಕಲೆಗಳು ಕೆಲವು ಕಾಣಿಸುತ್ತವೆ; ಆ ಕಲೆಗಳು ಒಂದೇ ಪ್ರಕಾರವಿರದೆ, ಅನೇಕಾವರ್ತಿ ಅಗಲವಾಗುತ್ತಾ, ನೀಳವಾಗುತ್ತಾ ಅವೆ; ಅವು ಸೂರ್ಯನ ಸುತ್ತಲಿನ ತೇಜೋಣುವುಗಳು ಹರಿದು ಬಿಟ್ಟಲ್ಲಿ ಕಾಣುವ ಕಪ್ಪಾದ ಸೂರ್ಯನ ಪ್ರದೇಶಗಳು; ಮಳೆಗಾಲದಲ್ಲಿ ಆಕಾಶವೆಲ್ಲ ಮೋಡ ಮುಚ್ಚಿರಲಿಕ್ಕಾಗಿ ಅಲ್ಲಲ್ಲಿ ನೀಲವಾದ ಆಕಾಶದ ಒಂದು ಭಾಗವು ಮೋಡ ಹರಿಯುವಲ್ಲಿ ಹ್ಯಾಗೆ ಕಾಣುತ್ತದೋ ಹಾಗೆಯೇ ಸೂರ್ಯನ ಆ ವಿಷಯವು.

ಸೂರ್ಯನು ಭೂಮಿಯ ಹಾಗೆ ತನ್ನ ಅಚ್ಚಿನ ಸುತ್ತು ತಿರುಗುತ್ತಾನೆಂದು, ನಿಶ್ಚಯ ಮಾಡಿದ್ದಾರೆ; ಹ್ಯಾಗಂದರೆ ಸೂರ್ಯನಲ್ಲಿ ಕಾಣುವ ಆ ಕಲೆಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸರಿಯುತ್ತಾ, ಅಂಚಿನಲ್ಲಿ ಕಾಣದೆ ಹೋಗಿ, ಮತ್ತೊಂದು ಅಂಚಿನಲ್ಲಿ ತಿರಿಗಿ ಕಾಣ ಬಂದು, ತಿರುಗುತ್ತಿರುವವು; ಈ ತಿರಿಗ್ಯಾಟ ೨೫ತ್ತ

ದಿನಕ್ಕೆ ಒಂಮೆ ಆಯಿತು; ಅದರ ಸಲುವಾಗಿ ಸೂರ್ಯನಲ್ಲಿಯ ದಿವಸವು ೨೪ ತಾಸಿನದಲ್ಲ ೬೧೨ ತಾಸಿನದು.

ವಿಲಾಯತಿಯಲ್ಲಿ ಒಂದು ತಾಂಬ್ರದ ಕೊಳವಿ ಮಾಡಿ, ಕೆಳಗೆ ದೂಡಿ ಹಚ್ಚಿದ, ಚಂದಾಗಿ ಹೊಂದಿಕೆಯಾದ ಕೋಲನ್ನು ಬಲದಿಂದ ಬೇಗವಾಗಿ ಒಳ ಶೇರಿಸಿದರೆ ಆ ದೂಡಿ ಬೆಂಕಿ ಹಿಡುಕೊಳ್ಳುತ್ತದೆ; ಯಾತರಿಂದ? ಘಾಳಿಯ ಒತ್ತ್ಯಾಟ ಅಥವಾ ತಿಕ್ಕ್ಯಾಟದಿಂದ. — ಹಾಗೆಯೇ ಸೂರ್ಯನು ತಾನೇ ಭೂಮಿಯಂತೆ ಕಪ್ಪಾಗಿದ್ದರೂ ಸುತ್ತಲಿನ ಅಣುವುಗಳ ತಿಕ್ಕ್ಯಾಟದಿಂದ ನಮಗೆ ತೋರುವಂಥ ಪ್ರಕಾಶ ಹುಟ್ಟಿತೇನು?

ಒಂದು ವಸ್ತುವಿಗೆ ಒಂದು ಅಡಿ ದೂರವಾಗಿ ಇಟ್ಟ ೫೫೬೩ ಉರಿಯುವ ಮೇಣಬತ್ತಿಗಳಿಂದ ನೆಟ್ಟಗೆ ಆ ವಸ್ತುವಿಗೆ ತಾಗುವ ಕಿರಣಗಳ ಪ್ರಕಾಶವು ಸೂರ್ಯನಿಂದ ಆ ವಸ್ತುವಿಗೆ ನೆಟ್ಟಗೆ ಬರುವ ಪ್ರಕಾಶಕ್ಕೆ ಸಮವಾಗುವದೆಂದು, ಪರೀಕ್ಷೇ ಮೇಲೆ ನಿಶ್ಚೈಸಿದ್ದಾರೆ.



## 63. THE MOON

## ೬೩. ಚಂದ್ರನು



“ನಿರ್ಗುಣೇಷ್ವಪಿ ಸತ್ತ್ವೇಷು ದಯಾಂ ಕುರ್ವಂತಿ ಸಾಧವಃ ||
ನ ಹಿ ಸಂಹರತೇ ಜ್ಯೋತ್ಸ್ನಾಂ ಚಂದ್ರಮಶ್ಚಾಂಡಾಲವೇಶ್ಮನಿ,, ||
ಅಂದರೆ:
ಸಾಧುಗುಣದವರು ನಿರ್ಗುಣಪ್ರಾಣಿಗಳಿಗೆ ದಯೆ ಮಾಡುತ್ತಾರೆ,
ಚಂದ್ರನು ತನ್ನ ಕಿರಣಗಳನ್ನು ಚಾಂಡಾಲನ ಮನೆಯಿಂದ ಹಿಂದೆಗೆಯದಂತೆಯೇ.


ಂದ್ರನು ಭೂಮಿ ಸಮೀಪದಲ್ಲಿರುವ ಒಂದು ಗ್ರಹ. ಅವನಿಗೂ ಭೂಮಿಗೂ ೨ ಲಕ್ಷದ ೪೦ ಸಾವಿರ ಮೈಲು ದೂರವದೆ. ಅವನ ಬಳಿಗೆ ಹೋಗ ಒಂದು ಮಾರ್ಗವಿದ್ದರೆ ಹಗಲಿರುಳು ಓಡುವ ತುರಗ ೨ ವರುಷದೊಳಗೆ ಅಲ್ಲಿ ಶೇರ ಬಹುದು. ಚಂದ್ರನು ಸೂರ್ಯನಿಗಿಂತ ೭ ಕೋಟಿ ಪಾಲು ಚಿಕ್ಕವನಾಗಿದ್ದಾ

ಗ್ಯೊ ಭೂಮಿಗೆ ಬಹಳ ಸಮೀಪದಲ್ಲಿರುವದರಿಂದ ಹೆಚ್ಚು ಕಡಿಮೆ ಸೂರ್ಯನಿಗೆ ಸಮಾನವಾದ ಆಕೃತಿ ಇರುವ ಹಾಗೆ ಕಾಣುತ್ತದೆ. ಅವನ ಅಡ್ಡಳತೆಯು ೨೧೬೦ ಮೈಲು ಇರುವದರಿಂದ ಭೂಮಿಗಿಂತ ೫೦ ಪಾಲಷ್ಟು ಚಿಕ್ಕವನಾಗಿದ್ದಾನೆ. ಅವನು ಹೆಚ್ಚು ಕಡಿಮೆ ೨೮ ದಿವಸಗಳಲ್ಲಿ ಭೂಮಿಯ ಸುತ್ತು ತಿರುಗಿ ಬರುವನು.



ಭೂಮಿ ಚಂದ್ರ

ಭೂಮಿಯು ಚಂದ್ರನಿಗಿಂತ ಇಷ್ಟು ದೊಡ್ಡದೆಂತ ತೋರಿಸುವ ಚಿತ್ರ.

ಚಂದ್ರನಿಗೆ ಪ್ರಕಾಶ ಸ್ವಾಭಾವಿಕವಲ್ಲ, ಅದು ಸೂರ್ಯನಿಂದ ಬರುವದು; ಆದ್ದರಿಂದ ಸೂರ್ಯನಿಗೆ ಎದುರಿರುವ ಚಂದ್ರಬಿಂಬವು ಮಾತ್ರ ಪ್ರಕಾಶಿಸುವದು. ಪ್ರಕಾಶವು ಸ್ವಭಾವಿಕವಾಗಿದ್ದರೆ ಸಾರ್ವದಾ ಸೂರ್ಯನೋಪಾಧಿಯಲ್ಲಿ ಪ್ರಕಾಶಮಂಡಲವಾಗಿ ಕಾಣಿಸ ಬೇಕು. ರಾತ್ರಿಯಲ್ಲಿ ಅವನ ಹೊಳಪು ಬಹಳ; ಹಗಲುಹೊತ್ತಿನಲ್ಲಿ ಅವನು ಕಂಡರೆ ಪ್ರಕಾಶಿಸದೆ, ಬಿಳೇ ಮೇಘದ ಹಾಗೆ ತೋರುವನು. ಆ ಬಿಳೇ ಮೇಘಛಾಯೆ ಅವನ ಸ್ವಭಾವದ್ದಲ್ಲ, ಭೂಮಿಯಿಂದ ಅವನಿಗೆ ಬಿದ್ದು ಹತ್ತುವಂಥಾದ್ದು.

ಚಂದ್ರನು ಭೂಮಿಗೂ ಸೂರ್ಯನಿಗೂ ನಡುವೇ ಕಡೆಗೆ ಬಂದಾಗ ಕತ್ತಲೆಯ ಬಿಂಬವು ನಮಗೆದುರು ಬೀಳುವದರಿಂದ ಚಂದ್ರನು ಪ್ರಕಾಶಿಸುವದಿಲ್ಲ; ಅವನಿಗೂ ಸೂರ್ಯನಿಗೂ ಭೂಮಿ ನಡುವೇ ಕಡೆಯಲ್ಲಿರುವಾಗ ಪ್ರಕಾಶ ಪೂರ್ಣವಾದ್ದರಿಂದ ಪೂರ್ಣಚಂದ್ರನೆನ್ನಿಸಿ ಕೊಳ್ಳುತ್ತಾನೆ. ಆದರೆ ಪ್ರಕಾಶ ಭೇದವಾದರೂ ಚಂದ್ರ ತಾನು ವೃದ್ಧಿ ಕ್ಷಯಗಳಿಲ್ಲದೆ, ಸಾರ್ವದಾ ಒಂದೇ ರೀತಿಯಾಗಿದ್ದಾನೆ.

ಚಂದ್ರನನ್ನು ದುರ್ಬಿನಿಯಿಂದ ನೋಡಿದವರು ಅವನಲ್ಲಿ ಭೂಮಿಯಲ್ಲಿರುವ ಹಾಗೆ ಪರ್ವತ ಬೈಲುಗಳಿರುವದನ್ನು ನೋಡಿದ್ದಾರೆ; ಕೆಲವು ಪರ್ವತಗಳ ಎತ್ತರವು ಹೆಚ್ಚು ಕಡಿಮೆ ೨ ಮೈಲು ಅದೆಂದು, ಗಣಿಸಿದ್ದಾರೆ; ಮತ್ತು ಪರ್ವತಗಳಡಿಯಲ್ಲಿ ಮುರಿದು ಬಿದ್ದ ದೊಡ್ಡ ಕಲ್ಲುಗಳು ಕಾಣಿಸುತ್ತವೆ. ಪರ್ವತಪ್ರದೇಶಗಳಿಗೆ ಸೂ

ರ್ಯಕಿರಣಗಳು ಹೆಚ್ಚಾಗಿ ಹತ್ತುವದರಿಂದ ಆ ಭಾಗಗಳು ಬೇರೆ ಅವಕ್ಕಿಂತ ಹೆಚ್ಚು ಪ್ರಕಾಶಿಸುತ್ತವೆ; ಅಷ್ಟು ಪ್ರಕಾಶಿಸದ ಭಾಗಗಳು ವಿಶಾಲವಾದ ಅಡವಿಗಳಾಗಿವೆ. ಚಂದ್ರನಲ್ಲಿ ಮೇಘಾಕಾಶವೂ ನೀರೂ ಕಾಣಲಿಲ್ಲ.

## 64. ECLIPSES

## ೬೪. ಗ್ರಹಣಗಳು

"ಹಲವು ಬದಲು ಭುವನದಿಯಾಗುವ—
ದಲೆಗಳೇರುತ ಬೀಳುತಿಹ ಪರಿ;
ಬಲದ ಕೀರ್ತಿಯು ಪದವಿ ಪಡದಿರೆ,—ಬಳಿಕ ಹೋಗುವದೂ.||
ಗೆಲುವಿನಿಂದಾಕಾಶಗಾಮಿಯು
ಕೆಲೆಯಲೇರಿರೆ,—ಗ್ರಹಣ ಬರುವದು.
ನಿಲುವದೊಂದೆಲೆ, ಸತತ ಕದಲದೆ, ದೇವಸತ್ವಾಕ್ಯಾ.„||




ಚಂದ್ರಗ್ರಹಣ ತೋರಿಸುವ ಚಿತ್ರ.

ಚಂದ್ರಗ್ರಹಣ ೧೮ ವರುಷದೊಳಗೆ ೨೯ ಸರ್ತಿಯಾಗ ಬಹುದು; ಪೂರ್ಣಗ್ರಹಣ ೨ ತಾಸು ತೋರೀತು. ೧೮ ವರುಷಕ್ಕೊಂಮೆ ಸೂರ್ಯಚಂದ್ರಗ್ರಹಣಗಳ ಒಂದು ಸರ್ತಿ ತೀರುವದು; ೧೯ನೇ ವರುಷದಿಂದ ಸುಮಾರು ಅದೇ ಪ್ರಕಾರದ ಸರ್ತಿ ಆರಂಭವಾಗುವದು.


ಹಲವು ಸಮಯಗಳಲ್ಲಿ ಸೂರ್ಯ ಚಂದ್ರರುಗಳು ಪ್ರಕಾಶಿಸದೆ, ಕತ್ತಲು ಮುಚ್ಚಿ ಕೊಂಡಿರುವಾಗ ಅವರಿಗೆ ಗ್ರಹಣ ಹಿಡಿಯಿತೆಂದು ಹೇಳುತ್ತಾರೆ. ಚಂ

ದ್ರನು ಕಪ್ಪಾಗುವಾಗ ಚಂದ್ರಗ್ರಹಣವೆಂತಲೂ, ಸೂರ್ಯನು ಕಪ್ಪಾಗುವಾಗ ಸೂರ್ಯಗ್ರಹಣವೆಂತಲೂ ಹೇಳುತ್ತಾರೆ. ರಾಹು ಕೇತುಗಳು ಸೂರ್ಯ ಚಂದ್ರರುಗಳನ್ನು ನಿರಾಧಿಸುವದರಿಂದ ಗ್ರಹಣ ಉಂಟಾಗುತ್ತದೆಂದು, ಈ ದೇಶದವರು ಹೇಳುತ್ತಾರೆ; ಆದರೆ ಅದು ಸುಳ್ಳುಕಥೆ.

ಚಂದ್ರಗ್ರಹಣಗಳುಂಟಾಗುವದು ಹ್ಯಾಗಂದರೆ: ಬಿಸಲಿನಲ್ಲಿ ನಾವು ನಿಲ್ಲುವಾಗ ನಮ್ಮ ನೆರಳು ನೆಲದಲ್ಲಿ ಕಾಣ ಬರುವಂತೆ ಸೂರ್ಯನಿಗೆದುರಾಗಿ ಭೂಮಿ ಬರುವದರಿಂದ ಭೂಮಿಯ ನೆರಳು ಬೀಳುತ್ತದೆ. ಅಂಥಾ ಸಮಯದಲ್ಲಿ ಚಂದ್ರನು ಸರಿಯಾಗಿ ಒಂದೇ ಪಂಕ್ತಿಯಲ್ಲಿ ಭೂಮಿಗಾಚೆ ನಿಂತರೆ ಆ ನೆರಳು ಚಂದ್ರನಲ್ಲಿ ಬಿದ್ದು, ಅವನನ್ನು ಕಪ್ಪು ಮಾಡುತ್ತದೆ, ಅಥವಾ ಸೂರ್ಯಕಿರಣಗಳು ಚಂದ್ರನಿಗೆ ಮುಟ್ಟದ ಹಾಗೆ ಅಡ್ಡಗಟ್ಟುತ್ತದೆ. ಚಂದ್ರನು ಹೆಚ್ಚು ಕಡಿಮೆಯಾಗಿ ೨೮ ದಿವಸಕ್ಕೆ ಒಮ್ಮೆ ಭೂಮಿಯನ್ನು ಸುತ್ತಿ ಬರುತ್ತದಾದ್ದರಿಂದ ಭೂಮಿಯು ೨೮ ದಿವಸಗಳಿಗೆ ಒಂದು ಸಾರಿ ಚಂದ್ರನಿಗೂ ಸೂರ್ಯನಿಗೂ ಮಧ್ಯವಾಗಿ, ಚಂದ್ರಗ್ರಹಣ ನಮಗೆ ತೋರ ಬೇಕಲ್ಲ? ಅಲ್ಲ, ಮಾಸಮಾಸಕ್ಕೆ ಚಂದ್ರಗ್ರಹಣವಾಗುವದಿಲ್ಲ. ಯಾವದರಿಂದಂದರೆ: ಚಂದ್ರನು ತನ್ನ ಸಾಟ್ಟ ದಾರಿಯಲ್ಲಿ ಬಹು ಸರ್ತಿ ಭೂಮಿಗೂ ಸೂರ್ಯನಿಗೂ ಸಮ ಪಂಕ್ತಿಯಲ್ಲಿರದೆ, ಮೇಲ್ಗಡೆಯಾಗಲಿ ಕೆಳಗಡೆಯಾಗಲಿ ಹೋಗುವದರಿಂದ ಅನೇಕಾವರ್ತಿ ಗ್ರಹಣ ಉಂಟಾಗಲಾರದು; ಸೂರ್ಯ, ಭೂಮಿ, ಚಂದ್ರ ಸುಮಾರಾಗಿ ಅಥವಾ ಪೂರಾಗಿ ಒಂದೇ ಪಂಕ್ತಿಯಲ್ಲಿದ್ದರೆ ಹೊರ್ತು ಚಂದ್ರಗ್ರಹಣವಾಗುವದೇ ಇಲ್ಲ. ಚಂದ್ರಬಿಂಬವು ಪೂರ್ಣವಾಗಿ ಭೂಛಾಯೆಯಿಂದ ಮುಸುಕಿದರೆ ಪೂರ್ಣಗ್ರಹಣವಾಗುವದು; ಭೂಮಿಯ ನೆರಳು ಚಂದ್ರಬಿಂಬದ ಮೇಲೆ ಪೂರ್ಣವಾಗಿ ಬೀಳದೆ, ಒಂದು ಭಾಗದ ಮೇಲೆ ಮಾತ್ರ ಬಿದ್ದರೆ, ಅದು ಅಪೂರ್ಣಗ್ರಹಣವೆಂದೆನ್ನಿಸಿ ಕೊಳ್ಳುವದು. ಅಪೂರ್ಣಗ್ರಹಣಸಮಯದಲ್ಲಿ ಚಂದ್ರಬಿಂಬದೊಳಗಣ ಉಳಿದ ಭಾಗವೆಲ್ಲ ಸೂರ್ಯರಶ್ಮೆಯಿಂದ ಪ್ರಕಾಶಿಸುತ್ತಿರುವದು. ಚಂದ್ರಗ್ರಹಣ ಹುಣ್ಣಿಮೇ ದಿವಸ ಒಂದರಲ್ಲಿಯೇ ಆಗುವದು.

ಚಂದ್ರಗ್ರಹಣ ಉಂಟಾಗುವ ರೀತಿ ಇಂಥಾದ್ದೆಂದು ಸ್ಪಷ್ಟವಾಗಿ ತಿಳಿಯ ಬೇಕಾದರೆ ಒಂದು ದೀಪವನ್ನು ಹಚ್ಚಿ, ಅದಕ್ಕೆ ಅರ್ಧ ಅಡಿ ದೂರದಲ್ಲಿ ಒಂದು ಕಿತ್ತಲೆ ಹಣ್ಣನ್ನು, ಆಚೆ ಮೂರು ಅಡಿ ದೂರದಲ್ಲಿ ಒಂದು ಹಾಂನೇ ಕಾಯಿಯನ್ನು ಹಿಡಿದು, ದೀಪವನ್ನು ಸೂರ್ಯನ ಹಾಗೆ, ಕಿತ್ತಲೇ ಹಣ್ಣನ್ನು ಭೂಮಿಯ ಹಾಗೆ, ಹಾನ್ನೇ ಕಾಯಿಯನ್ನು ಚಂದ್ರನ ಹಾಗೆ ಭಾವಿಸಿ ಕಾಂಡು ನೋಡಿದ್ದಾದರೆ, ಕಿತ್ತಲೆಯನ್ನು ದೀಪಕ್ಕೂ ಹಾನ್ನೇ ಕಾಯಿಗೂ ಮಧ್ಯದಲ್ಲಿ ಹಿಡಿದರೆ ದೀಪದ ಬೆಳಕು, ಕಿತ್ತಲೆ

ಯು ಅದನ್ನು ತಡಿಸುವದರಿಂದ, ಹಾನ್ನೇಕಾಯಿಯಲ್ಲಿ ಕಾಣ ಬರುವದಿಲ್ಲ ಹ್ಯಾಗಾೀ, ಹಾಗೆಯೇ ಭೂಮಿಯು ಚಂದ್ರನಿಗೂ ಸೂರ್ಯನಿಗೂ ನಟ್ಟನಡುವೆ ಬಂದರೆ ಅದರ ನೆರಳು ಚಂದ್ರನ ಮೇಲೆ ಬೀಳುವದರಿಂದ ಸೂರ್ಯಪ್ರಕಾಶ ಚಂದ್ರನಲ್ಲಿ ಮೂಡುವದಿಲ್ಲವೆಂದು ತಿಳಿಯ ತಕ್ಕದ್ದು. ಆ ಹಾನ್ನೇ ಕಾಯಿಯನ್ನು ಕಿತ್ತಲೇ ಹಣ್ಣಿನ ಮೇಲ್ಗಡೆಯಾಗಲಿ ಕೆಳಗಡೆಯಾಗಲಿ ಹಿಡಿದ ಪಕ್ಷದಲ್ಲಿ ಅದರ ಮೇಲೆ ಆ ಕಿತ್ತಲೆಯ ನೆರಳು ಬೀಳುವದಿಲ್ಲ.



ಭೂಮಿ ಚಂದ್ರ ಸೂರ್ಯ

ಸೂರ್ಯಗ್ರಹಣ ತೋರಿಸುವ ಚಿತ್ರ.

ಸೂರ್ಯಗ್ರಹಣ ೧೮ ವರುಷದೊಳಗೆ ೪೧ ಸರ್ತಿಯಾಗ ಬಹುದು. ಪೂರ್ಣಗ್ರಹಣ ೩೧/೪ ಮಿನಿಟ್ (ಮಿನಿಟ್=೬೦ ನಿಮಿಷ) ತೋರೀತು; ಆ ಸಮಯದಲ್ಲಿ ಚಂದ್ರನ ನೆರಳು ೧೬೭ ಮೈಲು ಅಗ್ಡಳತೆಯಾಗಿರುವ ಒಂದು ಭೂಭಾಗಕ್ಕೆ ಸೂರ್ಯನನ್ನು ಮರೆ ಮಾಡ ಬಹುದು.

ಚಂದ್ರನು ಭೂಮಿಗೂ ಸೂರ್ಯನಿಗೂ ನಡುವೆ ಬಂದು, ನಿಂತ ಹಾಗೆ ಸೂರ್ಯನನ್ನು ಪೂರ್ಣವಾಗ್ಯಾಗಲಿ ಅರೆಯಾಗ್ಯಾಗಲಿ ಮರೆ ಮಾಡಿದರೆ ಸೂರ್ಯಗ್ರಹಣ ಉಂಟಾಗುವದು. ಅಂಥ ಸಮಯವು ಅಮವಾಸೆಯದು. ಚಂದ್ರ, ಸೂರ್ಯ ಆ ಕಡೆಯಲ್ಲಿ, ಭೂಮಿ ಈ ಕಡೆಯಲ್ಲಿ ಸಾಲಾಗಿರದೆ, ಚಂದ್ರನು ಮೇಲ್ಗಡೆಯಾಗಲಿ ಕೆಳಗಡೆಯಾಗಲಿ ನಿಂತರೆ ಸೂರ್ಯನು ಮರೆಯಾಗುವದಿಲ್ಲ, ಸೂರ್ಯಗ್ರಹಣವಾಗುವದಿಲ್ಲ. ಚಂದ್ರಗ್ರಹಣವಾಗುವಾಗ ಚಂದ್ರ ಎಲ್ಲಿ ಕಾಣಿಸುತ್ತಾನಾೀ ಅಲ್ಲಿ ಎಲ್ಲರಿಗೂ ಗ್ರಹಣವು ಕಾಣಿಸುವದು. ಸೂರ್ಯಗ್ರಹಣ ಹಾಗಲ್ಲ; ಚಂದ್ರನಿಗಿಂತ ಅತಿ ದೊಡ್ಡವನಾದ ಸೂರ್ಯನು ಬಹು ದೂರದಲ್ಲಿರುವದರಿಂದ ದೇಶಗಳ ವಿಸ್ತಾರದಿಂದ ವಾರೆಯಾಗಿ ನೋಡುವವರಿಗೆ, ನಮ್ಮಲ್ಲಿ ಗ್ರಹಣವಾದರೂ, ಅವನು ತೋರ ಬಹುದು; ಚಂದ್ರನ ನೆರಳು ಭೂಮಿಾ ಅರ್ಧದ ಪೂರ್ತಿಗೆ ಅವನನ್ನು ಮರೆ ಮಾಡ ಕೂಡದು.



# 65. THE STARS

# ೬೫. ನಕ್ಷತ್ರಗಳು

"ನಕ್ಷತ್ರಾ ತಿಳಿದವನ ಸಾವು ಕ್ಷಣಹೊತ್ತಾದರೂ ನಿತ್ತೀತೇ,,?
ಗಾದೆ.

ರಾತ್ರಿಕಾಲದಲ್ಲಿ ಆಕಾಶವು ನಿರ್ಮಲವಾಗಿದ್ದರೆ ವಜ್ರಗಳಂತೆ ಮಿನುಗುವ ನಕ್ಷತ್ರಗಳು ಮಿತಿ ಇಲ್ಲದ ಹಾಗೆ ಕಾಣಿಸುವವು. ಅವುಗಳು ಬಹಳ ದೊಡ್ಡವುಗಳಾಗಿದ್ದರೂ ಅಧಿಕ ದೂರದಲ್ಲಿರುವದರಿಂದ ಚಿಕ್ಕಿಗಳಾಕಾರವಾಗಿ ತೋರುತ್ತದೆ.

ನಕ್ಷತ್ರವೆಂಬ ಹೆಸರು ಆಗಿಂದಾಗ ಗ್ರಹಗಳು ಶೇರದ ಒಂದೇ ಜಾತಿಗೆ ಬರುತ್ತದೆ; ನಮ್ಮ ಲೆಖ್ಖದ ಪ್ರಕಾರ ಆ ಹೆಸರು ಎರಡು ಜಾತಿಗಳನ್ನು ಹೇಳುತ್ತದೆ, ಯಾವವಂದರೆ ಸಚರನಕ್ಷತ್ರಗಳು ಅಥವಾ ಗ್ರಹಗಳು ಮತ್ತು ಅಚರನಕ್ಷತ್ರಗಳು. ಭೂಮಿಯು ಒಂದು ಸಚರನಕ್ಷತ್ರ. ಅಚರನಕ್ಷತ್ರಗಳ ಪ್ರಕಾಶವು ನಮ್ಮ ಕಣ್ಣಿಗೆ ನಾನಾ ವಿಧವಾಗಿ ತೋರುತ್ತದೆ; ಕೆಲವು ಥಳಥಳಿಸಿ, ಕಣ್ಣನ್ನು ತಮ್ಮ ಕಡೆಗೆ ಎಳೆಯುತ್ತವೆ, ಕೆಲವನ್ನು ಚಂದಾಗಿ ವಿಶೇಷಿಸಲಾಗದಷ್ಟು ಸ್ವಲ್ಪ ಪ್ರಕಾಶವುಳ್ಳವುಗಳಾಗಿವೆ. ಪ್ರಕಾಶದ ಮೇಲೆ ಆರು ಕುಲ ಮಾಡಿದ್ದಾರೆ; ಪ್ರಕಾಶದಲ್ಲಿಳಿಸುತ್ತಾ ಕೆಲವು ಹೇಳುವ— ಅತಿ ಪ್ರಕಾಶದ ಮೊದಲನೇ ತರದವು ೧೮, ಎರಡನೇದರವು ೬೦, ಮೂರನೇದರವು ೨೦೦, ನಾಲ್ಕನೇದರವು ೩೮೦ ಇತ್ಯಾದಿ; ಆರು ಕುಲದಲ್ಲಿ ಒಟ್ಟಿಗೆ ೫೦೦೦ ಶೇರಿ ಅವೆ. ಇಷ್ಟು ಮಾತ್ರ ಬರೇ ಕಣ್ಣಿಗೆ ಕಾಣುತ್ತವೆ. ದುರ್ಬಿನೀ ಬಲದಿಂದ ಮತ್ತೆ ೬೦೦೦೦ ಎಣಿಸಿದ್ದಾರೆ. ಆದರೂ ವಿದ್ವಾಂಸರು ಕಲ್ಪನೆ ಹಾಕಿ, ಸಕಲ ನಕ್ಷತ್ರಗಳು ೫೦೦೦೦೦೦೦೦೦೦೦ ಇದ್ದಾವೆಂದು ಊಹಿಸುತ್ತಾರೆ. ಹ್ಯಾಗಂದರೆ ಬರೇ ಕಣ್ಣು ಬಿಳೇ ಮಂಜು ನೋಡುವಲ್ಲಿ ದುರ್ಬಿನೀ ಕಣ್ಣು ಬಹಳ ನಕ್ಷತ್ರಗಳನ್ನು ನೋಡುತ್ತದೆ, ಆದರೆ ದುರ್ಬಿನೀ ಕಣ್ಣು ನಕ್ಷತ್ರಗಳೆಂದು ವಿಶೇಷಿಸ ಕೂಡದ ಮತ್ತನೇಕ ಮಂಜು ಸ್ಥಳಗಳುಂಟು; ಇವು ರಾಶಿರಾಶಿಯಾದ ನಕ್ಷತ್ರಗಳು.

ಸಚರನಕ್ಷತ್ರಗಳನ್ನು ಈಗ ೬೨ ಎಣಿಸುತ್ತಾರೆ. ಇವನ್ನು ದುರ್ಬಿನಿಯಿಂದ ನೋಡಿದರೆ ಹೆಚ್ಚು ದೊಡ್ಡವಾಗಿ ಮತ್ತು ನಿರ್ಮಲವಾಗಿ ಕಾಣಿಸುತ್ತವೆ; ಅಚರನಕ್ಷತ್ರ



ದುರ್ಬಿನಿಗೆ ಕಾಣುವ ನಕ್ಷತ್ರಗಳಡೆಯು ಮಂಜಿನಾಕಾರಗಳು.

ಗಳ ವಿಷಯ ಇದು ಸರಿ ಬೀಳದು, ಇವು ದುರ್ಬಿನಿಗೂ ಹೆಚ್ಚು ಕಡಿಮೆ ಇಲ್ಲದೆ, ಹಾಗೆ ಕಾಣುತ್ತವೆ, ಅದರಿಂದ ಇವು ಅತ್ಯಧಿಕ ದೂರವಾಗಿರ ಬೇಕು. ದೂರಳತೆ ಲೆಖ್ಖ ಮಾಡಿದ ಒಂದು ಅಚರನಕ್ಷತ್ರಕ್ಕೆ ಸೂರ್ಯನಿಂದ ಬೆಳಕು ಹಾಗ ಬೇಕಾದರೆ ೧೦$\frac{೩}{೧೦}$ ವರುಷ ಬೇಕು; ಆದರೆ ಒಮ್ಮೆ ರೆಪ್ಪೆ ಬಡಿಯುವದರಲ್ಲಿ ಬೆಳಕು ೧೯೫೦೦೦ ಮೈಲು ದೂರ ಚರಿಸುವದು. ಭೂಮಿಗೆ ಹತ್ತರವಿರುತ್ತೆಂದು ಗಣಿಸಿದ ಒಂದು ಅಚರನಕ್ಷತ್ರದಿಂದ ಭೂಮಿಗೆ ಬೆಳಕು ಬಂದು ಮುಟ್ಟ ಬೇಕಾದರೆ ಹ್ಯಾಗೂ ೩ ವರುಷ ಬೇಕು.

ಮೇಷ, ವೃಷಭ, ಮಿಥುನ, ಕರ್ಕಾಟಕ, ಸಿಂಹ, ಕನ್ಯೆ, ತುಲ, ವೃಶ್ಚಿಕ, ಧನು, ಮಕರ, ಕುಂಭ, ಮೀನ ಈ ಅಚರನಕ್ಷತ್ರಗಳ ರಾಶಿಗಳು ರಾಶಿಚಕ್ರವೆನ್ನಿಸುತ್ತವೆ. ಆಕಾಶಮಂಡಲದಲ್ಲಿ ಸಮಾಂತರವಾಗಿ ಗಾತ್ತು ಮಾಡಿದ ಈ ರಾಶಿಗಳ ಮೇಲೆ ಸೂರ್ಯನ ಸ್ಥಿತಿ ಹೇಳುತ್ತಾರೆ. ಒಂದು ರಾಶಿಯಿಂದ ಮತ್ತೊಂದು ರಾಶಿಗೆ ಸೂ

ರ್ಯನು ಸರಿದು ಹೋಗುವದಕ್ಕೆ ೨೮—೩೦ ದಿವಸ ಹಿಡಿಯುತ್ತವೆ. ಆದರೆ ಸೂರ್ಯ ಚಲನೆ ಮಾಡುವದಿಲ್ಲ, ಸೂರ್ಯನ ಸುತ್ತಲು ಭೂಮಿ ನಡಿಯುವದರಿಂದ ತಿಂಗಳುತಿಂಗಳಿಗೆ ಸೂರ್ಯನ ಹಿಂದೆ ಬೇರೊಂದು ರಾಶಿ ಕಾಣ ಬರುತ್ತದೆಂದು, ತಿಳುಕೊಳ್ಳ ಬೇಕು.

ಅಚರನಕ್ಷತ್ರಗಳಿಗೆ ಸಾರ್ವದಾ ಸ್ವಾಭಾವಿಕ ಪ್ರಕಾಶವುಂಟು. ಅದು ಹಗಲಿನಲ್ಲಿ ಸೂರ್ಯನ ಪ್ರಭೆಯ ದೆಸೆಯಿಂದ ಕಾಣುವದಿಲ್ಲ; ಆದರೂ ಒಂದು ಕತ್ತಲೆ ಗುಹೆಯಲ್ಲಾಗಲಿ ಬಾವಿಯಲ್ಲಾಗಲಿ ಆ ವೇಳೆ ಇದ್ದು ನೋಡಿದರೆ ಸ್ವಲ್ಪ ಕಾಣುತ್ತದೆ.



## 66. THE PLANETS

## ೬೬. ಗ್ರಹಗಳು



"ಏಸು ಮಹಿಮೆಯು ದೇವಸೃಷ್ಟಿಗೆ!
ಸಾಸಿರಾರದ್ಭುತವೆಯೆಲ್ಲಿಯು!
ರಾಸಿಯಾದಾಕಾಶದುಡುಗಳ ಲೋಕಗಳೆನುವರೂ.||
ವಾಸತಳವೆಲ್ಲಿಹುದು ದೇವಗೆ?
ದಾಸ, ನಿನ್ನಯ ಕರ್ತನಿಗೆ ಸಿಂ—
ಹಾಸನವು ಪರಲೋಕ, ಪಾದದ ಪೀಠವೀಯವನೀ,,.||

ಯೂರೋಪು (ವಿಲಾಯತಿ) ಖಂಡದವರು ಹೆಚ್ಚು ಕಡಿಮೆ ಮುನ್ನೂರು ವರುಷಕ್ಕೆ ಮೊದಲು ಜ್ಯೋತಿಷ್ಯದಲ್ಲಿ ನಂಬಿಕೆ ಇಟ್ಟವರಾಗಿ, ತಮಗೆ ಸಿದ್ಧಿಸುವ ಫಲಾ




ಮುಖ್ಯ ಗ್ರಹಗಳಲ್ಲಿ ಒಂದು ಒಂದಕ್ಕಿಂತ ಇಷ್ಟು ದೊಡ್ಡದೆಂದು ತೋರಿಸುವ ಚಿತ್ರ.
೧. ಬೃಹಸ್ಪತಿ ೨. ಶನಿ ೩. ನೆಪ್ಟೂನ್ ೪. ಊರನಸ್ ೫. ಶುಕ್ರ ೬. ಭೂಮಿ ೭. ಅಂಗಾರಕ ೮. ಬುಧ ೯. ಚಂದ್ರ.

ಫಲಗಳನ್ನು ಮೊದಲಾಗಿಯೇ ತಿಳಿದು ಕೊಳ್ಳ ಬಹುದೆಂದು, ಜೋಯಿಸರಿಂದ ಜಾತಕ ಮೊದಲಾದದನ್ನು ಬರಸಿ ಕೊಳ್ಳುತ್ತಾ ಬಂದರು. ಕ್ರಮೇಣ ಜನಗು ವಿದ್ಯೆಯಲ್ಲಿ ಬಹಳ ಅಭಿವೃದ್ಧಿ ಹೊಂದಿ, ದುರ್ಬಿನಿ ಎಂಬ ಒಂದು ದೀರ್ಘದೃಷ್ಟಿಯಂತ್ರವನ್ನುಂಟು ಮಾಡಿ, ಗ್ರಹಗಳ ಸಂಖ್ಯೆಯೂ ಅವುಗಳ ಸ್ವಭಾವವೂ ಇಂಥಾದ್ದೆಂದು, ಚನ್ನಾಗಿ ತಿಳಿದು ಕೊಂಡು, ತಮ್ಮ ಪೂರ್ವಾಭಿಪ್ರಾಯವೆಲ್ಲವು ಸತ್ಯವಲ್ಲವೆಂಬದನ್ನು ನೋಡಿ, ಬಿಟ್ಟು ಬಿಟ್ಟರು.

ಗ್ರಹಗಳು ನಮ್ಮ ಲೋಕದಂಥವುಗಳಾಗಿ, ಸೂರ್ಯನ ಸುತ್ತು ತಿರುಗುತ್ತವೆ. ಅವು ರಾತ್ರಿಯಲ್ಲಿ ಬಹಳ ಪ್ರಕಾಶಿಸುತ್ತವಾದಾಗ್ಯೂ ಆ ಪ್ರಕಾಶವು ಅವುಗಳಿಗೆ ಸ್ವಾಭಾವಿಕವಲ್ಲ. ಅದು ಸೂರ್ಯನಿಂದ ಅವುಗಳಿಗೆ ಉಂಟಾಗುತ್ತದೆ. ಭೂಮಿಗೂ

ಸೂರ್ಯನಿಗೂ ನಡುವೆ ತಿರುಗುವ ಬುಧ ಶುಕ್ರಗಳನ್ನು ದುರ್ಬಿನಿಯಿಂದ ನೋಡಿದರೆ ಚಂದ್ರನಲ್ಲಿ ಆಗುವ ಕಳೆ ಕುಂದುವದೂ ಹೆಚ್ಚುವದೂ ಅವುಗಳಲ್ಲಿ ಸಹಾ ಕಾಣುತ್ತವೆ; ಶುಕ್ರವು ಹೊತ್ತಾರೆ ಕೆಲವು ದಿನ ಕಾಣದಿದ್ದು ಮತ್ತು ಕಾಣ ಬಂದರೆ ಬಾಲ ಚಂದ್ರಾಕೃತಿಯಾಗಿರುವದು. ಪ್ರಧಾನಗ್ರಹಗಳೂ, ಅವುಗಳಿಗೂ ಸೂರ್ಯನಿಗೂ ಇರುವ ದೂರವೂ, ಸೂರ್ಯನನ್ನು ಸುತ್ತಿ ಬರುವ ಸಂಖ್ಯೆಯೂ ಕೆಳಗೆ ಬರೆದ ಪಟ್ಟಿಯಲ್ಲಿ ನೋಡಿ ತಿಳಿದು ಕೊಳ್ಳುವದು.

| ಗ್ರಹಗಳು | ಅವುಗಳಿಗೂ ಸೂರ್ಯನಿಗೂ ಇರುವ ದೂರ | | | ಸೂರ್ಯನನ್ನು ಸುತ್ತಿ ಬರುವ ಕಾಲ | |
|---|---|---|---|---|---|
| ಬುಧ | ೩೬೦ | ಲಕ್ಷ | ಮೈಲು | ೮೮ | ದಿನ |
| ಶುಕ್ರ | ೬೮೦ | „ | „ | ೨೨೫ | „ |
| ಭೂಮಿ | ೯೩೦ | „ | „ | ೩೬೫ | „ |
| ಅಂಗಾರಕ | ೧೪೨೦ | „ | „ | ೬೮೭ | „ |
| ಬೃಹಸ್ಪತಿ | ೪೮೫೦ | „ | „ | ೪೩೩೩ | „ |
| ಶನಿ | ೮೯೦೦ | „ | „ | ೧೦೭೫೮ | „ |
| ಊರನಸ್ | ೧೮೦೦೦ | „ | „ | ೩೦೬೮೭ | „ |
| ನೆಪ್ಟೂನ್ | ೩೪೪೭೦ | „ | „ | ೬೦೧೨೫ | „ |

ಮೇಲೆ ಹೇಳಿದ ಗ್ರಹಗಳು ಭೂಮಿಯೋಪಾದಿ ಮೃಣ್ಮಯವಾಗಿವೆ. ಅವುಗಳ ಚಲನೆಯ ಭೇದದಿಂದ ಶುಭಾಶುಭಗಳುಂಟಾಗುತ್ತವೆಂದು ಹೇಳುವದು ಅಜ್ಞಾನವು ಆಗಿದೆ. ಹಿಂದು ಶಾಸ್ತ್ರದಲ್ಲಿ ಬುಧ, ಶುಕ್ರ, ಅಂಗಾರಕ, ಬೃಹಸ್ಪತಿ, ಶನಿ, ಸೂರ್ಯ, ಚಂದ್ರ, ಕೇತು, ರಾಹು ಎಂಬ ನವಗ್ರಹಗಳುಂಟೆಂದು ಹೇಳುತ್ತದೆ. ಅದನ್ನು ಕೇಳಿ, ಸೂರ್ಯನು ಗ್ರಹವಲ್ಲವೆನ್ನ ಬೇಕು, ಮತ್ತು ಕೇತು, ರಾಹು ಮಿಥ್ಯೆ ಎನ್ನ ಬೇಕು, ಮತ್ತು ೯ ಗ್ರಹ ಮಾತ್ರವಲ್ಲ ಅನೇಕ ಹೆಚ್ಚು ಎನ್ನ ಬೇಕು.

# VI. REAL STORIES &c.

# ೬. ನಿಜಕಥಾದಿವರ್ಗವು

## 67. ENTERPRISE

## ೬೭. ಸಾಹಸ

"ನೀತಿಯ ಸಾಹಸ ಖ್ಯಾತಿಗೆ ವಾಹನ".
ಗಾದೆ.

ಯುಧಿಷ್ಠಿರನು ಒಮ್ಮೆ ದ್ರುಪದರಾಜನಿಗೆ ಅಂದದ್ದು:

"ಪೂರ್ವೇಷಾಮಾನುಪೂರ್ವ್ಯೇಣ ವರ್ತಮಾನುಯಾಮಹೇ" ||

ಅಂದರೆ:

ನಮ್ಮ ಪೂರ್ವಿಕರು ಅಂದಂದು ಹೋದ ದಾರಿಯಲ್ಲಿ ನಾವು ನಡಕೊಳ್ಳುತ್ತೇವೆ.

ಈ ಮಾತು ಒಂದು ಪ್ರಕಾರ ಸರಿ, ಆದರೆ ಅದರಲ್ಲಿ ಧರ್ಮಾಧರ್ಮವಿಚಾರಣೆ ಮಾಡಿ ಕೊಳ್ಳ ಬೇಕು. ಒಂದರ ವಿಷಯ ಒಂದು ಮಾತು ಹೇಳುವ: ದೇವರು ಸಕಲ ಕುಲಗಳ ಜನರಿಗೆ ಸಕಲಾರ್ಥದ ಬುದ್ಧಿ ಪಾಲಿಸಿದ್ದಾನೆ; ಹಿಂದು ಪೂರ್ವಿಕರು—ಒಂದು ಕುಲಕ್ಕೆ ಮಾತ್ರ ಶಾಸ್ತ್ರದ ಬುದ್ಧಿ, ಈ ಕುಲದವರು ಬ್ರಾಹ್ಮಣರು; ಮತ್ತೊಂದು ಕುಲಕ್ಕೆ ಮಾತ್ರ ಹೊಲದ ಬುದ್ಧಿ, ಈ ಕುಲದವರು ಶೂದ್ರರು ಇತ್ಯಾದಿ ಹೇಳಿ, ಜಾತಿಕುಲಗಳನ್ನು ನೇಮಿಸಿದ್ದು ಸಮವಲ್ಲ;—ಜಾತಿಯ ಮೇಲೆ ಶೂದ್ರರಿಗೆ ಶಾಸ್ತ್ರದ ಬುದ್ಧಿ ಹೆಚ್ಚಾಗಿರ ಬಹುದು, ಬ್ರಾಹ್ಮಣರಿಗೆ ಹೊಲದ ಬುದ್ಧಿ ಹೆಚ್ಚಾಗಿರ ಬಹುದು. ಒಬ್ಬೊಬ್ಬನು ತನ್ನ ತನ್ನಗೆ ದೇವರು ಬುದ್ಧಿ ಕೊಟ್ಟಂತೆ ಸ್ವಂತೋಪಕಾರಕ್ಕೂ ಪರೋಪಕಾರಕ್ಕೂ ಒಂದೊಂದು ವೃತ್ತಿ ನಡಿಸುತ್ತ, ಶೋಭಿಸುತ್ತಿರ ಬೇಕು; ಮತ್ತು ಈ ವಿಷಯದಲ್ಲಿ ಇವರು ಅವರಿಗೆ ಏನೂ ಅಡ್ಡಿ ಮಾಡ ಬಾರದು. ಈ ಧರ್ಮ ಹಿಂದು ದೇಶ ಒಂದರಲ್ಲಿಯೇ ಈ ವರೆಗೆ ಚಂದಾಗಿ ನಡೆಯಲಿಲ್ಲ, ಆದರೆ ಉಳಿಕೆಯ ಸಕಲ ಭೂದೇಶಗಳಲ್ಲಿ ಅದು ಸಲ್ಲುತ್ತ ಬಂದದೆ; ಆದ್ದರಿಂದ ಇವುಗಳಲ್ಲಿ ಸಕಲ

ಕುಲದವರು ಸಕಲ ವೃತ್ತಿಯನ್ನು ನಡಿಸ ಬಹುದು. ಇದರಿಂದ ರಾಜ್ಯಕ್ಕೆ ಬಹಳ ಸುಫಲ ಹುಟ್ಟುವದು; ಹ್ಯಾಗಂದರೆ ಕೆಳಗಿನ ಸ್ಥಿತಿಯವರಲ್ಲಿ ಆಗಿಂದಾಗ್ಯೆ ಅತ್ಯುತ್ತಮ ಬುದ್ಧಿಶಾಲಿಗಳಿದ್ದು, ಸಾಹಸ ಮಾಡಿ, ಮಾನವೇರಿದವರಾಗಿ, ವಿಚಿತ್ರೋಪಕಾರಸ್ಥರಾಗಿ ಒಪ್ಪುವರು. ಕೆಲವು ಸಾದೃಶ್ಯಗಳನ್ನು ಹೇಳುವ—

ಅಮೆರಿಕದ ಬಸ್ಟನ್ ಎಂಬ ಪಟ್ಣದಲ್ಲಿ ಒಬ್ಬನು ಅತಿ ಹೀನ ವೃತ್ತಿಯನ್ನಿಸುವ ನೆಣದ ಬತ್ತಿ ಮಾಡುವದರಿಂದಲೂ ಸಬ್ಬುಕಾರ ಮಾಡುವದರಿಂದಲೂ ಬದುಕುತ್ತಿದ್ದನು; ಅವನ ಹೆಸರು ಫ್ರಾಂಕ್ಲಿನ್. ಕ್ರಿಸ್ತಶಕದ ೧೭೦೬ನೇ ವರುಷದ ೧೭ನೇ ಜನವರಿಯಲ್ಲಿ ಅವನಿಗೆ ಬೆಂಜಮಿನ್ ಎಂಬ ಮಗನು ಹುಟ್ಟಿದನು. ಚಿಕ್ಕ ಪ್ರಾಯದಲ್ಲಿ ಇವನು ತಂದೆಯ ಕೆಲಸದಲ್ಲಿ ಸಹಾಯ ಮಾಡುತ್ತಿರಲಾಗಿ ಸಾವಕಾಶ ಶಿಕ್ಕಿದಾಗ ತಂದೆಗಿದ್ದ ಕೆಲವು ಪುಸ್ತಕಗಳನ್ನು ಓದುವನು. ಅವನಿಗೆ ೧೨ನೇ ವರುಷ ಬಂದ ಮೇಲೆ ಇಂಗ್ಲಾಂಡಿನಿಂದ ತಿರುಗಿದ ತನ್ನ ಸಹೋದರನಾದ ಯಾಕೋಬನ ಸಂಗಡ ಪುಸ್ತಕಛಾಪೆಯ ಕೆಲಸ ಕಲಿಯುವವನಾಗಿ, ರಾತ್ರಿಯನ್ನು ಹಗಲು ಮಾಡಿ ಪ್ರಯೋಜನ ಉಳ್ಳ ಪುಸ್ತಕಗಳ ಅಭ್ಯಾಸ ಮಾಡುತ್ತಾ ಬಂದನು. ಹಿಂದಗಡೆ ಅವನು ತನ್ನ ಸಹೋದರನನ್ನಗಲಿ, ಫಿಲದೆಲ್ಫ್ಯ ಎಂಬ ಪಟ್ಣದಲ್ಲಿ ಕೆಲಸ ಮಾಡುವಾಗ ಆ ನಾಡಿನ ಆಡಳಿತೆಗಾರನು ಅವನದೊಂದು ಪತ್ರಿಕೆ ಓದಿ, ಬಹಳ ಮೆಚ್ಚಿ, ನೀವೇ ಇಲ್ಲಿ ಒಂದು ಸ್ವಂತ ಛಾಪೆಖಾನೆ ನಿರ್ಮಿಸ ಬೇಕೆಂತ ಹೇಳಿ, ಅದಕ್ಕಾಗಿ ಸಾವಿರ ರೂಪಾಯಿ ಮುಂಗಡವಾಗಿ ಕೊಟ್ಟನು. ಫ್ರಾಂಕ್ಲಿನ್ ತಡೆಯದೆ ಹಾಗೆ ಮಾಡಿ, ಅದು ಅಲ್ಲದೆ ಕಾಗದ ಮಾರುವವನಾಗಿ, ಒಂದು ವರ್ತಮಾನಕಾಗದ ಪ್ರಕಟಿಸಿ, ಇದರಲ್ಲಿ ಬಲು ಬುದ್ಧಿಯ ಪತ್ರಿಕೆಗಳನ್ನು ರಚಿಸಿ ಛಾಪಿಸುತ್ತಿರುವ ಸಮಯಕ್ಕೆ ಪಟ್ಣನಿವಾಸಿಗಳಲ್ಲಿ ಮಾನ ಹೊಂದುತ್ತಾ, ಹಣ ಷಳಿಸುತ್ತಾ ಇದ್ದನು.

೧೭೪೩ನೇ ವರುಷದಲ್ಲಿ ಅವನ ದೇಶಸ್ಥರು ಹೆಚ್ಚು ಹೆಚ್ಚಾಗಿ ಅವನ ಜಾಣತನವ ಕಂಡು, ದೊಡ್ಡ ವಿದ್ಯಾಸಾಲೆಯ ಸ್ಥಾಪಿಸುವದಕ್ಕೆ ಅವನ ಸಹಾಯ ಬೇಡಿಕೊಂಡರು. ಆ ವೇಳ್ಯದಲ್ಲಿಯೂ ಅವನು ಮಿಂಚಿನ ಶೋಧನೆ ಮಾಡಲಿಕ್ಕೆ ಹತ್ತಿ, ಅದರಲ್ಲಿ ಬಹು ಚಮತ್ಕೃತಿ ತೋರಿಸಿದ್ದರಿಂದ ಸಕಲ ಭೂವಿದ್ವಾಂಸರು ಅವನ ಹೆಸರನ್ನು ಕೊಂಡಾಡುವವರಾದರು.

೧೭೬೨ನೇ ವರುಷದಲ್ಲಿ ಒಕ್ಸಫೋರ್ಡ್ ಎಂಬ ಇಂಗ್ಲಾಂಡಿನ ಪಟ್ಣದ ವಿದ್ಯಾಸಾಲೆಯವರು ಅವನಿಗೆ, ತಮ್ಮ ಸಾಲೆಯ ಪಂಡಿತನೆಂದು, ಬಿರುದುಹೆಸರನ್ನಿಕ್ಕಿದರು. ಬಳಿಕ ಅವನು ಟಪ್ಪಾಲಿನ ಸರ್ವಾಧಿಪತಿಯಾದನು; ೧೭೭೮ನೇ ವರುಷದಲ್ಲಿ ತನ್ನ ಸ್ವದೇಶಹಿತಕ್ಕೆ ಪ್ರಧಾನನಾಗಿ ಫ್ರಾಂಚು ದೇಶಕ್ಕೆ ಹೋಗಿ, ಚಂದಾಗಿ ನಡದು, ತಿರಿಗಿ

ಬಂದು, ತನ್ನ ನಾಡಿನ ಆಲೋಚನಾಸಭೆಯ ಮುಖ್ಯನಾಗಿ ಶೋಭಿಸಿ, ೧೭೯೦ನೇ ವರುಷದಲ್ಲಿ ತೀರಿದನು.

೧೧೨ ವರುಷಗಳ ಹಿಂದೆ ಇಂಗ್ಲಾಂಡಿನಲ್ಲಿ ಪೀಲ್ ಎಂಬ ನೇಯಿಕಾರನಿಗೆ ರೋಬರ್ಟ್ ಎಂಬ ೩ನೇ ಮಗನು ಹುಟ್ಟಿದನು. ಇವನು ಬುದ್ಧಿಚಾತುರ್ಯನಾಗಿ ನೇಯುವ ಕೆಲಸದಲ್ಲಿ ಬೇಕಾದ ಯಂತ್ರಗಳನ್ನು ತಿದ್ದಲಿಕ್ಕೆ ಹತ್ತಿ, ಮುಂಚೆ ಕೈಯಿಂದ ಮಾಡುತ್ತಿದ್ದ ಅನೇಕ ಕೆಲಸವನ್ನು ಯಂತ್ರೋಪಾಯದಿಂದ ಮಾಡುವವನಾದನು. ೧೭೭೩ನೇ ವರುಷದಲ್ಲಿ ಅವನು ಹತ್ತೀ ವ್ಯಾಪಾರದಲ್ಲಿ ಸೇರಿ, ಬಟ್ಟೆ ನೇಯಿಸುವದಕ್ಕೆ ಬಹು ಕೀರ್ತಿಗೊಳ್ಳುವದೊಂದು ಯಂತ್ರಸಾಲೆ ನಿರ್ಮಿಸಿದ್ದಲ್ಲದೆ ತನ್ನ ದೇಶಕ್ಕೆ ವ್ಯಾಪಾರದಿಂದ ಅಧಿಕ ಲಾಭ ಬರುವಂತೆಯೂ ಸಕಲ ಪರಿಯ ಸಮಾಧಾನ ಬರುವಂತೆಯೂ ಪ್ರಯಾಸ ಪಡುತ್ತಿದ್ದನು. ಇಷ್ಟೆಲ್ಲ ಕಂಡು, ಧೊರೆತನದವರು ಅವನಿಗೆ ೧೮೦೧ನೇ ವರುಷದಲ್ಲಿ ಪ್ರಭುತ್ವ ಕೊಟ್ಟರು. ಮರು ವರುಷದಲ್ಲಿ ಅವನು ಹತ್ತಿಯ ಮತ್ತು ಉಣ್ಣೆಯ ಕೆಲಸ ಕಲಿಯುವವರ ಉಪಕಾರಕ್ಕಾಗಿ ಒಂದು ಪತ್ರಿಕೆ ಬರೆದು, ರಾಜಸಭೆಯಲ್ಲಿ ಓದಿದನು. ದೇಶದ ವಿದ್ಯಾಭಂಡಾರಕ್ಕೆ ಅವನು ಸಹಾಯದಾಡಳಿತೆಗಾರನಾಗಿ, ಒಂದು ಪ್ರಖ್ಯಾತಿ ಪಟ್ಟ ಧರ್ಮಸಾಲೆಯ ಮುಖ್ಯಸ್ಥನಾದನು. ಅವನ ಮಗನಾದ ರೋಬರ್ಟನು ಹಿಂದಗಡೆ ದೇಶದ ಪ್ರಧಾನಿಗಳಲ್ಲಿ ರಾಜಿಸಿದನು.

ಇಂಗ್ಲಾಂಡಿನಲ್ಲಿ ಪ್ರಭುತ್ವ ಹೊಂದಿದ ಕೆಲವರ ಪಿತೃಗಳ ಕೆಲಸ ಹೇಳುವ— ಕೊರ್ನ್ವಾಲಿಸ್ ಪ್ರಭುತ್ವದವರ ಮೂಲಸ್ಥನು ವರ್ತಕನು, ಎಸ್ಸೆಕ್ಸ್ ಪ್ರಭುತ್ವದವರ ಮೂಲನ್ಥನು ಬಟ್ಟೆ ಮಾರುವವನು, ಕ್ರೇವನ್ ಪ್ರಭುತ್ವದವರವನು ದರ್ಜಿ, ವಾರ್ವಿಕ್ ಪ್ರಭುತ್ವದವರವನು ಉಣ್ಣೆಕೆಲಸದವನು, ನಾರ್ಥಂಬರ್ಲಾಂಡ್ ಪ್ರಭುತ್ವದವರವನು ವೈದ್ಯನು, ಡಾಟ್ಮೌತ್ ಅದರವರವನು ತೊಗಲುಗಾರನು, ರಾಡ್ನರ್ ಅದರವರವನು ರೇಶ್ಮೇ ನೇಯಿಕಾರನು ಆಗಿದ್ದನು.

ಇಂಗ್ಲಾಂಡಿನಲ್ಲಿ ಹ್ಯಾಗೋ ಹಾಗೆಯೇ ಜರ್ಮನಿಯಲ್ಲಿ ಅನೇಕರು ಕೆಳಗಿನ ಸ್ಥಿತಿಯಲ್ಲಿದ್ದು ಮೇಲಿನ ಸ್ಥಿತಿಯವರಾದರು. ಲುಥರನೆಂಬ ಲೋಕಪ್ರಸಿದ್ಧಿಯಾದ ದೇವವಾಕ್ಯಬೋಧಕನ ತಂದೆಯು ಲೋಹಗಣಿಗಳಲ್ಲಿ ಕೆಲಸ ಮಾಡುವ ಬಡ ಆಳುಗಳಲ್ಲಿ ಒಬ್ಬನಾಗಿದ್ದನು; ಫುಗ್ಗರ್ ಎಂಬ ಪ್ರಭುಗಳ ತಂದೆ ನೇಯಿಕಾರನಾಗಿದ್ದನು; ಇತ್ಯಾದಿ ದೃಷ್ಟಾಂತಗಳನ್ನು ಹೇಳ ಬಹುದು.

ರೋಬರ್ಟ್‌ಪೀಲ್ ಪ್ರಭು ಹೇಳಿದ ಮಾತನ್ನು ಸಕಲ ಕುಲದ ಯೌವನಸ್ಥರು ನೆನಪು ಮಾಡಿ ಕೊಳ್ಳ ತಕ್ಕದ್ದು, ಏನಂದರೆ—ಒಬ್ಬೊಬ್ಬನು ಜಾಗ್ರತೆಯಾಗಿಯೂ ಬಿಡದಂಥಾ ಛಲವಾಗಿಯೂ ಕೆಲಸ ಮಾಡುವದರಿಂದಲೇ ದೊಡ್ಡಸ್ತಿಕೆ ಪಡಕೊಳ್ಳ ಬ

ಹುದು. — ಅದಲ್ಲದೆ ನಾವು ಹೇಳುವದೇನಂದರೆ — ದೇವರನ್ನು ಬೇಡಿ ಕೊಳ್ಳುತ್ತ ಯಾವದೊಂದು ಸುವೃತ್ತಿ ಸಾಗಿಸಿದರೆ ಸಿದ್ಧಿಸುವದು.

## 68. HUMILITY OF A KING

## ೬೮. ರಾಜವಿನಯವು

"ರಾಣಿಯಾದರೆ ಗೋಣಿ ಯೆತ್ತ ಬಾರದೇ?"
ಗಾದೆ.

ಕ್ರಿಸ್ತಶಕದ ೧೭೬೦ನೇ ವರುಷದಲ್ಲಿ ೩ನೇ ಜಾರ್ಜ್ ಎಂಬಾತನು ಇಂಗ್ಲಾಂಡಿನ ಅರಸನಾದನು; ಆತನು ಒಳ್ಳೇ ಗೃಹಯಜಮಾನನು ಆಗಿದ್ದದ್ದಲ್ಲದೆ ಬಹು ವಿನಯಭಾವದಿಂದ ಬಡ ಜನರನ್ನು ಮಾತಾಡಿಸುತ್ತಿರುವನು. ವಿಂಡ್ಸರ್ ಎಂಬ ಅರಮನೆಯ ಹತ್ತರದವರೆಲ್ಲರೂ ಆತನ ದಯಾಭಾಷೆಗಳನ್ನು ನೆನಸಿ ಹೇಳುತ್ತಿದ್ದರು. ಅವರಲ್ಲಿ ಒಬ್ಬ ಒಕ್ಕಲಿಗನು ಹೇಳಿದ್ದನ್ನು ಕೇಳಿರಿ. —

ಕೆಲವು ವರುಷದಿಂದ ಹತ್ತು ವರುಷದವನಾದ ಒಬ್ಬ ಹುಡುಗನು ನನ್ನ ದನ ಕಾಯುವ ಚಾಕರಿ ಮಾಡುತ್ತ ಬಂದನು. ಅವನು ಕುರೂಪವುಳ್ಳವನು. ಬೇಸಿಗೆಗಾಲದ ಒಂದು ದಿನದಲ್ಲಿ ಅವನು ರಾಜಮಾರ್ಗದ ಹತ್ತರ ಒಂದು ಗೋಡೆಯ ಮೇಲೆ ಕುಳಿತುಕೊಂಡು, ಕೈಯಲ್ಲಿ ಒಂದು ಪುಸ್ತಕ ಹಿಡುಕೊಂಡು, ನನ್ನ ಹಿಂಡು ಮೇಯಿಸುತ್ತಿರಲು, — ಆ ಅರಸನು ಮುಂಚಿನಂತೆ ಏಕಸ್ಥನಾಗಿ ಆ ಮಾರ್ಗದಲ್ಲಿ ಅಡ್ಡಾಡುತ್ತ ಇದ್ದು, ಫಕ್ಕನೆ ನಿಂತು, ಆ ಹುಡುಗನ ಮೇಲೆ ದಿಷ್ಟಿಯಿಟ್ಟು, ಅವನ ಬಳಿಗೆ ಹೋಗಿ, ಎಲೆ ಹುಡುಗನೇ, ನಿನ್ನ ಕೈಯದೇನು ಪುಸ್ತಕವೆಂದು ಕೇಳಿದನು. ಹುಡುಗನು ಅಂಜದೆ, ಇದೊಂದು ಅಕ್ಷರಮಾಲೇ ಪುಸ್ತಕವಯ್ಯ ಎಂದು ಉತ್ತರ ಕೊಡಲು, — ಓದಲಿಕ್ಕೆ ಬರುತ್ತದೋ? ಎಂತ ಆ ರಾಜನು ವಿಚಾರಿಸಿದನು. ಆ ಹುಡುಗನು ಸ್ವಲ್ಪ, ಸ್ವಲ್ಪ ಎಂಬದಕ್ಕೆ ರಾಜನು — ಹಾಗಾದರೆ ನೋಡೋಣವೆಂದು, ಬಡವನ ಪುಸ್ತ

ಕ ತಾನು ತೆಗೆದು, ಸಾಲೇ ಐಯ್ಯನ ಹಾಗೆ ಪರೀಕ್ಷೆ ತೆಗೆಯುತ್ತಾ, ಮೊದಲು ಒಂದೇ ಮಾತ್ರಕೆಯ ಮಾತುಗಳನ್ನು ಓದಿಸಲಾಗಿ ಅದು ಆ ಹುಡುಗನಿಗೆ ಚಂದಾಗಿ ಬರುತ್ತದೆಂದು ತಿಳುಕೊಂಡು, ಆದರೆ ಈಗ ಬಹಳ ಮಾತ್ರಕೆಯ ಮಾತುಗಳನ್ನು ಓದ ಬಹುದೋ ಎಂತ ಕೇಳಿದನು. ಹೀಗೆ ಕಾಣುತ್ತದೆಂದು, ಹುಡುಗ ನುಡಿಯೋಣ, — ಹಾಗಾದರೆ ಈ ಮಾತು ಏನು? ಎಂದು ಆ ದೊಡ್ಡ ಐಯ್ಯನು ಬೆಸಗೊಂಡಾಗ ಪರಲೋಕಾಸ್ಥಿ ಎಂದು ಹುಡುಗನು ಓದಿದನು. ಕಂದ, ಸರಿ, ಆದರೆ ಇದು ಏನು? ಎಂದು ರಾಜನು ತಿರಿಗಿ ಕೇಳಿದ್ದಕ್ಕೆ ಅವನು ಕೃಪಾತಿಶಯಾನ್ವಿತ ಎಂಬಂತೆ ಓದಿದನು. — ಸಮ, ಈಗ ಸಾಕಾಯಿತು, ಸಾಲೆಗೆ ಹೋಗುತ್ತೀಯೋ? ಮತ್ತು ದೇವರ ವಾಕ್ಯ ಓದುವ ರೂಢಿ ಉಂಟೋ ಎಂತ ರಾಜನು ಕೇಳೋಣ, — ಸಾಲೆಗೆ ನನ್ನನ್ನು ಕಳುಹಿಸುವದಕ್ಕೆ ಬಡವಳಾದ ನನ್ನ ತಾಯಿಗೆ ಹಣವಿಲ್ಲ, ಅದು ಹೊರ್ತಾಗಿ ನಮ್ಮ ಮನೆಯ ದೇವವಾಕ್ಯದ ಭಾಗವು ಹರಿದು ಮಾಸಿ ಕೆಲಸಕ್ಕೆ ಬಾರದೆ ಹೋಯಿತು ಎಂದು, ಆ ಹುಡುಗನು ಹೇಳಲಾಗಿ ರಾಜನು — ಕಷ್ಟ, ಬಹಳ ಕಷ್ಟ, ನಿನ್ನ ತಾಯಿಯ ಹೆಸರೇನು? ಅವಳ ಮನೆ ಎಲ್ಲಿ? ಎಂಬದಾಗಿ ವಿಚಾರಣೆ ಮಾಡಿ, ಹುಡುಗನು ಹೇಳಿದ ಗೊತ್ತೆಲ್ಲಾ ಸೀಸಲೆಖಣಿಯಿಂದ ಒಂದು ಚಿಕ್ಕ ಪುಸ್ತಕದಲ್ಲಿ ಬರೆದು, ಕಿಸೆಯೊಳಗೆ ಹಾಕಿ ಕೊಂಡು ಹೋಗಿ ಬಿಟ್ಟನು. ಆಗ ಆ ಬಡ ಹುಡುಗನಿಗೆ ಬಹಳ ದುಖ್ಖ ಬಂತು, ಯಾಕಂದರೆ ಆ ಧೊರೆ ತನಗೇನಾದರೂ ಒಂದು ಇನಾಮು ಕೊಟ್ಟಾನೆಂದು ನೆನಸಿದ್ದನು.

ಅರಸನು ಅರಮನೆಯನ್ನು ಶೇರಿದಾಗಲೇ ತನ್ನ ಬರಹಕರ್ತನನ್ನು ಕರೆಸಿ, ಅವನ ಮುಂದೆ ಅಂದದ್ದು – ನೆರೆಯ ಬಡ ಜನರಿಗೆ ತಕ್ಕಷ್ಟು ವಿದ್ಯಾಸಂಪಾದನೋಪಾಯಗಳು ಇಲ್ಲವಿಲ್ಲ, ಹೆಚ್ಚಾಗಿ ಅವರ ಚಿಂತೆ ಪಡ ಬೇಕು, ನನ್ನ ಕೈಯಲ್ಲಿರುವ ಗಂಟಿನಲ್ಲಿ ಯಾರ ಹೆಸರು ಬರದದೆಯೋ, ಅವಳ ಬಳಿಗೇ ತಡ ಮಾಡದೆ ಅದನ್ನು ಕಳುಹಿಸಿ, ನಿನ್ನ ಮಗನಿಗೆ ಹೆಚ್ಚು ವಿದ್ಯೆ ಕಲಿಸ ಬೇಕೆಂತ ಅರಸನು ಈ ಪುಸ್ತಕವನ್ನು ನಿನಗೆ ಇನಾಮಾಗಿ ಕೊಡಿಸುತ್ತಾನೆಂದು ಅವಳಿಗೆ ತಿಳಿಸಿ, ಅವಳ ಸ್ಥಿತಿ ಗತಿ ವಿಚಾರಿಸಿ, ಅವಳ ಮಗನು ಸಾಲೆಗೆ ಹೋಗುವ ಹಾಗೆ ಸಹಾಯ ಮಾಡ ಬೇಕು; ನಮ್ಮ ರಾಜ್ಯದಲ್ಲಿ ಯಾರಾರೂ ದೇವವಾಕ್ಯವನ್ನು ಓದುವ ಮಾರ್ಗವಿರ ಬೇಕು.

ಆ ಬರಹಕರ್ತನು ವಂದಿಸಿ ಅರಸನ ಕೈಯಿಂದ ತಕ್ಕೊಂಡ ದೇವವಾಕ್ಯದ ಆ ಪುಸ್ತಕದೊಳಗೆ ಅರಸನು ತಾನೇ ೬೦ ರೂಪಾಯಿಯ ಹುಂಡಿ ಶಿಕ್ಕಿಸಿ, ಸ್ವಂತ ಕೈಯಿಂದ ೩ನೇ ಜಾರ್ಜ್ ರಾಜನು ಕೊಟ್ಟದ್ದೆಂದು ಬರೆದಿದ್ದನು.

ಆ ಬಡವಳ ಹುಡುಗನು ಆ ಮೇಲೆ ಸಾಲೆಗೆ ಹೋಗಿ ವಿದ್ಯೆ ಕಲಿತನೆಂದು ವಿವರಿಸ ಬೇಕಾಗುವದಿಲ್ಲ; ಆದರೆ ಅವಳು ಆ ದೇವವಾಕ್ಯಕ್ಕೆ ಬಲು ಪ್ರೀತಿ ಮಾಡಿ, ಅರಸನು ಮೃತವಾದ ಹಿಂದೆ ಆ ಪುಸ್ತಕವನ್ನು ಬಹಳ ರೂಪಾಯಿ ಹೇಳಿ ಕೊಂಡು ಕೊಳ್ಳುವದಕ್ಕೆ ಬಂದ ಜನರಿಗೆ ಕೊಡದೆ, ತನ್ನ ಜೀವಾಂತ್ಯದ ವರೆಗೂ ಬಹಳ ಜೋಕೆ ಮಾಡಿ ಕೊಂಡಿರುವಳು.



## 69. AN EREMIT

## ೬೯. ವನವಾಸಿ

"ಪ್ರೀತಿ ಇದ್ದರೂ ನೀತಿ ತಪ್ಪಿಸ ಬಾರದು.,,
ಗಾದೆ.

ಬಹಳ ವರುಷಗಳ ಹಿಂದೆ ಒಬ್ಬ ವನವಾಸಿಯು ಅನೇಕ ದಿವಸ ಏಕಸ್ಥನಾಗಿ ಕಾಡಿನೊಳಗಿದ್ದ ಮೇಲೆ ದೇವರ ನೀತಿಯ ವಿಷಯವಾಗಿ ಅವನ ಅಂತರಂಗದೊಳಗೆ ದೂಷಣಾಲೋಚನೆಗಳು ಹುಟ್ಟಿ, ಹಗಲಿರುಳು ಅವನನ್ನು ಕಾಡಿಸುತ್ತಿರುವವು. ಒಂದಾನೊಂದು ದಿವಸದಲ್ಲಿ ಅವನು ದುಃಖಾಕ್ರಾಂತನಾಗಿ ತನ್ನ ಆಶ್ರಮದ ಹೊಸ್ತಿಲಲ್ಲಿ ಕುಳಿತಿರಲಾಗಿ ಸೌಂದರ್ಯರೂಪವುಳ್ಳವನೊಬ್ಬ ಯೌವನಸ್ಥನು ಅವನ ಹತ್ತರ ಬಂದು ಹೇಳಿದನು: ಎಲೇ, ಮಿತ್ರನೇ, ನಾವಿಬ್ಬರೂ ಹೋಗಿ, ದೇವರ ರಹಸ್ಯನೀತಿಯ ವಿಚಾರಣೆ ಮಾಡುವ!—ಆ ವನವಾಸಿ ಸಂತುಷ್ಟನಾಗಿ ಒಡಂಬಟ್ಟು, ಎದ್ದು, ಅವನ ಸಂಗಡ ನಡೆಯೋಣ,—ಸಾಯಂಕಾಲದಲ್ಲಿ ಒಬ್ಬ ಬಡ ದೇವಭಕ್ತನ ಮನೆ ಹೊಕ್ಕರು. ಇವನು ತನ್ನ ಕೈಯಲ್ಲಾಗುವಷ್ಟು ಉಪಚಾರ ಮಾಡಿ, ಕಡೆಗೆ ತನ್ನ ಒಂದೇ ದ್ರವ್ಯವಾಗಿರುವದೊಂದು ಬೆಳ್ಳಿಯ ಪಂಚಪಾತ್ರೆಯಲ್ಲಿ ಅವರಿಗೆ ದ್ರಾಕ್ಷಾರಸ ಕುಡಿಯ ಕೊಟ್ಟನು. ಆ ಬಡವನು ಆ ಪಂಚಪಾತ್ರೆಗೆ ಅಧಿಕ ಪ್ರೀತಿ ಮಾಡುತ್ತಿರುವನು. ರಾತ್ರಿಯಲ್ಲಿ ಏನಾಯಿತಂದರೆ—ಆ ಯೌವನಸ್ಥನು ಆ ಪಾತ್ರೆ ಕದ್ದು ಕೊಂಡು, ತನ್ನ ಚೀಲದೊಳಗೆ ಬಚ್ಚಿಟ್ಟು ಕೊಂಡನು. ಹೊತ್ತಾರೆ ಅವನು ತನ್ನ ಸಂಗಡ ಹೊರಟು ಬಂದ ವನವಾಸಿಗೆ ಅದನ್ನು ತೋರಿಸುವಾಗ ಇವನು ಬಹು

ವ್ಯಸನ ತಾಳಿ, ಅಕಟಾ, ಆ ಬಡವನಿಗೆ ಎಂಥಾ ಅನ್ಯಾಯ ಮಾಡಿದಿ! ಎಂದು ಹಲುಬಿದನು; ಆದರೆ ಅವನ ಜತೆಯಾಳು ಅವನ ಮಾತಿಗೆ ಏನೂ ಚಿಂತೆ ಪಡಲಿಲ್ಲ.

ಬಳಿಕ ಅವರಿಬ್ಬರು ಮತ್ತೊಂದು ದಿನದ ಪ್ರಯಾಣ ಮುಗಿಸಿರುವಂದು ಒಬ್ಬ ಐಶ್ವರ್ಯವಂತನ ಮಂದಿರದಲ್ಲಿ ಉಳುಕೊಂಡರು. ಇವನು ಬಹು ಶಿಟ್ಟುಳ್ಳ ನರನಾಗಿರುವದರಿಂದ ಆತಿಥ್ಯವರಿಯದವನ ಹಾಗೆ ನಡೆದು, ಆ ಇಬ್ಬರನ್ನು ಹ್ಯಾಗೂ ಮೆಚ್ಚಿಸಲಿಲ್ಲ. ಆದರೂ ಅವರಿಬ್ಬರು ಅರುಣೋದಯದ ಹೊತ್ತಿನಲ್ಲಿ ಹೊರಡುವಾಗ ಆ ಯೌವನಸ್ಥನು ತಾನು ಆ ದೇವಭಕ್ತನಿಂದ ಕದ್ದು ಕೊಂಡು ಬಂದ ಬೆಳ್ಳೀ ಪಾತ್ರೆಯನ್ನು ಈ ಶಿಟ್ಟಾಳಿಗೆ ಕೊಟ್ಟು ಬಿಟ್ಟನು. ಅದರ ಸಲುವಾಗಿ ಆ ವನವಾಸಿಗೆ ಮತ್ತು ದುಖ್ಖ ಹುಟ್ಟಿತು; ಈ ಯೌವನಸ್ಥನು ಅನ್ಯಾಯಗಾರನೇ, ಸರಿ ಎಂದು ತನ್ನೊಳಗೆ ಆಲೋಚಿಸಿಕೊಂಡು ಬಾಬ್ಬಿಟ್ಟರೂ ಮುಂಚಿನಂತೆ ಅವನ ಜತೆಗಾರನು ಅವನ ಖೇದವ ಮನಸ್ಸಿಗೆ ತಕ್ಕೊಳ್ಳಲಿಲ್ಲ.

ಮೂರನೇ ರಾತ್ರಿಗೆ ಅವರಿಬ್ಬರು ಮತ್ತೊಬ್ಬ ದರಿದ್ರನ ಮನೆಯಲ್ಲಿ ವಸ್ತಿ ಮಾಡಲಿಕ್ಕೆ ಶೇರಲು, —ಅದರಲ್ಲಿ ಚಿಕ್ಕ ಮಕ್ಕಳು ಬಹಳ ಇದ್ದರು, ಮತ್ತು ಅನ್ನಕ್ಕೆ ಉಪ್ಪು ಸಾಲಿಲಿಲ್ಲ. ಆದರೆ ಆ ಮನೆಯಜಮಾನನು ಬಲು ಪ್ರೀತಿಯಿಂದ ತನ್ನಗಿದ್ದದನ್ನು ಆ ಬೇಸತ್ತು ಬಂದ ಪ್ರಯಾಣಸ್ಥರಿಗೆ ಕೊಟ್ಟನು. ಆ ಯೌವನಸ್ಥನು ಕೋಳಿ ಕೂಗುವದಕ್ಕಿಂತ ಮುಂಚೆ ಎದ್ದು, ಮನೆಗೆ ಬೆಂಕಿ ಇಟ್ಟು, ವನವಾಸಿಯನ್ನು ಕರಕೊಂಡು ಹೋದನು. ಅವರಿಬ್ಬರು ಇನ್ನೂ ದೂರ ಹೋಗದಿರುವಾಗ ಉರಿ ಮಾಡು ಹಿಡಿದ್ದು ತೋರಿತು. ವನವಾಸಿಯು—ಆ ಮನೆಗೆ ಯಾರು ಕಿಚ್ಚು ಹಚ್ಚಿದನೆಂದು ಕೇಳೋಣ, —ಯೌವನಸ್ಥನು ನಾನೇ ಎಂದದಕ್ಕೆ ಅವನು ಕೋಪ ತಾಳಿ ಬೈದರೂ ಆ ಯೌವನಸ್ಥನು ಕಿಂಚಿತ್ತೂ ಲಕ್ಷ್ಯವಿಡಲಿಲ್ಲ.

ನಾಲ್ಕನೇ ಹಗಲು ಸಂದಾಗ ಒಬ್ಬ ಗೃಹಸ್ಥನು ಬಹು ಸಲಿಗೆಯಿಂದ ಅವರನ್ನು ತನ್ನ ಮನೆಯೊಳಗೆ ಶೇರಿಸಿ, ಬಹಳ ರುಚಿಕರವಾದ ಭೋಜನ ಮಾಡಿಸಿ ಕೊಟ್ಟು, ಉಪಚರಿಸಿ, ಕಡು ಜ್ವರದಲ್ಲಿ ಬಿದ್ದಿರುವ ತನ್ನ ಮಗನ ಮಂಚಕ್ಕೆ ಅವರನ್ನು ಕರಕೊಂಡು ಹೋಗಿರಲು,—ಆ ಯೌವನಸ್ಥನು ತನ್ನ ಕಿಶಿಯದೊಂದು ಶೀಸೆ ತಕ್ಕೊಂಡು, ಅದರೊಳಗಿನ ರಸದಲ್ಲಿ ಎರಡು ಮೂರು ಹನಿಯನ್ನು ಹುಡುಗನ ಬಾಯಿಗೆ ಬಿಟ್ಟನು; ತದನು ಕೆಲವು ನಿಮಿಷದ ಮೇಲೆ ಹುಡುಗನು ತೀರಿದನು. ಅದೇನು ಕ್ರೂರತನವೆಂದು, ಆ ವನವಾಸಿ ಭಯಪುಳುಕಿತನಾದನು. ರವಿಯ ರೇಶ್ಮೆ ಹರಿಯುವಾ ಹೊತ್ತು ಮನೆಯಜಮಾನನು ಅವರನ್ನು ಸಾಗಿಸಿ ಕಳುಹಿಸುವದಕ್ಕೆ ಅವರ ಮುಂದೆ ಒಂದು ಇಕ್ಕಟ್ಟು ಸಂಕ ದಾಟುತ್ತಿರಲು,—ಯೌವನಸ್ಥನು ಅವನನ್ನು ಸಂಕದಿಂದ ದಾಬ್ಬಿ

ಹಾಕಿದನು. ಆಗಲವನು ಕೆಳಗೆ ಹರಿಯುವ ಹೊಳೆಯ ಉದ್ದವಾದ ನೀರೊಳಗೆ ಮು
ಳುಗಿ ಸತ್ತನು. ವನವಾಸಿಯು ಅದನ್ನು ಕಂಡು, ಈ ಕೆಡಕನ ಸಂಗತಿ ನನಗೆ ಸಾಕಾ
ಯಿತೆಂದು, ಯೌವನಸ್ಥನನ್ನು ಬಿಟ್ಟು ಹೋಗುವಾಗಲೇ ಇವನು ಕರೆದು ಹೇಳಿದ್ದೇ
ನಂದರೆ —

ನೀನು ನೆನಸುವಂತೆ ನಾನು ಕೆಡಕನಲ್ಲ, ನಾನು ದೇವರ ದೂತನಾಗಿದ್ದೇನೆ;
ನೀನು ನೋಡ ಬಯಸಿದ ತನ್ನ ನೀತಿಯನ್ನು ತೋರಿಸುವದಕ್ಕೋಸ್ಕರ ದೇವರು ನನ್ನ
ನ್ನು ನಿನ್ನ ಬಳಿಗೆ ಕಳುಹಿಸಿದ್ದಾನೆ; ತಿಳುಕೋ, ಮೂಢನೇ, ಆ ಬಡವನ ಪಂಚಪಾತ್ರೆ
ಯನ್ನು ನಾನು ತಕ್ಕೊಂಡು ಹೋದೆನಲ್ಲ? ಅವನು ಅದಕ್ಕೆ ಹೆಚ್ಚಾಗಿ ಮೆಚ್ಚಿ ಕೊಂಡು,
ದೇವಪ್ರಾರ್ಥನೆಯಲ್ಲಿಯೂ ಅದರ ಮೇಲೆ ಮನಸು ಹೋದವನಾಗಿರುತ್ತಿದ್ದನು, ಅ
ವನ ಭಯಭಕ್ತಿ ನಿರ್ಮಲವಾಗುವಂತೆ ಅದನ್ನು ತಕ್ಕೊಂಡೆನು; ಮತ್ತು ಆ ಪಾತ್ರೆಯ
ನ್ನು ಆ ಶಿಟ್ಟುಳ್ಳ ಐಶ್ವರ್ಯವಂತನಿಗೆ ಕೊಟ್ಟೆನಲ್ಲ? ಯಾಕಂದರೆ ಅವನು, ತನಗೆ ದೇ
ವರ ಪ್ರೀತಿಯಿಲ್ಲದಿದ್ದರೂ, ಸ್ವಭಾವದಿಂದ ಒಂದು ಎರಡು ಉಪಕಾರ ಮಾಡಿರ ಬ
ಹುದು, ಈ ಜೀವದ್ದನ್ನು ಹುಡುಕಿ ಕೊಳ್ಳುವಂಥ ಅವನು ಇಹದ ಫಲ ಹೊಂದುವಂ
ತೆಯೂ ಈ ವಿಷಯಕ್ಕೆ ಅವನ ಬಾಯಿ ಮುಚ್ಚಿ ಕೊಂಡು ಹೋಗುವಂತೆಯೂ ಆ
ಪಾತ್ರೆಯನ್ನು ಅವನಿಗೆ ಕೊಟ್ಟೆನು; ಮತ್ತು ಆ ಪ್ರೀತಿಯುಳ್ಳ ಬಡವನ ಮನೆಗೆ ಬೆಂಕಿ
ಹಾಕಿದೆನಲ್ಲೋ? ಅದು ಕರುಣೆಯಿಂದ ಆಯಿತು, ಹ್ಯಾಗಂದರೆ ಮನೆ ಸುಟ್ಟೆಡೆಯ
ಲ್ಲಿ ಅವನು ಅಗಿದು, ಹೇರಳ ದ್ರವ್ಯ ಕಂಡು, ಅದರಿಂದ ದೊಡ್ಡ ಮನೆ ಕಟ್ಟಿಸಿ, ಸುಖ
ಸ್ಥನಾದನು; ಮತ್ತು ನಾಲ್ಕನೇ ರಾತ್ರಿಯಲ್ಲಿ ಆ ಸಲಿಗೆಯ ಗೃಹಸ್ಥನ ಮಗನನ್ನು ವಿ
ಷ ಕೊಟ್ಟು ಕೊಂದೆನಲ್ಲ? ಇದರಲ್ಲಿ ದೇವರ ಕೃಪೆ ಕೇಳು, ಹ್ಯಾಗಂದರೆ ಆ ಗೃಹಸ್ಥನು
ಕಳ್ಳನೂ ಕೊಲೆಗಾರನೂ ಆಗಿ, ತನ್ನ ಮಗನಿಗೆ ಅದೇ ಬುದ್ಧಿ ಕಲಿಸುತ್ತಾ ಬಂದದರಿಂ
ದ ಮಗನು ಸಹಾ ದುರ್ಮಾರ್ಗದಲ್ಲಿ ಕೆಟ್ಟು ಹೋಗುವ ಹಾಗೆ ಆಗಿತ್ತು, ಆದದರಿಂದ
ಅವನನ್ನು ಈ ಲೋಕದಿಂದ ತೆಗೆದೆನು; ಮತ್ತು ಆ ಗೃಹಸ್ಥನನ್ನು ಸಂಕದಿಂದ ಹೊಳೆ
ಯೊಳಗೆ ನೂಕಿಸಿ, ಕೊಂದು ಬಿಟ್ಟೆನಲ್ಲ? ಅದು ಅವನ ಉತ್ತಮ ಧನಿಯನ್ನು ಉಳಿ
ಸುವದಕ್ಕಾಯಿತು, ಹ್ಯಾಗಂದರೆ ಆ ಗೃಹಸ್ಥನಲ್ಲಿ ನಾಳೆ ಈತನ ಜೀವ ಹತ ಮಾಡು
ವ ಆಲೋಚನೆ ಇತ್ತು.

ಹೀಗೇ ನುಡಿದು, ಆ ದೂತನು ಮಾಯೆ ಆದನು; ಆದರೆ ಆ ವನವಾಸಿ ಸಂ
ತುಷ್ಟನಾಗಿ, ದೇವರ ನೀತಿ ಕೊಂಡಾಡುತ್ತಾ ತನ್ನ ಆಶ್ರಮಕ್ಕೆ ತಿರುಗಿದನು.

## 70. HANS SACHS

# ೭೦. ಹನ್ಸ್ ಸಕ್ಸ್

"ದೀನತ್ವ ಹೀನತ್ವವಲ್ಲ"
ಗಾದೆ.

ಕ್ರಿಸ್ತ ಶಕದ ೧೪೯೪ನೇ ವರುಷದಲ್ಲಿ ಜರ್ಮನಿ ದೇಶದ ನೀರ್ನ್ಬೆರ್ಗ್ ಎಂಬ ಪಟ್ಣದಲ್ಲಿ ಸಕ್ಸ್ ಎಂಬ ಭಕ್ತಿಯುಳ್ಳ ಸಿಂಪಿಗಾರನಿರಲು, — ಆ ವರುಷದ ೫ನೇ ನವಂಬರಿಗೆ ಅವನ ಹೆಂಡತಿ ಹನ್ಸ್ ಎಂಬ ಮಗನನ್ನು ಹಡೆದಳು. ಅವನ ತಂದೆ ತಾಯಿಗಳು ಅವನನ್ನು ದೇವರ ಭಯಭಕ್ತಿಯಲ್ಲಿ ಸಾಕಿಕೊಂಡು, ಏಳು ವರುಷದವನಾದವನನ್ನು ಪಟ್ಣದ ವಿದ್ಯಾಶಾಲೆಗೆ ಕಳುಹಿಸಿದ ಮೇಲೆ ಆ ಚಿಕ್ಕ ಹನ್ಸನು ಬಹಳ ಬುದ್ಧಿ ತೋರಿಸಿ, ಕಲಿಯಲಿಕ್ಕೆ ಆತುರನಾಗಿರುವದರಿಂದ ದೇವರು ಅವನನ್ನು ಕೈಕೆಲಸ ಜೀವನಕ್ಕೆ ನೇಮಿಸಲಿಲ್ಲವೆಂಬ ಹಾಗೆ ಕಂಡಿತು. ಆದರೂ ತನ್ನ ೯ನೇ ವರುಷದಲ್ಲಿ ಅವನು ಕಡು ಜ್ವರದಿಂದ ಅನೇಕ ದಿವಸ ಬಿದ್ದುಕೊಂಡಿದ್ದನಂತರ ಇನ್ನೂ ವಿದ್ಯಾಭ್ಯಾಸ ಮಾಡ ಕೂಡದಂತೆ ಅವನ ತಲೆಯ ತ್ರಾಣ ತಪ್ಪಿ ಹೋಯಿತು. ಆದ ಕಾರಣ ತಂದೆಯು ೧೫ ವರುಷದವನಾದ ತನ್ನ ಮಗನನ್ನು ಮಚ್ಚೆಕೆಲಸ ಕಲಿಯುವದಕ್ಕಾಗಿ ಒಬ್ಬ ಮಚ್ಚೆಗಾರನ ಬಳಿಯಲಿಟ್ಟನು. ಆ ಸಮಯದಲ್ಲಿ ಅತಿ ಕೀರ್ತಿ ಪಟ್ಟ ಒಬ್ಬ ಕಾವ್ಯಗಾರನು ಅವನ ಬುದ್ಧಿಚಾತುರ್ಯವನ್ನು ಕಂಡು, ಅವನಿಗೆ ಕಾವ್ಯವಿದ್ಯೆ ಕಲಿಸುವವನಾದನು. ಹನ್ಸನು ತನ್ನ ಉದ್ಯೋಗವನ್ನು ಬೇಸರಗೊಳ್ಳದೆ ಚಂದಾಗಿ ಸಾಧಿಸಿಕೊಂಡ ಉಚಿತ ವಾಡಿಕೆ ಇದ್ದಂತೆ ಹೆಚ್ಚು ಯುಕ್ತಿ ಸಂಪಾದಿಸಿ ಕೊಳ್ಳುವದಕ್ಕಾಗಿ ಸ್ವದೇಶವನ್ನು ತಿರುಗುವವನಾಗಿ, ಮಿಕ್ಕ ಯೌವನಸ್ಥರ ಹಾಗೆ ವೈಗಳ್ತನ ಪಟಿಂಗತನ ಹೊಟ್ಟೆಬಾಕತನಗಳಿಗೆ ಒಲಿಯದೆ, ಹಿತವೂ ಧಿಟವೂ ಯಾವದೋ ಅದರ ಜ್ಞಾನವೇ ಪಡಕೊಂಡು, ಮುಖ್ಯವಾಗಿ ಅನೇಕ ಪಟ್ಣಗಳ ಕವಿಶಾಲೆಗಳಲ್ಲಿ ಅಭ್ಯಾಸಿಸಿ, ತಾನೇ ಕಾವ್ಯದಲ್ಲಿ ಅತಿ ಪ್ರವೀಣನಾದನು. ತನ್ನ ಮೊದಲನೇ ಕಾವ್ಯವನ್ನು ಅವನು ಲೌಕಿಕ ಹೀನ ವಸ್ತುಗಳಿಗಲ್ಲ, ಉಪಕಾರಕರ್ತನಾದ ದೇವರಿಗೆ ವಂದಿಸಿ ಕೊಟ್ಟನು. ಪಯಣ ಸಾಕಾಯಿತೆಂದು, ೨೨ ವರುಷದವನಾಗಿ ಸ್ವಪಟ್ಣಕ್ಕೆ ತಿರುಗಿ, — ಒಂದೊಂದು ಸ್ಥಿತಿಯಲ್ಲಿ ದೇವರಿಗೆ ಸೇವೆ ಮಾಡ ಬಹುದು, ದೇವರು ಲೋಕದಲ್ಲಿ ಫಳಿಸಿ ಕೊಂಡ

ಮಾನ ಧನಗಳನ್ನೆಲ್ಲಾ ಶಕ್ತಿಯುಳ್ಳ ಹೃದಯವನ್ನು ನೋಡುತ್ತಾನೆಂದು, ನಾಚಪೆ, ಮುತ್ಥೀ ಕೆಲಸ ನಡಿಸುವವನಾಗಿರುವಷ್ಟರೊಳಗೆ ಅನೇಕಾನೇಕ ಸುರಚಿತ ಕಾವ್ಯಗಳನ್ನು ಮಾಡುತ್ತಿರುವನು. ಇವು ಗೊಂಬೆಗಳ ಸಂಗಡ ಆಗಿಂದಾಗೆ ಛಾಪೆ ಆಗುವಾಗ ಅವನ ಕೀರ್ತಿ ದೊಡ್ಡದಾಯಿತು. ಹನ್ಸನು ತನ್ನ ೭೨ನೇ ವರುಷದಲ್ಲಿ ತಾನು ಮಾಡಿದ ಕಾವ್ಯಗಳನ್ನೆಲ್ಲಾ ಜನೋಪಕಾರಕ್ಕೆ ಒಮ್ಮೆಗೆ ಛಾಪಿಸ ಕೊಟ್ಟಾಗ ೫ ಥೋರದ ಗ್ರಂಥಗಳಾದವು; ಅವುಗಳಲ್ಲಿ ೭೦೪೮ ಗೀತೆಗಳು ಇದ್ದವು.

ಅವನ ಜೀವವು ಅಂಡಿಗೆ ಬರಲಾಗಿ ಅವನ ಕಿವಿಯು ಬಹಳ ಕಿವಡದಾಯಿತು. ಆಗ ಆ ಪ್ರಖ್ಯಾತಿ ಶೀವಿದ ನರೆಯವನು ದೊಡ್ಡ ದೊಡ್ಡ ಪುಸ್ತಕಗಳಲ್ಲಿ ದೇವರ ವಾಕ್ಯವು ಮುಖ್ಯವಾದದ್ದಾಗಿ ಇಟ್ಟಿರುವ ಮೇಜಿನಲ್ಲಿ ಕುಳಿತು ಕೊಂಡು, ಎಚ್ಚರ ತಪ್ಪದೆ ಓದುತ್ತಾ ಇದ್ದು, ಯಾರಾಬ್ಬನೂ ತನ್ನನ್ನು ಮಾತಾಡಿಸುವಂದು ಕ್ಷಣಕ್ಕೆ ಕಂಣೆತ್ತಿ ನೋಡಿ, ಒಂದೂ ಮಾತಾಡದೆ, ಮತ್ತು ಮುಂಚಿನಂತೆ ಜಾಗ್ರತೆಯಾಗಿ ಓದಲೆಸಗುವನು. ಅವನು ೮೨ ವರುಷ ಬದುಕಿದನಂತರ ಸಮಾಧಾನದಿಂದ ಮುದಿಯಲಾಗಿ ಹೇರಳ ಜನರು ನೆರದು ಮೆರವಣಿಗೆಯಾಗಿ ಬರುವಲ್ಲಿ ಅವನ ಹೆಣವನ್ನು ಸಮಾಧಿಗೆ ವೈದರು.

ಹನ್ಸ್ಸಕ್ಸನು ತನ್ನ ಕಾಲದ ಕವಿಗಳಲ್ಲಿ ಮುಖ್ಯನಾಗಿದ್ದರೂ ಅಲ್ಪ ಮಾನವೇನೂ ಹುಡುಕಿ ಕೊಳ್ಳಲಿಲ್ಲ.

## 71. JOHN LESLEY

## ೭೧. ಜಾನ್ ಲೆಸ್ಲಿ

“ದನದವನು ಘನದವನಾಗನೇ?„

ಗಾದೆ.

ಸ್ಕಾಟ್ಲಾಂಡಿನ ಸಮುದ್ರತೀರದ ಒಂದು ಹಳ್ಳಿಯಲ್ಲಿ ಒಬ್ಬ ಬಡ ಒಕ್ಕಲು ಮಗನು ಇದ್ದನು. ಅವನು ಹಿಮಗಾಲದಲ್ಲಿ ಸಾಲೆಗೆ ಹೋಗುತ್ತ, ಬೇಸಿಗೆಗಾಲದಲ್ಲಿ ದನ ಕಾಯುತ್ತ ಇರುವನು. ತನಗೆ ೧೩ನೇ ವರು

ಷ ಬಂದಾಗ ತಿರಿಗಿ ಹಿಂಡು ಮೇಯಿಸುವಾ ಹೊತ್ತು ಹಿಂಡು ಇರುವ ಹೊಲದ ಸುತ್ತಲು ಬೇಲಿ ಇರುವದರಿಂದ ಬಹಳ ಜೋಕೆ ಬೇಕಾಗದೆ, ತನಗೆ ರೂಢಿ ಬಿದ್ದಂತೆ ಹೊತ್ತು ಕಳಿಯುವದಕ್ಕಾಗಿ ಒಂದು ಪುಸ್ತಕ ತೆಗೆದು, ಓದಲಿಕ್ಕೆ ಹತ್ತಿದನು. ಆ ಪುಸ್ತಕ ಯೂಕ್ಲಿಡ್ ಎಂಬವನ ಕ್ಷೇತ್ರಗಣಿತದ್ದು; ಅದರ ಆಕಾರಗಳನ್ನು ಬರಿಯಲಿಕ್ಕೆ ಕಾಗದವಿಲ್ಲದೆ, ಅವನು ಪಥದಲ್ಲಿ ಮಣ್ಣು ಹರಡಿ, ಅದರಲ್ಲಿ ಬೆರಳಿನಿಂದ ಆ ಗಣಿತ ರೂಪಗಳನ್ನು ಮೂಡಿಸಿ, ಪುಸ್ತಕ ಮುಚ್ಚಿ, ಬಂತೋ ಇಲ್ಲವೋ? ಎಂದು ಪರೀಕ್ಷೆ ಮಾಡಿ ಕೊಂಡನು. ಆ ಹೊತ್ತು ಅವನು ಹಾಗೆ ಮಾಡುತ್ತಿರಲು,—ಅವನ ಊರಿನ ದೇವವಾಕ್ಯಬೋಧಕನು ಅವನು ಅರಿಯದೆ ಹತ್ತರ ಬಂದು ನೋಡಿ, ತಿರುಗಿ, ಹುಡುಗನ ತಂದೆಯ ಬಳಿಗೆ ಓಡಿ ಹೋಗಿ, ನಿಮಗೆ ಒಂದು ದೊಡ್ಡ ಸಂಗತಿ ತಿಳಿಸ ಬಂದೆನೆಂದು ಹೇಳೋಣ,—ಆ ಒಕ್ಕಲಿಗನು—ಸಜೆಯಲ್ಲಿ ಏನಾದರೂ ಮೋಸವಾಯಿತು ಅದಕ್ಕೆ ಬೋಧಕನು ಬಂದಿದ್ದಾನೆಂದು ನೆನಸಿ, ದುಖ್ಖಮೋರೆಯಿಂದ ಕಿವಿಯನ್ನು ಕೇಳಲಿಕ್ಕೆ ಇಕ್ಕಲು,—ಬೋಧಕನು ಮುಗುಳುನಗೆಯಿಂದ—ಲೆಸ್ಲಿ ಐಯ್ಯ, ನಿಮ್ಮ ಮಗನು ಜಾಣನೇ ಆಗಿದ್ದಾನೆ ಎಂದು ನುಡಿದನು. ಏನೇಲೇ, ಅವನು ದನಗಳನ್ನು ಪೈರಿನಲ್ಲಿ ಹೋಗ ಬಿಟ್ಟನೋ? ಎಂದು ತಂದೆ ಕೇಳೋಣ,—ಬೋಧಕನು—ಅಲ್ಲವಲ್ಲ ಗಣಿತವಿದ್ಯೆಗೆ ನಿಮ್ಮ ಮಗನಿಗೆ ಅಧಿಕ ಬುದ್ಧಿ ಉಂಟು, ನೀವು ಅವನನ್ನು ಅಗತ್ಯವಾಗಿ ಉತ್ತಮ ಶಾಲೆಗೆ ಕಳುಹಿಸ ಬೇಕು ಎಂದನು. ತಂದೆ ಆ ಮಾತಿಗೊಡಂಬಟ್ಟು, ಹುಡುಗನಿಗೆ ವಿದ್ಯೆ ಕಲಿಸಿದಾಗ ಇವನು ಗ್ರೇಟ್‌ಬ್ರಿಟ್ಟೇನಿನ ವಿದ್ವಾಂಸರಲ್ಲಿ ಅತಿ ಶೋಭಿತನಾಗಿ, ಎಡಿನ್ಬರ್ಗಿನ ವಿದ್ಯಾಸಾಲೆಯ ಪಂಡಿತನಾದನು.



## 72. ELIZABETH FRY

## ೭೨. ಎಲಿಸಬೇತಳು ಫ್ರಯಿ

"ಒಳ್ಳೇ ಹೆಣ್ಣಿನ ಬುದ್ಧಿ ಒಳ್ಳೇ ಹಣ್ಣಿನ ವೃದ್ಧಿ,"
ಗಾದೆ.

ಎಲಿಸಬೇತಳು ಫ್ರಯಿ ಎಂಬವಳು ಇಂಗ್ಲಾಂಡಿನ ನಾರ್ವಿಕ್ ಎಂಬ ಪಟ್ಣದಲ್ಲಿ ಐಶ್ವರ್ಯ ಉಳ್ಳ ಒಂದು ಕುಟುಂಬದೊಳಗೆ ೮೨ ವರುಷಗಳ ಹಿಂದೆ

ಹುಟ್ಟಿದಳು. ಅವಳು ೧೨ ವರುಷದವಳಾಗಿರುವಾಗ ತಾಯಿ ಸತ್ತಳು. ಎಲಿಸಬೇ
ತಳಲ್ಲಿ ಆಗ ದೇವರ ಪ್ರೀತಿ ಇರಲಿಲ್ಲ; ಕುದುರೆ ಹತ್ತಿ ಹೋಗುವದು, ಹಾಡುವದು,
ನಾಟ್ಯವಾಡುವದು ಅವಳ ಸಂತೋಷವಾಗಿರುವದು. ತನಗೆ ೧೬ನೇ ವರುಷ ಬಂದ
ಮೇಲೆ ಸತ್ಯವೇನೆಂದು ವಿಚಾರಣೆ ಮಾಡುವವಳಾಗಿ, ಕಾಣದೆ, ಬರೇ ಅಂಧಕಾರ
ನೋಡುತ್ತೇನೆ, ಸಕಲವೂ ನನಗೆ ಹುಚ್ಚುತನವಾಗಿ ತೋರುತ್ತದೆ, ನನಗೆ ನೆಲೆ ಇಲ್ಲ
ಎಂದು ಹಲುಬಿ, ಧನಿ ಇಲ್ಲದ ನಾವಿಯಂತೆ ಇದ್ದಳು. ಕ್ರಿಸ್ತಶಕದ ೧೭೯೮ನೇ ವ
ರುಷದಲ್ಲಿ ಅವಳು ದೇವರ ವಾಕ್ಯದ ಉತ್ತಮ ಪ್ರಸಂಗ ಕೇಳಿ, ದೇವರು ಇದ್ದಾನೆ
ಎಂತ ಇಂದು ತಿಳುಕೊಂಡಿದ್ದೇನೆ ಎಂಬದಾಗಿ ಹೇಳಿ, ಅಂದಿನಿಂದ ದೇವರ ಮಹಿಮೆ
ಯನ್ನು ಹೆಚ್ಚು ಹೆಚ್ಚಾಗಿ ಅರಿತು ಕೊಳ್ಳುವವಳಾದಳು. ಆ ಸಮಯಕ್ಕೆ ತಂದೆಯು
ಅವಳನ್ನು ಲಂಡನ್ ಪಟ್ಣಕ್ಕೆ ಕಳುಹಿಸಲಾಗಿ, ಅವಳು ಅದರಲ್ಲಿ ನಡೆಯುವ ಲೌಕಿಕ
ಸಾಹಸಕ್ಕೆ ಹ್ಯಾಗೂ ಮೆಚ್ಚದೆ, ತಿರಿಗಿ ಮನೆಗೆ ಹೋಗಿ, ಅಲ್ಲಿ ಪ್ರೀತಿವೃತ್ತಿಯಿಂದ
ಬಹಳ ಕಾಲ ಕಳಿಯುವಳು; ಹ್ಯಾಗಂದರೆ ಒಮ್ಮೆ ಒಬ್ಬ ರೋಗಿಷ್ಟ ವೆಧವೆಗೆ ಇಷ್ಟ ಪ
ದಾರ್ಥ ತಕ್ಕೊಂಡು ಹೋಗುವಳು, ಮತ್ತೊಮ್ಮೆ ಸಾಯುವ ಸೇವಕನಿಗೆ ದೇವರ ವಾ
ಕ್ಯ ಹೇಳಿ ಆದರಣೆ ಕೊಡುವಳು, ಮತ್ತೊಮ್ಮೆ ಹೋಗಿ ನೆರೆಯ ನಾಡಿನ ಅಸೌಖ್ಯ
ಪಟ್ಟವರಿಗೆ ಸಹಾಯ ಮಾಡುವಳು, ಮತ್ತೊಮ್ಮೆ ಬಹಳ ಮಂದಿ ಬಡ ಮಕ್ಕಳಿಗೆ
ವಿದ್ಯೆ ಕಲಿಸುವಳು.

೧೮೦೦ನೇ ವರುಷದಲ್ಲಿ ಅವಳು ಲಂಡನ್ ಪಟ್ಣದ ಒಬ್ಬ ಐಶ್ವರ್ಯವುಳ್ಳ ವ
ರ್ತಕನಿಗೆ ಮದಿವೆಯಾಗಿ, ಬಹು ಚಂದದಿಂದ ಮನೆತನ ಮಾಡುವದಲ್ಲದೆ ಕಷ್ಟ ಉ
ಳ್ಳ ಜನರಿಗೆ ಉದ್ಧಾರ ಮಾಡುತ್ತಿರುವಳು. ಅವಳು ರೋಗಿಷ್ಟರಿಗೆ ಸೇವಿಸುತ್ತಿದ್ದದರಿಂ
ದ ಶರೀದಲ್ಲಿ ಹೆಚ್ಚು ಕಡಿಮೆ ಆಗಿ, ಪಟ್ಟದ ಹೊರಗೆ ತನ್ನ ಪರಿಣಾಮಕ್ಕಾಗಿ ಒಂದು
ಮನೆ ಶೇರಿರಲು, — ಅಲ್ಲಿಯ ಊರಲ್ಲಿ ಹುಡಿಗಿಯರ ಒಂದು ಸಾಲೆ ಸ್ಥಾಪಿಸಿದಳು;
ಅದಕ್ಕೆ ಬೇಗ ೭೦ ಹುಡಿಗಿಯರು ಬರುವವರಾದರು. ಅವಳ ಹತ್ತರ ಯಾವಾಗಲೂ
ಬಟ್ಟೆ, ಕಂಬಳಿ, ಔಷಧ ಇತ್ಯಾದಿಗಳು ಬೇಕಾದವರಿಗೆ ಕೊಡಲಿಕ್ಕಾಗಿ ಇದ್ದವು; ಹಿಮ
ಗಾಲದಲ್ಲಿ ಬಡವರಿಗೆ ಸಂಕಟ ಬಂದಾಗ ಅವಳು ದಿನಾಲು ತನ್ನ ಮನೆಯಲ್ಲಿ ಗಂಜಿ
ಮಾಡಿಸುತ್ತಾ, ೧೦೬ ಜನರಿಗೆ ಕೊಡಿಸುತ್ತಿರುವಳು.

ಅವಳ ಮನೆಯ ಹತ್ತರ ಗುಡಸಲುಗಳ ೨ ಸಾಲುಗಳಿದ್ದವು, ಆ ಗುಡಸಲುಗ
ಳಲ್ಲಿ ಒಂದಾದರೂ ಒಳ್ಳೇದಲ್ಲ, ಕಿಟಿಕಿಯ ಕಂನಡಿ ಇರ ಬೇಕಾದಲ್ಲಿ ರಗಟೆ ಕಾಗದಗ
ಳು ಹಚ್ಚಿದ್ದವು, ಅಂಗಳಗಳಲ್ಲಿ ನಾರುವ ಕೊಳಕುನೀರು ಇತ್ತು, ಮಲದಿಂದ ಹೇಸಿಕೆ
ಯಾದ ಮಕ್ಕಳೂ ಕೂದಲು ಬಾಚದ ತಾಯಿಗಳೂ ಇವರವರೊಳಗೆ ಹಂದಿಗಳೂ ಕೋ

ಳಿಗಳೂ ಇದ್ದದ್ದು ಅಲ್ಲಿ ಕಾಣುತ್ತಿರುವದು. ಎಲಿಸಬೇತಳು ಹಿಮಗಾಲದಲ್ಲಿ ಒಮ್ಮೆ ಆ ಗುಡಸಲುಗಳ ಜನರ ಹತ್ತರ ಹೋಗಲು, — ಒಂದರೊಳಗೆ ಆಗಲೇ ಸತ್ತ ಒಬ್ಬ ತಾಯಿ ಮಂಚದ ಮೇಲೆ ಮಲಗಿದ್ದಳು, ಮಕ್ಕಳು ನೆಲದಲ್ಲಿ ಬಿದ್ದು ಕೊಂಡಿದ್ದವು, ತಂದೆಯು ಒಂದು ಮೂಲೆಯಲ್ಲಿ ಗೋಳಾಡುತ್ತಿದ್ದನು. ಆವತ್ತು ಅವಳು ಆ ತಂದೆಗೆ ಧೈರ್ಯದ ಮಾತು ಹೇಳಿ, ಹೆಣಕ್ಕೆ ಬೇಕಾದ ಬಟ್ಟೆ ತರಸಿ, ಶೃಂಗಾರಕ್ಕಾಗಿ ಅದರ ಕೈಯಲ್ಲಿ ಒಂದು ಹೂಮಾಲೆ ತಾನೇ ಇಟ್ಟಳು. ಅಲ್ಲಿಂದ ಮಕ್ಕಳೂ ಹಂದಿಗಳೂ ತುಂಬಿದ ದಾರಿಯಲ್ಲಿ ಮುಂದರಿಸಿ, ಬೇರೆ ಹಾಳುಗುಡಸಲುಗಳೊಳಗೆ ಹೋಗಿ, ಹೆಂಗಸರು ತನಗೆ ತಿಳಿಸುವ ತಮ್ಮ ದುಃಖದ ಸಂಗತಿಗಳನ್ನೆಲ್ಲಾ ದಯೆಯಿಂದ ಲಾಲಿಸಿ, ಅಲ್ಲಲ್ಲಿ ವಸ್ತ್ರಧರ್ಮ ಮಾಡಿದಳು. ಹೀಗೆ ಅವಳು ಕೆಲವು ಸರ್ತಿ ಮಾಡಿ, ತಂದೆ ತಾಯಿಗಳ ಪ್ರೀತಿ ಸಂಪಾದಿಸಿ ಕೊಂಡ ಮೇಲೆ ಅವರು ತಮ್ಮ ಮಕ್ಕಳನ್ನು ಅವಳ ಸಾಲೆಗೆ ಕಳುಹಿಸಿದರು.

ತಾನಿರುವ ಊರಲ್ಲಿ ಮೈಲಿಗಜ್ಜಿ ಬಹಳ ಕೇಡು ಮಾಡುತ್ತಿರುವಾಗ ಅವಳು ತಾನೇ ಹೋಗಿ, ಒಬ್ಬರಿಗೆ ಸ್ವಂತ ಕೈಯಿಂದ ಡಾಕು ಹಾಕುವಳು, ಮತ್ತೊಬ್ಬರಿಗೆ ಹಾಕಿಸುವಳು; ಈ ಪ್ರಕಾರ ಮೈಲಿಗಜ್ಜಿಯು ಬೇಗ ಆ ಊರನ್ನು ಬಿಟ್ಟು ಬಿಟ್ಟಿತು. ತನ್ನ ಮನೆಯ ಮುಂದೆ ಹಾಯುತ್ತ ಬರುವ ದೇಶತಿರಕರಿಗೂ ಅವಳು ಬಟ್ಟೆ ಔಷಧಗಳನ್ನು ಕೊಡುವದಲ್ಲದೆ ಸಕಲ ವಿಧದ ಬುದ್ಧಿ ಹೇಳುವಳು; ಅವಳ ಮನಸ್ಸಿನ ಅಭಿಪ್ರಾಯವೇನಂದರೆ — ಪರರ ಆತ್ಮದ ಜೋಕೆ ಇಲ್ಲದೆ ಧರ್ಮ ಸತ್ತದ್ದೇ.

ಅವಳು ಪಟ್ಣದ ಹೊರಗಿನ ಮನೆಯಿಂದ ಪಟ್ಣದೊಳಗಿನ ಮನೆಗೆ ತಿರಿಗಿ ಬಂದ ಮೇಲೆ ೧೮೧೩ನೇ ವರುಷದಲ್ಲಿ ಒಮ್ಮೆ ಲಂಡನಿನ ದೊಡ್ಡ ಶೆರೆಮನೆಯ ನೋಡ ಹೋಗಲು, — ಅದರೊಳಗಿನ ಖೇದವುಳ್ಳ ಜನರನ್ನು ಕಂಡು, ಬಹಳ ದುಃಖ ಪಟ್ಟಳು. ೨ ಕೋಣೆಗಳಲ್ಲಿ ೩೦೦ ಹೆಂಗಸರು ಇದ್ದರು, ಅವರನ್ನೆಲ್ಲಾ ಒಬ್ಬನೇ ಆಳು ತನ್ನ ಮಗನ ಸಂಗಡ ನೋಡುವನು; ಅವರ ಸಂಗಡ ಚಿಕ್ಕ ದೊಡ್ಡ ಮಕ್ಕಳು ರಾಶಿರಾಶಿಯಾಗಿ ಇದ್ದವು; ಅಡುವದು, ತೊಳೆಯುವದು, ಮಲಗುವದು ಎಲ್ಲವೂ ಅವೇ ಕೋಣೆಗಳೊಳಗೆ ಆಗುತ್ತಿತ್ತು; ಅವರಿಗೆ ಹಾಸಿಕೆ ಇಲ್ಲ, ತಲೆಗಿಂಬಿಲ್ಲ; ಕೆಲವರಿಗೆ ತಕ್ಕಷ್ಟು ಬಟ್ಟೆಯೂ ಇಲ್ಲ; ಅವರಲ್ಲಿ ಸರಾಯಿ ಕುಡಿಯುವದು ಬಹಳ, ಅದನ್ನು ಕೊಂಡು ಕೊಳ್ಳುವದಕ್ಕೆ ಬಂದ ಗೃಹಸ್ಥರಿಂದ ಹಣ ಬೇಡಿ ಕೊಳ್ಳುವರು; ಎಲ್ಲಿಯೂ ಬೈಗಳು ಕೇಳಿಸುವವು; ಎಲ್ಲಿಯೂ ಮಲ, ಎಲ್ಲಿಯೂ ನಾತ. ಎಲಿಸಬೇತಳು ೧೬೦ ಮಂದಿ ಅಂಥ ಹೆಂಗಸರು ಇರುವ ಕೋಣೆಯೊಳಗೆ ಶೇರಿದಾಗ ಆಶ್ಚರ್ಯದಿಂದ ಬಾಯಿ ತೆರದು ನೋಡುವವರ ಮುಂದೆ ಹೀಗೆ ನುಡಿದಳು — ನೀವು

ದುಃಸ್ಥಿತಿಯವರಾಗಿ, ಬಟ್ಟೆ ಇಲ್ಲದವರಾಗಿ ಹೋದಿರಿ ಅಲ್ಲವೋ? ಒಬ್ಬನು ಬಂದು ನಿಮಗೆ ವಸ್ತ್ರಧರ್ಮ ಕೊಟ್ಟರೆ ನಿಮಗೆ ಸಂತೋಷವಾಗದೆ ಇದ್ದೀತೇ?—ಆಗಲವರು ಅಂದದ್ದು—ಇಲ್ಲವಿಲ್ಲ, ಆದರೆ ಅಂಥ ಗೆಳೆಯನು ನಮಗೆ ಹ್ಯಾಗೆ ದಕ್ಕ್ಯಾನು? ನಮ್ಮನ್ನಾರೂ ನೋಡುವದಿಲ್ಲ!—ಎಲಿಸಬೇತಳು ತಿರಿಗಿ ಹೇಳಿದ್ದೇನಂದರೆ—ನಿಮಗೆ ಸಹಾಯ ಮಾಡುವದಕ್ಕೆ ಕೋರಿ ಬಂದಿದ್ದೇನೆ, ನೀವು ನನಗೆ ಸಹಾಯ ಮಾಡಿದರೆ ನಾನು ನಿಮಗೆ ಸಹಾಯ ಮಾಡ ಬಂದೀತು.—ಈ ಪ್ರಕಾರ ಅವಳು ಸಮಾಧಾನದ ಮಾತು ಆಡಿ, ಅಚಯ ಪಾಲಿಸುವದಕ್ಕೆ ಪ್ರಯತ್ನೈಸಿ, ಹೋಗುವ ಹೊತ್ತಿನಲ್ಲಿ ಸಕಲ ಹೆಂಗಸರು ಅವಳ ಸುತ್ತಲೂ ನೆರದು, ನೀವು ತಿರಿಗಿ ಬರುವದಿಲ್ಲವೇಲೇ! ಎಂದು ಅವಳನ್ನು ತಡಸಲು,—ಅವಳು ನಿಶ್ಚಯವಾಗಿ ತಿರಿಗಿ ಬರುತ್ತೇನೆಂತ, ಹೊರಟಳು.

ಅವಳು ತಿರಿಗಿ ಬಂದಳು, ಆದರೆ ೧೪ ವರುಷ ಕಳೆದು ಹೋದ್ದಕ್ಕಿಂತ ಮುಂಚೆ ಅದು ಆಗಲಿಲ್ಲ; ಅವಳ ಕುಟುಂಬದಲ್ಲಿ ಅಷ್ಟರೊಳಗೆ ಅನೇಕ ತೊಂದರೆ ಇತ್ತು. ೧೮೧೬ನೇ ವರುಷದಲ್ಲಿ ಅವಳು ೧೧ನೇ ಕೂಸನ್ನು ಹಡೆದಳು. ಅದೇ ವರುಷದಲ್ಲಿ ಅವಳು ತಿರಿಗಿ ಆ ಶೆರೆಮನೆಗೆ ಹೋಗಿ, ಕೆಲವು ತಾಸು ಆ ಹೆಂಗಸರ ಸಂಗಡಲಿದ್ದು, ದೇವರ ವಾಕ್ಯ ಓದಿದಳು; ಅದು ಅವರಿಗೆ ಬಹಳ ರುಚಿಕರವಾಗಿ ತೋರಿತು. ಎಲಿಸಬೇತಳು ಆ ಹೆಂಗಸರು ಎತ್ತಿ ಕೊಂಡಿರುವ ಬತ್ತಲೆಯಾದಂಥ, ಶಕ್ತಿ ಬತ್ತಿದಂಥ ಕೂಸುಗಳನ್ನು ಕಂಡು, ಇವು ಮುಟ್ಟ ಮೊದಲು ಕಲಿಯುವದು ಬೈಗಳೇ ಎಂದು ದುಃಖಿಸಿ, ನಿಮ್ಮ ಕೂಸುಗಳಿಗಾಗಿ ಒಂದು ಸಾಲೆ ಸ್ಥಾಪಿಸಲಿಯಾ? ಎಂದು ಕೇಳೋಣ,—ಬಹು ಸಂತೋಷ ಪಟ್ಟು ಆ ತಾಯಿಗಳ ಕಣ್ಣಿಂದ ಚಾಷ್ಪಗಳು ಹರಿದು ಬಿದ್ದವು. ಆಗಲವಳು—ಹಾಗಾದರೆ ಆ ಸಾಲೆ ನೋಡುವವರನ್ನು ನಿಮ್ಮೊಳಗಿಂದಲೇ ಅರಿಸಿ ತೆಗದು ಕೊಳ್ಳ ಬೇಕು ಎನ್ನಲಾಗಿ, ಗಡಿಯಾರ ಕದ್ದು ಕೊಂಡು ಬಂದ ಒಬ್ಬ ಪ್ರಾಯ ಸ್ತ್ರೀಯನ್ನು ಆರಂಭಕ್ಕೆ ಅರಿಸಿ ಕೊಂಡರು. ಶೆರೆಮನೇ ಯಜಮಾನರು ಅನುಮಾನ ಪಟ್ಟರೂ ಎದುರಾಡದೆ ಒಡಂಬಟ್ಟರು. ಒಂದು ಚಿಕ್ಕ ಕೋಣೆ ಸಾಲೆಗೆ ನೇಮಕವಾದ ಮೇಲೆ ಎಲಿಸಬೇತಳು ಅರಿಸಿ ಕೊಂಡ ಆ ಅಧ್ಯಕ್ಷಳ ಸಂಗಡ ಸಾಲೆ ತೊಡಗಿಸುವಾಗ ೩೦ ಮಕ್ಕಳೂ ೨೫ ವರುಷದೊಳಗಿನ ಹಲಿವು ಮಂದಿ ತಾಯಿಗಳೂ ಶೇರಿದರು. ಆದರೆ ಸಕಲ ಹೆಂಗಸರೂ ಕಲಿಯುವದಕ್ಕೆ ಬಾರದೆ ಇರ ಕೂಡದು; ಬರ ಬೇಡಿರಿ ಎಂದು ಅಪ್ಪಣೆಯಾದವರು ಬಹಳ ದುಃಖಗೊಳ್ಳುವರು;—ಮುಂಚೆ ಚಿಕ್ಷೆ ಬೇಡುತ್ತಾ, ಕದಿಯುತ್ತಾ, ಜಗಳಾಡುತ್ತಾ, ಬೈಯುತ್ತಾ, ಹಾಡುತ್ತಾ, ಕುಣಿದಾಡು

ತ್ತಾ, ಗಂಡಸರ ಸೋಗು ಹಾಕಿ ಕೊಂಡು ಸಮಸ್ತ ದುಷ್ಕ್ರಿಯೆಗಳನ್ನು ನಡಿಸುತ್ತಿದ್ದಂಥವರು ಬುದ್ಧೀ ಕಲಿಸ ಬೇಕೆಂದು ಬೇಡಿ ಕೊಂಡರು.

ಆದರೂ ಪೂರ್ಣ ಅಚ್ಚುಕಟ್ಟಿನ ಮತ್ತು ಜಾಗ್ರತಾಪ್ರವೃತ್ತಿಯ ಸ್ಥಿತಿಯನ್ನು ಆ ಶೆರೆಮನೆಯೊಳಗೆ ಹುಟ್ಟಿಸುವದಕ್ಕೆ ಆ ಸಾಲೆ ಒಂದೇ ಸಾಲಲಿಲ್ಲ; ಅದರ ಸಲುವಾಗಿ ಎಲಿಸಬೇತಳು ಬರುವ ವರುಷದಲ್ಲಿ ೧೨ ಮಂದಿ ಧಾರೆಸಾನಿಗಳನ್ನು ಸಂಮತಿಪಡಿಸಿ,—ಶೆರೆಮನೆಯಲ್ಲಿರುವ ಹೆಣ್ಣುಮಕ್ಕಳ ಸ್ಥಿತ್ಯುದ್ಧಾರಸಭೆ ಎಂಬ ಹೆಸರಿನಿಂದ ಒಂದು ಸಭೆಯನ್ನು ಉಂಟು ಮಾಡಿದಳು. ಆ ಸಭೆಯವರು ಶೆರೆಯ ಹೆಂಗಸರ ಬಟ್ಟೆಗೂ ಕಲಿಯುವಿಕೆಗೂ ಕೆಲಸಕ್ಕೂ ಚಿಂತೆ ಪಟ್ಟು, ಅವರಲ್ಲಿ ದೇವವಾಕ್ಯಜ್ಞಾನವೂ ಸುಕ್ರಮವೂ ಮಿತಾನುಭವವೂ ಜಾಗ್ರತೆಯೂ ಹುಟ್ಟುವ ಹಾಗೆ ಏತ್ತುಗಡೆ ಮಾಡಿ, ಬಿಡುಗಡೆಯ ಸಮಯದಲ್ಲಿ ಅವರು ಯಥಾರ್ಥರಾಗಿಯೂ ಮಾನಸ್ಥರಾಗಿಯೂ ನಡಕೊಳ್ಳುವಂತೆ ಪ್ರಯತ್ನ ಪಡ ಬೇಕು.—ಆ ಗೊತ್ತು ಚಂದಾಗಿ ಕೈಸಾರಿ ಬಂತು; ಅದೇ ವರುಷದಲ್ಲಿ ಧಾರೆತನದವರು ಎಲಿಸಬೇತಳಿಗೂ ಅವಳ ಜತೆಗಾರರಿಗೂ ಮಾಡಿದ ಉಪಕಾರಕ್ಕೋಸ್ಕರ ಮಾನವುಳ್ಳದ್ದೆಂದು ನಿರ್ಣಯ ಹೇಳಿ ತಿಳಿಸಿದರು. ಈ ನಿರ್ಣಯಕ್ಕಿಂತ ಹೆಚ್ಚು ಸಂತೋಷಕರವಾದ ಫಲವೇನಂದರೆ—ಬುದ್ಧಿವಂತರಾಗಿ ಶೆರೆಮನೆಯೊಳಗಿಂದ ಬಿಡುಗಡೆ ಹೊಂದಿ ನಾನಾ ದಿಕ್ಕಿಗೆ ಹೊರಟು ಹೋದ ಹೆಂಗಸರು ಆ ಧಾರೆಸಾನಿಗಳಿಗೆ ಕಳುಹಿಸುತ್ತಿರುವ, ಪ್ರೀತಿಮಾತು ತೀವಿದ ಪತ್ರಿಕೆಗಳೇ. ಆದ ಸಂಗತಿಯಿಂದ ದೇಶದ ಉಳಿಕಿಯ ಜನರು ಸಹಾ ಶೆರೆಮನೆಯವರ ತಿದ್ದುಪಾಟಿಗೆ ಚಿಂತೆ ಪಡುವವರಾದರು; ಯಾರ್‍ಯಾರೂ ಬಂದು ಕೇಳಿದ ರೀತಿಯಿಂದಾಗಲಿ ಬರೆದು ಕೇಳಿದ ರೀತಿಯಿಂದಾಗಲಿ ಎಲಿಸಬೇತಳಿಂದ ಆ ವಿಷಯದ ಬುದ್ಧಿ ಹೊಂದುವ ಪ್ರಯಾಸ ಪಡುವವರಾದರು.

ಅವಳು ಸ್ವಪಟ್ಟಣದಲ್ಲಿ ಮಾಡಿದಂತೆ ಪ್ರಯಾಣದಲ್ಲಿಯೂ ರೋಗಿಷ್ಟರ, ಹುಚ್ಚು ಹಿಡಿದವರ, ಶೆರೆಮನೆಯವರ ಬಳಿಗೆ ಹೋಗಿ, ಅವರನ್ನು ಆದರಿಸುವಳು; ಹ್ಯಾಗಂತಂದರೆ ಅವಳು ಅಂಥಾ ಹೆಂಗಸರು ಇರುವ ಸಾಲೆಯಲ್ಲಿ ಪ್ರವೇಶಿಸಿ, ಟೋಪಿ ತೆಗೆದಿಟ್ಟು, ಮಣೆಯಲ್ಲಿ ಅವರೆದುರಾಗಿ ಕುಳಿತು ಕೊಂಡು, ದಯೆಯುಳ್ಳ ದಿಟ ದೃಷ್ಟಿಯಿಂದ ಅವರನ್ನು ನೋಡಿ, ನಾನು ಬಂದ ಕಾರಣವನ್ನು ನಿಮಗೆ ಮೊದಲೇ ಹೇಳಿದರೆ ಒಳ್ಳೇದಾದೀತು, ಕೇಳಿರಿ, ಇಲ್ಲಿ ಇರುವವರಿಗಿಂತ ಭ್ರಷ್ಟದುಷ್ಟರಾದ ಹೆಂಗಸರನ್ನು ನಾನು ಕಂಡೆನು, ಅವರು ಸನ್ಮಾರ್ಗಕ್ಕೆ ತಿರಿಗಿ ಬಂದರು, ನಿಮಗೂ ಅದಕ್ಕೆ ಮನಸ್ಸಿಲ್ಲವೋ? ನಿಮ್ಮನ್ನು ಪರಾಂಬರಿಸುವದಕ್ಕೂ ನಿಮಗೆ ಸಹಾಯ ಮಾಡುವದಕ್ಕೂ ಧಾರೆಸಾನಿಗಳು ಬಂದರೆ ನೀವು ಮೆಚ್ಚುವದಿಲ್ಲವೋ? ಸಂಶಯವಿಲ್ಲದೆ ನೀವು ಅವರ

ಮುಂದೆ ನಿಮ್ಮ ಶೋಕ ಹೇಳೀರಿ, ಯಾಕಂದರೆ ಪಾಪ ಮಾಡಿದವರ ಹೃದಯದೊಳ ಗೆ ಅಧಿಕ ಶೋಕ ಉಂಟಲ್ಲವೋ? ಎಂದು, ಕಟ್ಟಳೆಗಳ ಪತ್ರಿಕೆ ಓದಿ, ಇದಕ್ಕೆ ಒಪ್ಪು ವವರು ಕೈ ಎತ್ತಲಿ! ಎಂತ ಹೇಳಲು, — ಎಲ್ಲರ ಕೈಯೂ ಎತ್ತಿ ತೋರುವದು; ಆ ಗಿಂದಾಗ್ಯೆ ಒಬ್ಬ ಪ್ರಾಯಸ್ಥಳ ಕಂಣೀರು ಬೀಳುವದು, ಒಬ್ಬ ಮುದುಕಿ ಕರಗಿ ಹೋ ಗುವಳು, ಆವರೆ ಸಕಲರೂ ಅವಳ ಮುಂದೆ ಧೂಳಿಗೆ ಎರಗುವರು. ಅಂದು ಅವಳು ದೇವವಾಕ್ಯಪುಸ್ತಕವ ತೆಗೆದು, ತಪ್ಪಿಸಿ ಕೊಂಡು ಹೋಗಿ ಕೆಟ್ಟ ಮಗನನ್ನು ದೇವರು ಅತಿಶಯ ಕರುಣೆಯಿಂದ ತಿರಿಗಿ ಅಂಗೀಕರಿಸಿದನೆಂಬರ್ಥದ ಸಾಮ್ಯ ಓದಿ, ಸ್ವಲ್ಪ ತಡೆ ದು, ಆ ಮೇಲೆ ಅವರ ಸಂಗಡ ಪ್ರಾರ್ಥಿಸುವದಕ್ಕೆ ಮೊಣಕಾಲೂರುವಳು.

ಈ ಪ್ರೀತಿವೃತ್ತಿಯ ಸುದ್ದಿಯು ಪರದೇಶಕ್ಕೂ ಹೋಯಿತು, ಮತ್ತು ಅವಳು ನಟ್ಟ ಮರದ ಸಸಿಗಳು ಅಲ್ಲಲ್ಲಿ ನಟ್ಟ ಹಾಗಾಯಿತು.

ಅನೇಕ ಉಪಕಾರ ಮಾಡುತ್ತಾ ಬಂದು, ೧೮೨೭ನೇ ವರುಷದಲ್ಲಿ — ಸೆರೆಯ ಹೆಂಣುಮಕ್ಕಳ ಹತ್ತರ ಹೋಗಿ, ಅವರನ್ನು ನೋಡಿ, ನಡಿಸ ತಕ್ಕ ರೀತಿ ಎಂಬ ಹಾಗೆ ಒಂದು ಪುಸ್ತಕ ಬರೆದು, ಛಾಪಿಸಲಿಕ್ಕೆ ಕೊಟ್ಟು, ಅನಂತರ ಬಹಳ ಮಂದಿ ಕಷ್ಟದಾ ಳುಗಳು ಇದ್ದ ಐರ್ಲಾಂಡಿಗೆ ಪ್ರಯಾಣವಾಗಿ ಹೋಗಿ, ಅಂಥಾ ಜನರಿರುವ ಸಾಲೆ ಗಳನ್ನು ಹೊಕ್ಕು, ಎಲ್ಲಾ ಸೆರೆಗಳಲ್ಲಿಯೂ ಕಾಲೆಗಾರರನ್ನು ಕಂಡಳು. ಅವಳು ಅಂ ಥವರ ಸ್ಥಿತಿಗತಿ ತಿದ್ದಿದ್ದಲ್ಲದೆ ಅಲ್ಲಿಯ ಹುಡುಗರ ಸಾಲೆಗಳ ಹೀನ ಸ್ಥಿತಿಯನ್ನು ಸ ಹಾ ನೆಟ್ಟಗೆ ಮಾಡಲೆಸಗಿದಳು.

ಅದೇ ವರುಷದಲ್ಲಿ ಒಬ್ಬ ವರ್ತಕನು ದಿವಾಳಿ ತೆಗೆದ್ದರಿಂದ ಅವಳ ಗಂಡನಿಗೆ ಸುಧಾ ದೊಡ್ಡ ನಷ್ಟ ಬಂದ ಕಾರಣ ಅವಳು ತನ್ನ ಉಪ್ಪು ಕಡಿಮೆ ಮಾಡಿ, ಬಡವ ರಿಗೆ ಉಪಕಾರ ಮಾಡ ಬೇಕಾಯಿತು; ಇದರಲ್ಲಿ ಅವಳ ಆಶೆ ರವಿಯಷ್ಟು ಕುಂದಲಿ ಲ್ಲ. ತದನಂತರ ನೀಗರೆಂಬ ಜನರ ದಾಸತ್ವವನ್ನು ಪರಿಹರಿಸಲಿಕ್ಕೆ ಇಂಗ್ಲಾಂಡಿನ ಕೆಲ ವು ಮಂದಿ ಧೊರೆಗಳು ಪ್ರಯತ್ನ ಪಡಲಾಗಿ ಅವಳು ಸಹಾಯ ಮಾಡುವಳು; ಚೀ ನಾ ದೇಶದವರಿಗೆ ಕೇಡುಳ್ಳ ಆಫಿಮು ಇನ್ನು ಕಳುಹಿಸ ಬಾರದೆಂದು, ಬೇರೊಬ್ಬರ ಸಂ ಗಡ ಕೂಡಿ ಬುದ್ಧಿ ಹೇಳುವಳು; ಒಮ್ಮೆ ಇಂಗ್ಲಾಂಡಿನ ಪ್ರಭುಗಳೊಂದಿಗೆ ಜನೋಪ ಕಾರದ ಮಾತಾಡಿ, ಮತ್ತೊಂಮ್ಮೆ ಫ್ರಾಂಚು ದೇಶದ ಪ್ರಧಾನಿಯ ಸಂಗಡ ಅದೇ ವಿಷಯದ ಮಾತಾಡುವಳು; ಮತ್ತೊಮ್ಮೆ ರಾಜಸಭೆಯವರು ಅವಳನ್ನು ಕರದು, ರಾಜ್ಯದಲ್ಲಿ ಕರ್ಮ ನಿಲ್ಲಿಸುವ ಪ್ರಕಾರ ಯಾವದೆಂದು, ಅವಳ ಹತ್ತರ ವಿಚಾರಿಸು ವರು; ಮತ್ತೊಮ್ಮೆ ಅವಳು ರಾಣಿಯ ಸಂಗಡ ಜನಧರ್ಮವನ್ನು ಕುರಿತು ನುಡಿ

ಯುವಳು; ಮತ್ತೊಮ್ಮೆ ತನ್ನ ಬುದ್ಧೀ ನಿರ್ಣಯ ಕೇಳಿದ ಪ್ರುಸ್ಸಿಯ ದೇಶದ ರಾಜನಿಗೆ ಪತ್ರಿಕೆ ಬರೆದು ಕಳುಹಿಸುವಳು.

೧೮೩೮ನೇ ವರುಷದಿಂದ ೧೮೪೫ನೇ ವರುಷದ ವರೆಗೆ ಅವಳು ವಿಲಾಯತಿಯ ಬೇರೆ ಬೇರೆ ದೇಶಗಳಲ್ಲಿ ತನ್ನ ಪರಿಯ ಜನೋಪಕಾರವೃದ್ಧಿಗಾಗಿ ಪ್ರಯಾಣವಾಗಿ ಸಂಚರಿಸುತ್ತಾ ಇದ್ದು, ಪ್ರುಸ್ಸಿಯದ ಅರಸನನ್ನು ಕಂಡು, ತಿರಿಗಿ ಇಂಗ್ಲಾಂಡಿಗೆ ಹೋದ ಮೇಲೆ ಆ ಅರಸನು ಬಂದು, ಅವಳ ಮನೆಯಲ್ಲಿ ಅವಳಿಗೆ ಭೇಟಿಯಾದನು. ಆ ವೇಳ್ಯದಲ್ಲಿ ಅವಳಿಗೆ ೮ ಮಂದಿ ಹೆಣ್ಣುಮಕ್ಕಳು, ೭ ಮಂದಿ ಗಂಡುಮಕ್ಕಳು, ೨೫ ಮೊಮ್ಮಕ್ಕಳು ಇದ್ದರು.

೧೮೪೩ನೇ ವರುಷದ ತನ್ನ ೬೪ನೇ ಜನ್ಮದಿವಸದಲ್ಲಿ ಅವಳು ಫ್ರಾಂಚು ದೇಶದ ರಾಜಧಾನಿಯಾದ ಪೇರಿಸ್ ಎಂಬಲ್ಲಿ ತನ್ನ ಹಿತಕರವಾದ ವೃತ್ತಿ ನಡಿಸುತ್ತಿದ್ದು, ತಿರಿಗಿ ಸ್ವದೇಶಕ್ಕೆ ಹೋಗುವಾ ಹೊತ್ತು ಆ ದೇಶದ ರಾಣಿಯು ಅವಳಿಗೆ ಸುಂದರವಾದ ಗೊಂಬೆಗಳಿರುವ ಒಂದು ದೇವವಾಕ್ಯದ ಪುಸ್ತಕವನ್ನು ಸ್ನೇಹದ ಗುರ್ತಿಗಾಗಿ ಕೊಟ್ಟಳು. ಇದು ನನ್ನ ಕಡೆಯ ಪ್ರಯಾಣವಾಯಿತೆಂದು, ಅವಳು ಹಿಂದಿರುಗುವ ಮಾರ್ಗದಲ್ಲಿ ತಿಳುಕೊಂಡದ್ದು ಸರಿಯಾಯಿತು; ಅವಳ ಮುದಿಶರೀರವು ಬರಬರ ತ್ರಾಣ ಸವಿದು ಹೋಯಿತು. ೧೮೪೫ನೇ ವರುಷದ ೧೩ನೇ ಅಕ್ಟೋಬರಿನ ರಾತ್ರಿಯ ೧೦ನೇ ತಾಸಿಗೆ ಅವಳು ತನ್ನ ಪ್ರಿಯರ ಮಧ್ಯದೊಳಗೆ ತನ್ನ ಜೀವವನ್ನು ದೇವರಿಗೆ ಬಿಟ್ಟು ಕೊಟ್ಟಳು.—ಬಳಿಕ ಸೂರ್ಯನು ಮೂಡಿ, ಅವಳು ನಡಿಸಿದ ಬೆಳಕಿನ ಕೆಲಸದ ಮತ್ತು ಹೋದ ಬೆಳಕಿನ ಲೋಕದ ಸೌಜ್ಞೆಯಾಗಿ ಶೋಭಿಸಿದನು.

ಸ್ವದೇಶವೂ ಪರದೇಶಗಳೂ ಅವಳು ಸತ್ತದ್ದಕ್ಕಾಗಿ ದುಃಖ ಪಟ್ಟವು. ಪಟ್ಣದ ಯಾವ ಬೀದಿಗಳನ್ನು ದಾಟಿ ಅವಳ ಹೆಣ ತಕ್ಕೊಂಡು ಹೋದರೋ ಆ ಬೀದಿಗಳವರೆಲ್ಲರೇ ತಮ್ಮ ಅಂಗಡಿಗಳನ್ನು ಮುಚ್ಚಿ ಕೊಂಡರು; ರಾಣಿಯು ಸತ್ತಂತೆ ಸಮುದ್ರ ತೀರದ ಹತ್ತರದ ನಾವಿಕರು ತಮ್ಮ ನಿಶಾನಿಗಳನ್ನು ಕೂವೆಮರದ ಅರ್ಧಕ್ಕೆ ಇಳಿಸಿ ಬಿಟ್ಟರು;—ಬಲೆ ತಿದ್ದಿ ಕೊಳ್ಳುವ ಮೀನುಗಾರರು, ಚುಕ್ಕಾಣಿ ಹಿಡಿದಿರುವ ಹಡಗದವರು, ತೀರದ ಕಾವಲೀ ಜನರು, ಶೆರೆಮನೆಯವರು, ಸನ್ಮಾರ್ಗಕ್ಕೆ ತಪ್ಪಿಸಿ ಕೊಂಡವರು, ಆಟ ಆಡುವ ಮಕ್ಕಳು, ಮಂಚದ ಮೇಲಿನ ರೋಗಿಷ್ಟರು, ಸಂಕಟದ ಬಡವರು, ಸಿಂಹಾಸನಗಳವರು ಕೂಡಿ, ತಮ್ಮ ಮಿತ್ರಳು ತೀರಿ ಹೋದಳೆಂದು ದುಃಖಿಸಿದರು. ಅವಳು ಸಂಣದರಲ್ಲಿ ನಂಬಿಗಸ್ಥಳಾಗಿ, ದೊಡ್ಡ ಕಾರ್ಯಗಳನ್ನು ನಡಿಸಿದಳು; ಓದಿದವರೇ, ಹೋಗಿ, ಅದರಂತೆ ಮಾಡಿರಿ!—

## 73. DR. CHUKRUBHUTTU

# ೭೩. ಚಕ್ರಭಟ್ಟ ವೈದ್ಯನು

"ಪ್ರಯಾಸ ಪಡದೆ ಪ್ರಯಾಗ ಶಿಕ್ಕೀತೇ?„
ಗಾದೆ.

ಬಂಗಾಳದ ಕಡೆಯ ಧಕ್ಕ ನಾಡಿನಲ್ಲಿ ಕ್ರಿಸ್ತಶಕದ ೧೮೨೬ನೇ ವರುಷದಲ್ಲಿ ಒಬ್ಬ ಬಡ ಬ್ರಾಹ್ಮಣನಿಗೆ ಚಕ್ರಭಟ್ಟನೆಂಬ ಕುಮಾರನು ಹುಟ್ಟಿದನು. ಇವನು ತನ್ನ ಜೀವದ ೬ನೇ ವರುಷದಲ್ಲಿ ದಿಕ್ಕಿಲ್ಲದವನಾದನು. ಆದರೂ ಅವನು ಒಂದು ಉಪಾಯದಿಂದ ತನ್ನ ಊರಿನ ಸಾಲೆಯಲ್ಲಿ ಸಂಸ್ಕೃತ ಫಾರ್ಸಿ ಬಂಗಾಳಿ ಎಂಬ ಈ ೩ ಭಾಷೆಗಳನ್ನು ಕಲಿತು ಕೊಂಡನು; ಇಂಗ್ಲಿಷಭಾಷೆ ಉಂಟೆಂದು ಅವನು ಆ ವರೆಗೆ ಅರಿಯದೆ, ೧೩ ವರ್ಷದವನಾದ ಮೇಲೆ ಮೊದಲು ಒಬ್ಬ ಇಂಗ್ಲಿಷ ದೊರೆಯನ್ನು ನೋಡಿ, ಇವನು ತನ್ನ ಉದ್ಯೋಗದಲ್ಲಿ ಆಡುವ ಭಾಷೆ ಕೇಳಿ, ತಾನು ಆ ಭಾಷೆಯನ್ನು ಹ್ಯಾಗೂ ಕಲಿತು ಕೊಳ್ಳ ಬೇಕು ಎಂದು, ತನ್ನ ಸ್ವಲ್ಪ ವಸ್ತ್ರಗಳನ್ನೂ ಬುತ್ತಿಯನ್ನೂ ಕಟ್ಟಿ ಕೊಂಡು, ೨೦ ಹರದಾರಿ ದೂರ ಇರುವದೊಂದು ಇಂಗ್ಲಿಷ ಸಾಲೆಗೆ ಪಯಣವಾಗಿ ಹೋದನು. ತನಗೆ ಹಣವೂ ಸ್ನೇಹಿತರೂ ಸುಲಕ್ಷಣಪತ್ರಿಕೆಯೂ ಇಲ್ಲದ ಕಾರಣ ಅವನು ಆ ಸಾಲೆಯ ಪಂಡಿತನಾದ ಬ್ರಾಹ್ಮಣನ ಹತ್ತರ ಹೋಗಿ, ನೀವು ದಯ ಮಾಡಿ ನನಗೆ ಇಂಗ್ಲಿಷ ಕಲಿಸಿ ಕೊಟ್ಟರೆ ನಿಮ್ಮ ಅಡಿಗೆಗಾರನಾದೇನೆಂತ ಬೇಡಿ ಕೊಳ್ಳಲಾಗಿ, ಆ ಪಂಡಿತನು ಮೆಚ್ಚಿ, ಹಾಗೆ ಮಾಡಿದನು. ಚಕ್ರಭಟ್ಟನು ಆಗಿಂದಾಗ ರೋಗದಲ್ಲಿ ಬಿದ್ದರೂ ಆಗಿಂದಾಗ ತನ್ನ ಕುಟುಂಬದವರಿಂದ ತೊಂದರೆ ಬಂದರೂ ಬಿಡದೆ ಅಭ್ಯಾಸ ಮಾಡುತ್ತಾ ಬಂದನು. ೧೮೪೩ನೇ ವರುಷದಲ್ಲಿ ಅಲೆಕ್ಸಂಡರನೆಂಬ ಸರ್ಕಾರ ದೊರೆಯು ಅವನ ವಿಷಯ ಕೇಳಿ, ನಿನಗೆ ಕಲ್ಕತ್ತ ಪಟ್ಟಣದ ವೈದ್ಯಸಾಲೆಯಲ್ಲಿ ಕಲಿಯಲಿಕ್ಕೆ ಮನಸ್ಸಿದ್ದರೆ ನಾನು ಎಲ್ಲ ವೆಚ್ಚ ಮಾಡೇನೆಂದು ಅವನ ಹತ್ತರ ಹೇಳಿದಾಗ ಅವನು ಆಗಲಿ ಎಂದು ಅಲ್ಲಿಗೆ ಹೋಗಿ, ಪರೀಕ್ಷೆ ಕೊಡಲು,—ಅವನನ್ನು ಮೊದಲು ಶೇರಿಸಲಿಲ್ಲ; ಆದರೆ ಅವನು ಧೈರ್ಯಗುಂದದೆ ಮರು ವರುಷದಲ್ಲಿ ತಿರಿಗಿ ಪರೀಕ್ಷೆ ಕೊಟ್ಟಾಗ ಅದು ಬಹಳ ಒಳ್ಳೇದಾದ್ದರಿಂದ ಅವನ ಕಾರ್ಯ ಕೈಗೂಡಿತು. ಅದೇ ಕಾಲದಲ್ಲಿ ಚಕ್ರಭಟ್ಟನು ತನ್ನ ಕುಲದ ಅನೇಕ ಜ

ನರು ಕೂಡಿದಲ್ಲಿ ವ್ಯರ್ಥವೆಂದು ತನ್ನ ಕೊರಳಿನ ಜನಿವಾರವ ಕೊಯಿದು ಬಿಷ್ಟು ಕೊಟ್ಟನು. ಬಳಿಕ ಅದೇ ವರುಷದ ಅಂತ್ಯದಲ್ಲಿ ಸರ್ಕಾರದವರು ಆ ವೈದ್ಯಸಾಲೆಯ ವಿದ್ಯಾರ್ಥಿಗಳಿಗೆ ತಿಳಿಸಿದ್ದೇನಂದರೆ—ನಿಮ್ಮಲ್ಲಿ ಒಬ್ಬನು ಇಂಗ್ಲಾಂಡಿಗೆ ಹೋಗಿ, ಅಲ್ಲಿ ತನ್ನ ವೈದ್ಯಾಭ್ಯಾಸ ತೀರಿಸಿ ಕೊಳ್ಳ ಬೇಕಾದರೆ ಇದೇ ವೇಳೆ. ಚಕ್ರಭಟ್ಟನು ಕೇಳಿ, ತನ್ನ ಜಾತಿ ಆಸ್ತಿ ಕುಟುಂಬಸಂಗತಿ ತಪ್ಪಿದರೂ ಚಿಂತಿಸದೆ, ನಾನು ಹೋಗುತ್ತೇನೆಂದು ಪಂಥ ಮಾಡಿ ಕೊಂಡು, ಗೆಳೆಯರು ಬಂದು ಅಡ್ಡಮಾತು ಆಡಿದರೂ ಕುಟುಂಬದವರು ತನ್ನನ್ನು ಕಲ್ಕತ್ತದಿಂದ ಒತ್ತಾಯ ಮಾಡಿ ವೈಯ್ಯು ಎತ್ತುಗಡೆ ಗೈದರೂ ಅದನ್ನೆಲ್ಲಾ ಲಕ್ಷಿಸದೆ, ೧೮೪೫ನೇ ವರ್ಷದ ಮಾರ್ಚಿ ತಿಂಗಳಿನಲ್ಲಿ ಹಡಗವೇರಿ, ಇಂಗ್ಲಾಂಡಿಗೆ ಹೋಗಿ ಮುಟ್ಟಿದನು. ಅಲ್ಲಿಯ ವಿದ್ಯಾಸಾಲೆಯಲ್ಲಿ ಶೇರಿ, ಚಂದಾಗಿ ಕಲಿಯುತ್ತಿದ್ದದರಿಂದ ಅವನಿಗೆ ಒಂದು ಚಂಗಾರದ ಬಿರುದುನಾಣ್ಯ ಶಿಕ್ಕಿದ್ದಲ್ಲದೆ ಅನೇಕ ಸುಲಕ್ಷಣಪತ್ರಿಕೆಗಳು ಪ್ರಾಪ್ತವಾದವು. ೧೮೪೭ನೇ ವರುಷದಲ್ಲಿ ಅವನು ಸಭೆಯ ಮುಂದೆ ಕ್ರಿಸ್ತನಾದೇನೆಂದು ಅರಿಕೆ ಮಾಡಿ, ಸ್ನಾನ ಹೊಂದಿ, ಮರು ವರುಷದಲ್ಲಿ ವೈದ್ಯೋದ್ಯೋಗ ನಡಿಸ ತೊಡಗಿ, ಅಂದಿನಿಂದ ೨ ವರುಷದ ಮೇಲೆ ತಿರಿಗಿ ಹಿಂದು ದೇಶಕ್ಕೆ ಬಂದು, ಕಲ್ಕತ್ತದಲ್ಲಿ ಮಾನವುಳ್ಳ ಉದ್ಯೋಗಗಳನ್ನು ಪಡ ಕೊಳ್ಳುತ್ತಾ ಬಂದನು.

## 74. ALBERT, PRINCE OF WALES

## ೭೪. ಆಲ್ಬರ್ಟನೆಂಬ ವೇಲ್ಜಿನ ಶ್ರೀಮಂತನನ್ನು ಕುರಿತು

"ಗಿಡವಾಗಿ ಬಾಗದ್ದು ಮರವಾಗಿ ಬಗ್ಗೀತೇ?,,
ಗಾದೆ.

ಲ್ಬರ್ಟನೆಂಬಾತನು ಇಂಗ್ಲಾಂಡಿನ ಪಟ್ಟಕ್ಕೆ ಸಲ್ಲುವ ಶ್ರೀಮಂತನು; ಆತನು ಈಗ ೨೦ ವರುಷದಾತನಾಗಿದ್ದಾನೆ, ಆತನ ವಿಷಯವಾಗಿ ಒಂದು

ಕಥೆ ಕೇಳಿರಿ. ವಿಲಾಯತಿಯಲ್ಲಿ ಘನವಂತರ ಮಕ್ಕಳಿಗೆ ವಿದ್ಯಾಭ್ಯಾಸ ಕಲಿಸುವದು ಬಹಳ ಕಷ್ಟ. ಅಂಥವರ ಮಕ್ಕಳು ವಿಶೇಷವಾಗಿ ಸ್ವಭಾವದಿಂದ ಗರ್ವಿಷ್ಟರಾಗಿರುತ್ತಾರೆ, ಮತ್ತು ತಂದೆ ತಾಯಿಗಳು ಸಹ ತಕ್ಕ ಪ್ರಕಾರ ಅವರನ್ನು ಶಿಕ್ಷಿಸುವದು ಅಪರೂಪ. ಹೀಗಾಗಿ ಮತ್ತೊಬ್ಬರಿಗೆ ಮಾನ ಕೊಟ್ಟು ಯೋಗ್ಯವಾಗಿ ನಡಕೊಳ್ಳಲಿಕ್ಕೆ ಅಂಥವರ ಮಕ್ಕಳಿಗೆ ತಿಳಿಯುವದಿಲ್ಲ. ಆದರೆ ವಿಕ್ಟೋರಿಯ ರಾಣಿಯ ಪತಿಯು ಬುದ್ಧಿಯುಳ್ಳ ಶ್ರೀಮಂತನಾಗಿದ್ದದರಿಂದ ಮಗನನ್ನು ಶಿಕ್ಷೆಯಲ್ಲಿಯೇ ಇಡುತ್ತಿದ್ದನು; ಹ್ಯಾಗಂದರೆ: ಆ ವೇಲ್ಜಿನ ಶ್ರೀಮಂತನು ಸುಮಾರು ಹನ್ನೆದುವರೆ ವರುಷದ ಹಿಂದೆ ಒಬ್ಬ ಧಾರೆಸಾನಿಯ ಬಳಿಯಲ್ಲಿ ವಿದ್ಯಾಭ್ಯಾಸ ಮಾಡುತ್ತಿರಲಾಗಿ, ತನಗೆ ಕೊಟ್ಟಿರುವ ಪಾಠಕ್ಕೆ ಮನಸ್ಸು ಇಡದೆ ಇದ್ದನು. ಅದನ್ನು ನೋಡಿ, ಬೋಧಕಳು ಅಂದದ್ದು.—ಶ್ರೀಮಂತರಾಜಪುತ್ರನು ತನ್ನ ಕೆಲಸಕ್ಕೆ ಮನ ಮುಟ್ಟಿಸುವದಿಲ್ಲ; ದಯಮಾಡಿ ಪುಸ್ತಕ ನೋಡಿ ಕೊಂಡು ಪಾಠ ಕಲಿಯ ಬೇಕು. ಅದಕ್ಕೆ ರಾಜಪುತ್ರನು—ನನಗೆ ಮನಸ್ಸಿಲ್ಲ! ಅಂದನು. ಅವಳು ಕೇಳಿ, ಹಾಗಾದರೆ ನಿಮ್ಮನ್ನು ಒಂದು ಮೂಲೆಯಲ್ಲಿ ನಿಲ್ಲಿಸುತ್ತೇನೆ ಅಂದಾಗ ಆತನು—ಪಾಠ ಕಲಿಯಲೊಲ್ಲೆನು, ಮೂಲೆಯಲ್ಲಿಯೂ ನಿಲ್ಲಲೊಲ್ಲೆನು, ವೇಲ್ಜಿನ ಶ್ರೀಮಂತನಾಗಿದ್ದೇನಲ್ಲವೋ? ಎಂದು ಹೇಳಿ, ಮೇಲೆ ಅಧಿಕಾರವನ್ನು ತೋರಿಸುತ್ತೇನೆಂಬ ಹಾಗೆ ತನ್ನ ಕಾಲಿನಿಂದ ಒಂದು ಕಿಟಿಕಿಯ ಕಂನಡಿ ಒಡದು ಬಿಟ್ಟನು. ಇಂಥಾ ಗರ್ವವನ್ನು ನೋಡಿ, ಬಹಳ ವಿಸ್ಮಯ ಪಟ್ಟು, ಯೌವನ ಧಾರೆಸಾನಿಯು ಕುರ್ಚಿಯಿಂದ ಎದ್ದು, ಹೇಳಿದ್ದೇನಂದರೆ— ಇರಲಿ, ಸ್ವಾಮಿ, ನೀವು ನಿಮ್ಮ ಪಾಠವನ್ನು ಕಲಿಯ ಬೇಕು ಇಲ್ಲವಾದರೆ ನಿಮ್ಮನ್ನು ಹ್ಯಾಗೂ ಮೂಲೆಯಲ್ಲಿ ನಿಲ್ಲಿಸುತ್ತೇನೆ, ವೇಲ್ಜಿನ ಶ್ರೀಮಂತನಾಗಿದ್ದರೂ ಚಿಂತೆ ಇಲ್ಲ.—ಆದರೆ ಏನು ಮಾಡೋದು? ಹುಡುಗನು ತಿರಿಗಿ ಗರ್ವದಿಂದ ಅದೇ ಪ್ರಕಾರ ಅದೇ ಉತ್ತರ ಕೊಟ್ಟು, ಮತ್ತೊಂದು ಕನ್ನಡಿಯನ್ನು ಒಡದು ಬಿಟ್ಟನು. ಧಾರೆಸಾನಿಯು ನನ್ನ ಅಧಿಕಾರವೆಲ್ಲಾ ಹೀಗೆ ಅಲಕ್ಷ್ಯ ಮಾಡುತ್ತಾನಲ್ಲಾ? ಎಂದು ಚಿಂತಿಸಿ, ಸೇವಕನನ್ನು ಘಂಟೆಯ ಶಬ್ದದಿಂದ ಕರದು, ಚಿಕ್ಕ ಶ್ರೀಮಂತನ ತಂದೆಯಾದ ರಾಜಶ್ರೀ ಶ್ರೀಮಂತ ಅಲ್ಬರ್ಟನು ದಯ ಮಾಡಿ ಬರ ಬೇಕೆಂದು ಹೇಳಿ, ಕಳುಹಿಸಿದಳು. ಇತನು ತಕ್ಷಣದಲ್ಲಿ ಬಂದು, ತನ್ನನ್ನು ಅಪೇಕ್ಷಿಸಿದ್ದು ಯಾಕೆ ಎಂದು ತಿಳುಕೊಂಡ ಕೂಡಲೇ, ವೇಲ್ಜಿನ ಶ್ರೀಮಂತನಾದ ತನ್ನ ಕುಮಾರನಿಗೆ ಒಂದು ಮಣೆ ತೋರಿಸಿ, ಒಳ್ಳೇದೈ, ಈಗ ಸ್ವಲ್ಪ ಅಲ್ಲಿ ಕೂತುಕೋ ಎಂದು ಹೇಳಿದ ಮೇಲೆ ತನ್ನ ಕೋಣೆಗೆ ಹೋಗಿ, ಕೈಯಲ್ಲಿ ದೇವವಾಕ್ಯದ ಪುಸ್ತಕವನ್ನು ಹಿಡುಕೊಂಡು ಬಂದು, ಮಗನೇ, ಅಪೊಸ್ತಲನಾದ ಪೌಲನೆಂಬವನು ಯಜಮಾನರಿಗೂ ಉಗ್ರಾಣದವರಿಗೂ ಒಳಗಾಗಿರುವವರ ವಿಷ

ಯವಾಗಿ ಬರೆದದ್ದನ್ನು ನೀನು ಕೇಳ ಬೇಕೆಂತ ಅಪೇಕ್ಷಿಸುತ್ತೇನೆಂದು, ಒಂದು ಶ್ಲೋಕ ಓದಿದನು, ಅದೇನಂದರೆ ಬಾಧ್ಯಸ್ಥನು ಬಾಲಕನಾಗಿರುವ ಕಾಲದೊಳಗೆ ಎಲ್ಲಕ್ಕೂ ಅಧಿಕಾರಿಯಾಗಿದ್ದರೂ ದಾಸನಿಗಿಂತ ವಿಶೇಷನಲ್ಲ, ಆದರೆ ತಂದೆ ಮುನ್ನೇಮಿಸಿದ ಕಾಲದ ವರೆಗೆ ಯಜಮಾನರಿಗೂ ಉಗ್ರಾಣದವರಿಗೂ ಒಳಗಾಗಿದ್ದಾನೆ. — ಇದನ್ನು ಓದಿ, ತಂದೆಯು ತಿರಿಗಿ ಹೇಳಿದ್ದು: ನೀನು ವೇಲ್ಜಿನ ಶ್ರೀಮಂತನೆಂಬದು ನಿಸ್ಸಂಶಯವಾಗಿ ಸತ್ಯವೇ, ಮತ್ತು ನೀನು ಯೋಗ್ಯವಾಗಿ ನಡಕೊಂಡರೆ ಮುಂದೆ ಪ್ರಖ್ಯಾತ ಮನುಷ್ಯನಾಗ ಬಹುದು, ನಿನ್ನ ತಾಯಿಯ ಪಟ್ಟವನ್ನು ಹೊಂದಿ ಅರಸನಾಗ ಬಹುದು, ಆದರೆ ಸದ್ಯಕ್ಕೆ ನೀನು ಚಿಕ್ಕ ಹುಡುಗನಾಗಿದ್ದಿ ಮತ್ತು ವೇಲ್ಜಿನ ಶ್ರೀಮಂತನಾಗಿದ್ದರೂ ಈಗ ಯಜಮಾನರಿಗೂ ಉಗ್ರಾಣದವರಿಗೂ ಒಳಗಾಗಿರುತ್ತಿ, ಅವರ ಮಾತನ್ನು ನೀನು ಕೇಳ ತಕ್ಕದ್ದು, ತಾವು ಆಜ್ಞಾಪಿಸುವದನ್ನು ನಿನ್ನಂಥವನು ಮಾಡ ಬೇಕೆಂದು ಅವರು ಬೆಸಸ ಬಹುದು; ಇದರ ಹೊರ್ತು ಬುದ್ಧಿಯುಳ್ಳ ಅರಸನಾದ ಸೊಲೊಮೋನನು ಬರದದ್ದನ್ನು ಸಹಾ ನಿನಗೆ ಹೇಳುತ್ತೇನೆ, ಅದೇನಂದರೆ: ಮಗನಿಗೆ ಪ್ರೀತಿ ಮಾಡುವವನು ಬಾಲಪ್ರಾಯದಲ್ಲಿ ಅವನನ್ನು ಶಿಕ್ಷಿಸುತ್ತಾನೆ. — ಪಿತನು ಇಷ್ಟು ಹೇಳಿದ ಹಿಂದೆ ತನಗೆ ಮಗನ ಮೇಲಿರುವ ಪ್ರೀತಿ ತೋರಿಸಲಿಕ್ಕಾಗಿ ವೇಲ್ಜಿನ ಶ್ರೀಮಂತನಿಗೆ ಕೆಲವು ಪೆಟ್ಟು ಹೊಡದು, ಅವನನ್ನು ಮೂಲೆಯಲ್ಲಿ ನಿಲ್ಲಿಸಿ, ಹೇಳಿದ್ದೇನಂದರೆ: ಕಂದ, ನೀನು ನಿನ್ನ ಪಾಠವನ್ನು ಕಲಿಯುವ ಮಟ್ಟಿಗೂ, ಧಾರೆಸಾನಿಯು ಈಚೆಗೆ ಬರಲಿಕ್ಕೆ ಅಪ್ಪಣೆ ಕೊಡುವ ಮಟ್ಟಿಗೂ ಅಲ್ಲೇ ನಿಲ್ಲು; ಮತ್ತು ನೀನು ಯಜಮಾನರಿಗೂ ಉಗ್ರಾಣದವರಿಗೂ ಒಳಗಾಗಿರುತ್ತಿ, ಅವರ ಮಾತನ್ನು ನೀನು ಕೇಳ ಬೇಕೆಂಬದನ್ನು ಇನ್ನೂ ಮರತು ಬಿಡ ಬೇಡ! — ಈ ಪ್ರಕಾರ ರಾಜಶ್ರೀ ಶ್ರೀಮಂತ ಆಲ್ಬರ್ಟನು ಮಾಡಿದನು. ಅವನ ಪ್ರೀತಿಯಂಥಾ ಪ್ರೀತಿಯೇ ಸತ್ಪ್ರೀತಿ.



# 75. PRINCE HENRY AND JUDGE GASCOGNE

# ೭೫. ಶ್ರೀಮಂತ ಹೆನ್ರಿಯೂ ಗಸ್ಕಾನ್ಯ ನೆಂಬ ನ್ಯಾಯಕರ್ತನೂ

"ನ್ಯಾಯದಿಂದ ಆಯ ಹುಟ್ಟುವದು."
ಗಾದೆ.

೧೩೯೯ನೇ ವರುಷದಿಂದ ೧೪೧೩ನೇದರ ವರೆಗೆ ಇಂಗ್ಲಾಂಡಿನಲ್ಲಿ ಆಳ್ದ ಅರಸನಾದ ಹೆನ್ರಿ ಎಂಬಾತನಿಗೆ ಹೆನ್ರಿ ಎಂಬ ಕುಮಾರನಿದ್ದನು. ಈ ಶ್ರೀಮಂತನು ಯೌವನಸ್ಥನಾಗಿರುವ ಕಾಲದಲ್ಲಿ ವಿಧವಿಧ ಕುಚೇಷ್ಟಾತುರನಾಗಿ ಪಂಟಿಗರಾದ ಯೌವನಸ್ಥರನ್ನು ತನ್ನ ಜತೆಯಲ್ಲಿಟ್ಟು ಕೊಂಡನು. ಇವರೊಳಗೆ ಒಂದು ಅಪರಾಧ ಮಾಡದವನೊಬ್ಬನನ್ನು ಮುಖ್ಯ ನ್ಯಾಯಕರ್ತನ ಮುಂದೆ ಒಯ್ದು ನಿಲ್ಲಿಸಿದರು. ಆಗ ಶ್ರೀಮಂತ ಹೆನ್ರಿಯು — ತಾನು ಸಹ ಹತ್ತರವಿದ್ದರೆ ನ್ಯಾಯಕರ್ತನು ಅರಸನ ಮಗನಾದ ತನ್ನನ್ನು ನೋಡಿ ಪಕ್ಷಪಾತದಿಂದ ಶಿಕ್ಷಿಸದಿರುವನೆಂದು ನೆನಸಿ, ನ್ಯಾಯಸ್ಥಾನಕ್ಕೆ ಬಂದನು. ಆದರೆ ಗಸ್ಕಾನ್ಯನೆಂಬ ಆ ನ್ಯಾಯಕರ್ತನು ಬಹಳ ಒಳ್ಳೇ ಮನುಷ್ಯನಾಗಿ ದೇವರ ಭಯದಿಂದಲೂ ಸ್ವದೇಶದ ಹಿತದಿಂದಲೂ ನ್ಯಾಯಪ್ರಕಾರ ನಡಕೊಳ್ಳುವವನಾಗಿರಲಿಕ್ಕೆ, — ಶ್ರೀಮಂತನಿಗೆ ಭಯ ಪಡದೆ, ಆ ಯೌವನಸ್ಥನ ಮೇಲೆ ಅಪರಾಧವ ಸ್ಥಾಪಿಸಿ, ಅವನಿಗೆ ಶಿಕ್ಷೆ ಕೊಡ ಬೇಕೆಂದು, ನಿರ್ಣೈಸಿದನು. ಯೌವನದ ಶ್ರೀಮಂತನು ಕೇಳಿ, ಕೋಪಭ್ರಷ್ಟನಾಗಿ, ಮುಂದೆ ಹೋಗಿ, ನ್ಯಾಯಕರ್ತನಿಗೆ ಒಂದು ಪೆಟ್ಟು ಹೊಡೆದನು. ಈತನು ಶಾಂತನಾಗಿ ಇದ್ದು, ಒಬ್ಬ ಆಳನ್ನು ಕರದು, ಶ್ರೀಮಂತನು ನ್ಯಾಯಸ್ಥಾನದಲ್ಲಿ ಕೂತು ಕೊಂಡ ನ್ಯಾಯಕರ್ತನನ್ನು ಧಿಕ್ಕರಿಸಿ ಈ ಪ್ರಕಾರ ರಾಜ್ಯನೇಮಗಳಿಗೂ ಅರಸನಿಗೂ ಅವಮಾನ ಮಾಡಿದ್ದರಿಂದ ಅವನನ್ನು ಶೆರೆಮನೆಯಲ್ಲಿ ಇಡ ಬೇಕೆಂದು, ಅಪ್ಪಣೆ ಕೊಟ್ಟನು. ಆಗ ಆ ಶ್ರೀಮಂತ ಹೆನ್ರಿಯು ಎದುರಾಡದೆ, ತಾನು ಮಾಡಿದ್ದು ಸಮವಲ್ಲವೆಂದು, ಒಪ್ಪಿ ಕೊಂಡು, ಶೆರೆಮನೆಗೆ ಹೋಗಿ, ತರುವಾಯ ತನ್ನ ನಡತೆಗಾಗಿ ನ್ಯಾಯಕರ್ತನ ಕ್ಷಮೆ ಬೇಡಿ ಕೊಳ್ಳೋಣ, — ಬಿಡುಗಡೆ ಹೊಂದಿದನು. ಶ್ರೀಮಂತನ ತಂದೆಯಾದ ಅರಸನು ಈ ವರ್ತಮಾನ ಕೇಳಿ, ನ್ಯಾಯಕರ್ತನ ಮೇಲೆ

ಸ್ವಲ್ಪವಾದರೂ ಕೋಪ ಮಾಡದೆ, ಸಂತೋಷ ಪಟ್ಟು — ರಾಜ್ಯನೇಮಗಳಿಗೆ ಹ್ಯಾಗೂ ಮಂನಿಸುವ ಧೈರ್ಯವುಳ್ಳಂಥಾ ನ್ಯಾಯವಿಚಾರಕನಿರುವ ಅರಸನೇ ಭಾಗ್ಯವಂತನು, ಮತ್ತು ತನ್ನ ತಪ್ಪುಗಳಿಗೆ ಬರಲಿಕ್ಕೆ ಯೋಗ್ಯವಾದ ಶಿಕ್ಷೆಗೆ ಒಪ್ಪಿ, ಕೊಂಡು ಒಳಗಾಗುವಂಥಾ ಮಗನಿರುವ ತಂದೆಯೇ ಭಾಗ್ಯವಂತನು! ಎಂದು ಹೇಳಿದನು. ಶ್ರೀಮಂತನು ತಂದೆ ಸತ್ತ ಮೇಲೆ ಪಟ್ಟವನ್ನೇರಿದಾಗ — ಪಟ್ಟ ಕಟ್ಟುವ ಮೊದಲು ತಾನು ಆತನಿಗೆ ಮಾಡಿದ್ದಕ್ಕಾಗಿ ಅರಸನು ಈಗ ತನ್ನ ಚಾಕ್ರಿ ತೆಗದಾನು ಎಂದು, ಆ ನ್ಯಾಯಕರ್ತನು ನೆನಸಿದನು. ಆದರೆ ಯೌವನರಾಜನು ಅವನನ್ನು ಕರಸಿ, ಬಹಳ ಸನ್ಮಾನಿಸಿ, ಉದ್ಯೋಗದಲ್ಲಿ ಇರ ಬೇಕು, ಮತ್ತು ಮೊದಲಿನ ಹಾಗೆಯೇ ಪಕ್ಷಪರಪಕ್ಷವಿಲ್ಲದೆಯೂ ಧೈರ್ಯವಾಗಿಯೂ ನ್ಯಾಯ ತೀರಿಸಬೇಕೆಂದು ಅಪ್ಪಣೆ ಕೊಟ್ಟದ್ದಲ್ಲದೆ ತನ್ನ ಮುಂಚಿನ ನಡತೆಗೋಸ್ಕರ ಪಶ್ಚಾತ್ತಾಪಗೊಂಡು, ತನ್ನ ಜತೆಯಲ್ಲಿದ್ದ ಪಟಿಂಗರನ್ನು, ತನ್ನ ಹಾಗೆಯೇ ಅವರು ಸಹಾ ತಮ್ಮ ನಡತೆ ತಿದ್ದ ಬೇಕೆಂದು ಬುದ್ಧಿ ಹೇಳಿ, ಕಳುಹಿಸಿ ಬಿಟ್ಟನು. ಬಳಿಕ ಆತನು ಮೊದಲು ಎಷ್ಟು ಕೆಟ್ಟ ಪೋಕರಿಯಾಗಿದ್ದನೋ ಅಷ್ಟೇ ಹೆಚ್ಚು ಒಳ್ಳೇ ಮಿತಸ್ಥನೂ ಸುಧರ್ಮಿಯೂ ಆದನು.



# VII. SPECIMENS OF HINDOO LITERATURE

# ೭. ಹಿಂದು ಕಾವ್ಯಾದಿ ವರ್ಗವು

## 76. SODE RAJAH ENTERS INTO A MATRIMONIAL ALLIANCE WITH THE COORG

## ೭೬. ಸೊದೆ ರಾಜನ ಮದುವೆ



ದಲ್ಲದೆ ಪ್ಲವಂಗಳ ಸಂವತ್ಸರದಲ್ಲಿ ಕೊಡಗಿನ ಸಂಸ್ಥಾನದಿಂದ ಸಿದ್ಧಲಿಂಗ ದೇವರು ಎಂಬವರು ಬೊಂಡವಾಡಿಗೆ ಹೋಗಿ ಇದ್ದಲ್ಲಿ ಸೊದೆ ಸಂಸ್ಥಾನದ ಸವಾಯಿ ಬಸವಲಿಂಗ ರಾಜರು ಕೊಡಗಿನ ಸಂಸ್ಥಾನದ ವೀರರಾಜೇಂದ್ರ ಒಡೆಯರವರ ಕ್ಷೇಮಕುಶಲವನ್ನು ಕೇಳಿದ್ದರಿಂದ ಯಾವತ್ತೂ ಸುಖ ಸಂತೋಷಾತಿಕ್ಷೇಮಸಮಾಚಾರವನ್ನು ಸವಿಸ್ತಾರವಾಗಿ ಹೇಳಿದಲ್ಲಿ ಬಹಳ ಸಂತೋಷ ಪಟ್ಟುಕೊಂಡು, ಕೊಡಗಿನ ರಾಜರವರಿಗೂ ನಮಗೂ ಬಂಧುತ್ವ ಉಂಟು ಮಾಡಿ ಕೊಡ ಬೇಕು ಎಂಬದಾಗಿ ಹೇಳಿ ಕೊಂಡಲ್ಲಿ ಆ ವಿವರಕ್ಕೆ ಆ ಸಿದ್ಧಲಿಂಗ ದೇವರು ಕೊಡಗಿನ ಮಹಾರಾಜರ ಹೆಸರಿಗೆ ಒಂದು ಕಾಗದವನ್ನು ಬರೆಸಿ ಕಳುಹಿಸಿದರು. ಅದರಲ್ಲಿ ಸೊದೆ ಧಾರೆಗಳವರು ಹೇಳಿದಂಥ ವಿದ್ಯಮಾನ ಯಾವತ್ತೂ ಬರದರೆ ಮಧ್ಯೇ ಟೀಪುಸುಲ್ತಾನರ ಶೀಮೆ ಆದ್ದರಿಂದ ಕಾಗದ ದುಷ್ಮಾನರ ಕೈಗೆ ಶಿಕ್ಕೀತು ಎಂಬದರಿಂದ ಸಂಸ್ಕೃತವಾಗಿ ಸಂಕ್ಷೇಪದಲ್ಲಿ ಅವರು ಬರದಂಥ ವಿವರ—ನಾವು ಅಲ್ಲಿಗೆ ಹೋದಲ್ಲಿ ಅವರು ನಮಗೆ ಹೇಳಿ ಕೊಂಡ ಪ್ರಸಂಗ: ನಮ್ಮನ್ನು ಅಲ್ಲಿಗೆ ಬರುವ ಹಾಗೆ ಯತ್ನ ಮಾಡುವದು, ಮಾನಪಾನ ನಡಸುವದು, ಬಂಧುತ್ವ ಅಗತ್ಯ ಸಂಪಾದಿಸುವದು, ತಮ್ಮ ಮಿತ್ರರೊಡನೆ ನಮಗೆ ಮಿತ್ರತ್ವ ಸಂಪಾದಿಸಿ ಕೊಡುವದು, ಈ ನಾಲ್ಕು ಮಾತು ಹೇಳಿ ಇದ್ದಾರೆ ಎಂಬದಾಗಿ ಬರದು, ಉಳಿಕೇ ಮಾತು ಯಾವತ್ತೂ ಬಾಯಿಮಾತಿನಲ್ಲಿ ಹೇಳಲಿಕ್ಕೆ ತಮ್ಮ ಕಡೆಯ ಎರಡು ಜನ ಮರಿಗಳ ಕಳುಹಿಸಿದರು.

ಸ್ವಾದೆ ಅರಸುಗಳವರು ಬರದ ಕಾಗದದಲ್ಲಿ: ಸಿದ್ಧಲಿಂಗ ದೇವರು ಬಂದು ಇದ್ದರು, ಅವರು ಹೇಳಿದ ಅಭಿಪ್ರಾಯ ಯಾವತ್ತೂ ಕೇಳಿ, ನಮ್ಮನಸಿಗೆ ಬಹಳ ಸಂತೋಷವಾಯಿತು; ನಮ್ಮನಸಿನಲ್ಲಿ ಇರುವ ವಿವರ ಯಾವತ್ತೂ ಅವರಿಗೆ ಹೇಳಿಕೊಂಡು ಇದ್ದೇವೆ; ಅವರ ಕಡೆಯಿಂದ ಸವಿಸ್ತಾರವಾಗಿ ತಮಗೆ ತಿಳಿಯ ಬಂದೀತು; ನಾವು ತಮ್ಮ ಬಂಧುಗಳಾಗುವಂಥ ದೃಷ್ಟಿ ಮಡಗಿ, ಆರೈಕೆ ಮಾಡುವ ಜಾರ ತಮಗೆ ಕೂಡಿ ಇದೆ ಎಂತ ಇತ್ತು.

ಇವರ ತಂಗಿಯವರಾದ ಚಿನ್ನಮ್ಮಾಜಿಯವರು ಕೊಡಗಿನ ಮಹಾರಾಜರಿಗೆ ಬರದು ಕಳುಹಿಸಿದ ಕಾಗದದಲ್ಲಿ: ತಮಗೆ ಕುಮಾರತಿ ಉಂಟು ಎಂತ ಕೇಳಿ ಇದ್ದೇನೆ; ಆ ಕುಮಾರತಿಯರನ್ನು ನಮ್ಮ ಅಣ್ಣಾಜಿಯವರಾದ ಬಸವಲಿಂಗ ರಾಜರವರಿಗೆ ವಿವಾಹ ಮಾಡಿ ಕೊಟ್ಟು, ಬಂಧುತ್ವ ಬಳಸುವಂಥ ಪ್ರೀತಿ ಮಡಗಿ, ನಾವು ಅಲ್ಲಿಗೆ ಬರುವಂತೆ ಅನುಕೂಲ ಮಾಡಿ, ತಮ್ಮ ಮಿತ್ರರ ಸಂಗಡ ಮಿತ್ರತ್ವವನ್ನು ಸಂಪಾದಿಸಿ ಕೊಟ್ಟು, ಇವರನ್ನ ಆರೈಕೆ ಮಾಡ ಬೇಕು ಎಂಬ ಅರ್ಥವಿತ್ತು.

ಈ ಕಾಗದದ ಅಭಿಪ್ರಾಯಗಳ, ಆ ಸಿದ್ಧಲಿಂಗ ದೇವರ ಕಡೇ ಮುಖಗಳು ಹೇಳಿದ ಬಾಯಿಮಾತ ಸಹ, ರಾಜರವರು ಕೇಳಿ, ಇದಕ್ಕೆ ಬದಲಾಗಿ ಸ್ವಾದೆ ಧಾರೆಗಳವರಿಗೆ ಬರಸಿ ಕಳುಹಿಂದ ಕಾಗದಲ್ಲಿ: ನೀವು ಬರೆಸಿ ಕಳುಹಿದ ಕಾಗದದ ವಿವರ, ಸಿದ್ಧಲಿಂಗ ದೇವರು ಬರದಂಥ ಅಭಿಪ್ರಾಯ ಮುಂತಾಗಿ ತಿಳಿಯ ಬಂತು; ಈ ಬಗ್ಗೆ ಈಗ ಹೋಗಿ ಬರುವಂಥ ಮಾರ್ಗದಲ್ಲಿ ದುಷ್ಟಾತ್ಮನಾದ ಟೀಪುಸುಲ್ತಾನರ ಶೀಮೆ ಆಗಿ ಇದೆ; ಇದಲ್ಲದೆ ತಾವು ಪರಾಯ ತಾಲೂಕು ಪುರ್ತುಗಾಲಿಯರ ಆಶ್ರಯದಲ್ಲಿ ಇದ್ಧೀರಿ; ನಾವು ಇಂಗ್ರೇಜಿ ಬಹಾದ್ದರ ಕುಂಪಣಿ ಸರಕಾರದ ದೋಸ್ತಾರರಾಗಿ, ನಮ್ಮ ಸುಖ ದುಖ್ಖ ಆ ಸರಕಾರಕ್ಕೆ ಕೂಡಿ ಇರುವ ಕಾರಣ ನೀವು ಬರದ ನಿಮ್ಮ ಮನಸಿನ ಅಭಿಪ್ರಾಯವನ್ನು ಆ ದೊಡ್ಡ ಸರಕಾರಕ್ಕೆ ನಾವು ತಿಳಿಸಿಯೇವು; ತಾವೂ ಜಾಹೇರು ಮಾಡುವದು; ಕಂಕಣ ಪ್ರಾಪ್ತಿ ಇದ್ದರೆ ದೇವರ ಅಪ್ಪಣೆಯಿಂದ ಆದೀತು ಎಂಬದಾಗಿತ್ತು.

ಆ ಬಳಿಕ ಕಾಳಯುಕ್ತಿ ಸಂವತ್ಸರದಲ್ಲಿ ಟೀಪು ಸುಲ್ತಾನರ ಮೇಲೆ ಲಡಾಯಕ್ಕೆ ಹೋಗುವ ಬಗ್ಗೆ ಇಂಗ್ರೇಜಿ ಬಹಾದ್ದರ ಕುಂಪಣಿ ಸರಕಾರದ ಲಷ್ಕರು ಈ ಕೊಡಗಿನ ಶೀಮೆಗೆ ಬಂದು ಇದ್ದಲ್ಲಿ ಸ್ವಾದೆ ರಾಜರು ಬರೆಸಿ ಕಳುಹಿದ ಕಾಗದದ ವಿವರ: ನಮ್ಮ ಮನೋಗತ ಅಭಿಪ್ರಾಯ ಮೊದಲೇ ಬರೆಸಿ ತಿಳಿಯ ಪಡಿಸಿದ್ದೇವೆ; ತಾವು ನಾವು ಪ್ರಾಕಾರಚ್ಛದಿಂದ ಸ್ವಕೀಯರಾಗಿ ಬರುವಂಥ ವಿಷಯದಲ್ಲಿ ವಿಶೇಷವಾಗಿ ಬರೆಸಿ ತಿಳೀ ಪಡಿಸ ತಕ್ಕದ್ದು ಏನು ಇದೆ? ನಮ್ಮ ಸಂಸ್ಥಾನದ ಹಿರಿಯವರ ಮೇಲೆ ದೃಷ್ಟಿ

ಮಡಗಿ, ನಮ್ಮ ಕೈವಿಡಿದು, ಕೀರ್ತಿ ತಂದು ಕೊಳ್ಳ ಬೇಕು; ನಮ್ಮ ಹಾಲ ಹಕೀಕತ್ತನ್ನು ಜೆನರಲ್ ಸಾಹೇಬರವರಿಗೂ ಮುಂಬಯಿ ಗವರ್ನರ್ ಸಾಹೇಬರವರಿಗೂ ಕಾಗದ ಬರೆಸಿ ಕಳುಹಿಸಿ ಇದ್ದೇವೆ; ಇದನ್ನು ಅವರಿಗೆ ತಲಪಿಸ ಬೇಕು. — ಈ ಕಾಗದವು, ಲಷ್ಕರಿನ ಸಂಗಡ ಮಹಾರಾಜರು ಕರಡಿಗೋಡಮಾಳದಲ್ಲಿ ಇದ್ದಾಗ್ಯೆ, ಬಂದು ತಲಪಿತು.

ಆವಾಗ್ಯೆ ಆ ದಂಡಿಗೆ ಖಾವಂದರಾಗಿ ಇದ್ದ ಜೆನರಲ್ ಸ್ಟುವಾರ್ಟ್ ಸಾಹೇಬರಿಗೆ, ಜೆನರಲ್ ಹಾರ್ಟ್ಲಿ ಸಾಹೇಬರಿಗೆ ಸಹಾ, ಸ್ವಾದೆ ರಾಜರು ಬರದ ಕಾಗದ, ಮುಂಬಯಿ ಗವರ್ನರ್ ಸಾಹೇಬರಿಗೆ ಬರದ ಕಾಗದ ಸಹ, ಕೊಟ್ಟು, ತಮಗೆ ಬರದ ಅಭಿಪ್ರಾಯವನ್ನು ಜೆನರಲ್ ಸಾಹೇಬರಿಗೆ ತಿಳಿಸಿದಲ್ಲಿ ಇವರು —

ಈ ವಿವಾಹದ ಶುಭಕಾರ್ಯ ಆಗುವಂಥಾದ್ದು ಇದೆ; ಇದರ ಮೇಲೆ ಅವರಿಗೂ ತಮಗೂ ಪ್ರಾಕಾರಭ್ಯ ದೋಸ್ತಿ ಸಗ್ಗಾವತ್ತು ಉಂಟು; ಆದ್ದರಿಂದ ಶ್ರೀರಂಗಪಟ್ಟಣದ ಕಿಲ್ಲೆ ತೆಗದು ಕೊಂಡ ಮೇಲೆ ಈ ಶುಭಕಾರ್ಯ ಆಗ ಬೇಕು; ಇದು ಬಹಳ ಸಂತೋಷವಿದೆ ಎಂಬದಾಗಿ ಹೇಳಿದರು.

ಆಗ ಕೊಡಗಿನ ರಾಜರು ಸ್ವಾದೆ ಧೊರೆಗಳಿಗೆ ಬರದ ಕಾಗದದ ವಿವರ: ನೀವು ಬರದ ಕಾಗದದ ವಿವರ ತಿಳಿಯ ಬಂತು; ಇಂಗ್ರೇಜಿ ಸರಕಾರಕ್ಕೆ ನೀವು ಬರದ ಕಾಗದವನ್ನು ಜೆನರಲ್ ಸಾಹೇಬರಿಗೆ ಕೊಟ್ಟು, ನಿಮ್ಮ ಮನೋಭಿಪ್ರಾಯ ಯಾವತ್ತೂ ತಿಳಿಯ ಪಡಿಸಿದಲ್ಲಿ ಅವರು ಬಹಳ ಸಂತೋಷವಾಗಿ ಇದ್ದಾರೆ; ದುಷ್ಮಾನನು ದೂರವಾಗಿ ಹೋದ ಬಳಿಕ ನಿಮ್ಮ ಮನಸ್ಸಿನ ಅಪೇಕ್ಷೆ ಇದ್ದ ಮೇರೆ ನಾವು ಸಂತೋಷವಾಗಿ ಇದ್ದೇವೆ; ದೇವರ ದಯದಿಂದ ಆದೀತು. — ಹೀಗೆ ಬರೆಸಿ, ಉಡುಗರೆ ಮುಂತಾಗಿ ಕಳುಹಿಸಿ ಕೊಟ್ಟರು.

ಆ ಬಳಿಕ ಕೊಡಗಿನ ರಾಜರು ಆ ಮದಿವೆಯ ವಿಷಯವಾಗಿ ಇಂಗ್ರೇಜಿ ಸರ್ವಾಧಿಪತಿಗೆ ವಿನಂತಿಪತ್ರ ಕಳುಹಿಸಲಾಗಿ ಇವರು ಸಂತೋಷದಿಂದ ಒಪ್ಪಿ ಕೊಂಡರು.

ಸ್ವಾದೆ ಬಸವಲಿಂಗರಾಜರು ಬರುವಾಗ್ಯೆ, ಕೊಡಗಿನ ಧೊರೆಗಳು ಇಂಗ್ರೇಜಿ ಸರಕಾರಕ್ಕೆ ಬರದು ಇದ್ದ ಮೇರೆ, ಕುಂಪಣಿ ಸರಕಾರದ ಹುಕುಂ ಪ್ರಕಾರ, ಆಯಾ ತಾಲೂಕಿನ ಶೀಮೇ ಮಾರ್ಗದಲ್ಲಿ ಅಮಿಲರು ಪಡಿ ಬಿಡಾರ ಮುಂತಾಗಿ ಮಾಡಿಸಿ, ಬೇಕಾದ ಸಾಮಾನು ಕೊಟ್ಟು ಕಳುಹಿಸಿದರು. ಈ ಸೋದೆ ಅರಸುಗಳು ಕಲಿಸಂದ ೪೯೦೩ನೇ ದುರ್ಮತಿ ಸಂವತ್ಸರದ ಪುಷ್ಯ ಶುದ್ಧ ಪಂಚಮಿ ನಾಲ್ಕುನಾಡ ಅರಮನೆಗೆ ಬಂದಲ್ಲಿ ವೀರರಾಜೇಂದ್ರ ಒಡೆಯರವರು ಬಹಳ ಖುಷಿಯಿಂದ ಅವರ ಮಿಲಾಕತ್ತು ಆಗಿ, ಬೇರೆ ಬಿಡಾರಗಳ ಶೃಂಗಾರ ಮಾಡಿಸಿ, ಅಲ್ಲಿ ಇಳಿಸಿ, ಇದೇ ಪುಷ್ಯ,

ಶುದ್ಧ ಪೂರ್ಣಮಿ ದಿವಸಕ್ಕೆ ವಿವಾಹಲಗ್ನವನ್ನು ನಿಶ್ಚೈಸಿ, ಸಕಲ ಸೋಪಸ್ಕರವನ್ನು ಕೂಡಿಸಿ, ಬರುವಂಥ ಸರದಾರರಿಗೆ, ಮೇಲಾದ ಜನಕ್ಕೆ ಸಹಾ, ಪ್ರತ್ಯೇಕ ಬಿಡಾರಗಳನ್ನು ಮಾಡಿಸಿ, ಈ ವಿವಾಹಪ್ರಸ್ತದ ಬಗ್ಯೆ ಸರದಾರರ ಕಳುಹ ಬೇಕೆಂಬದಾಗಿ, ಜೆನರಲ್ ವೆಲ್ಲೆಸ್ಲಿ ಸಾಹೇಬರಿಗೂ ಮಲೆವಾರಿ ಕಮಿಶನ್ ಸಾಹೇಬರಿಗೂ ಬರದು ಕಳುಹಿದಲ್ಲಿ ಅದೇ ಮೇರೆ ಶ್ರೀರಂಗಪಟ್ಟಣದಿಂದ ಕಾಪ್ಟನ್ ತೋಮಸ್ ಮಾರಿಯಟ್ ಸಾಹೇಬರ, ಮಲೆವಾರಿಯಿಂದ ಕಾಪ್ಟನ್ ದಾವೀದ ಫೌಲಿಸ್ ಸಾಹೇಬರ, ಕಾಪ್ಟನ್ ಅಶ್ಬಾರ್ನ್ ಸಾಹೇಬರ ಸಹಾ, ಈ ಮೂರು ಜನ ಸರದಾರರನ್ನು ಕಳುಹಿದರು.

ಅವರು ಬಂದಲ್ಲಿ ಮಾನಮರಿಯಾದೆಯಿಂದ ಮಿಲಾಕತ್ತು ಆಗಿ, ಸಲಾಂ ಫಿರಂಗಿಗಳ ಹಾರಿಸಿ, ಅವರನ್ನು ಬಿಡಾರದಲ್ಲಿ ಇಳಿಸಿ, ಉಪಚಾರಗಳ ಮಾಡುತ್ತಾ, ಬಂದಂಥಾ ಸರ್ವೇ ಜನಕ್ಕೂ ಸಂತೈಸಿ, ವಿವಾಹಕ್ಕೆ ಇಂಗ್ರೇಜಿ ಸರದಾರರನ್ನು ಬರಮಾಡಿ, ಸಮಸ್ತರನ್ನು ಕರಸಿ, ಸಭೆ ನೆರಸಿ, ರಾಜನೀತೀ ಪ್ರಕಾರ ಕಲ್ಯಾಣ ಆಗುವಾಗ್ಯೆ ವೀರರಾಜೇಂದ್ರ ಒಡೆಯರವರು: ತಮ್ಮ ಕುಮಾರತಿ ಆದ ರಾಜಂಮಾಜಿಯವರನ್ನು ನಿಮಗೆ ವಿವಾಹ ಮಾಡಿ ಕೊಡುತ್ತೇವೆ, ಇವರ ಗರ್ಭದಲ್ಲಿ ಜನಿಸಿದಂಥಾ ಕುಮಾರರಿಗೆ ನಿಮ್ಮ ದವಲತ್ತಿಗೆ ಬಾಧ್ಯರ ಮಾಡಿ ಮಡಗ ಬೇಕು ಎಂತ, ಸ್ವಾದೆ ಸಂಸ್ಥಾನದ ಬಸವಲಿಂಗ ರಾಜರಿಗೆ ಹೇಳಿದಲ್ಲಿ ಅವರು ಒಡಂಬಟ್ಟು: ಈ ನಮ್ಮ ರಾಣಿ ಆಗುವಂಥಾ ತಮ್ಮ ಕುಮಾರತಿಯರ ಗರ್ಭದಲ್ಲಿ ದೇವರ ಕಟಾಕ್ಷದಿಂದ ಕುಮಾರರು ಜನಿಸಿದರೆ ನಮ್ಮ ದವಲತ್ತಿಗೆ ಬಾಧ್ಯರಾದಾರು ಎಂಬದಾಗಿ ಹೇಳಿದ್ದರಿಂದ ಕೊಡಗಿನ ಮಹಾರಾಜರು ಮಹಾ ಸಂತೋಷ, ವಿಭವ, ಉತ್ಸಾಹದಿಂದ ಸಮಸ್ತ ಜನರ ಮುಂತಟ್ಟು, ಇಂಗ್ರೇಜಿ ಸರಕಾರದ ಸರದಾರ ಸಾಹೇಬರ ಶಾಯಿದಿಯಿಂದ, ತಮ್ಮ ಕುಮಾರತಿ ರಾಜಮ್ಮಾಜಿಯವರನ್ನು ಕಲಿ ಸಂದ ೪೯೦೩ನೇ ದುರ್ಮತಿ ಸಂವತ್ಸರದ ಪುಷ್ಯ, ಶುದ್ಧ ಪೂರ್ಣಮಿ ಚಂದ್ರವಾರ ಶುಭಮುಹೂರ್ತದಲ್ಲಿ ರಾತ್ರೆಘಳಿಗೆ ಹತ್ತೊಂಬತ್ತಕ್ಕೆ ವೃಶ್ಚಿಕಲಗ್ನದಲ್ಲಿ ಬಹಳ ವೇದೋಕ್ತಿಯಿಂದ ಬಸವಲಿಂಗ ರಾಜರವರಿಗೆ ಧಾರೆಯಂನೆರದು, ವಿವಾಹ ಮಾಡಿ ಕೊಟ್ಟರು.





# 77. GRAND HUNTING PARTY

# ೭೭. ಕೊಡಗಿನಲ್ಲಿ ಆದ ಆಶ್ಚರ್ಯದ ಬೇಟೆ

ಈ ಮೇರೆ ಇರುತ್ತಾ ಇರಲಿಕ್ಕಾಗಿ, ತಲಚೇರಿಯಿಂದ ರಿಚರ್ಡ್ ಟಾರಿನ್ ಸಾಹೇಬರು, ಬೆಲ್ ಸಾಹೇಬರು, ಸವಾರ ಪಾರ್ಸನ್ಸ್ ಸಾಹೇಬರು, ಶ್ರೀರಂಗಪಟ್ಟಣದಿಂದ ಬಂದ ಜೆನರಲ್ ಮಕ್‌ಡಾವಲ್ ಸಾಹೇಬರ ತಮ್ಮ ಕಾಪ್ಟನ್ ಮಕ್‌ಡಾವಲ್ ಸಾಹೇಬರು, ಕಾಪ್ಟನ್ ಕಿಂಗ್ ಸಾಹೇಬರು, ಇವರ ಸಂಗಡ ಮತ್ತೂ ಎರಡು ಜನ ಸರದಾರರು ಸಹಾ, ಇಂಶಿಪ್ಟು ಸಾಹೇಬರು ಧೊರೆಗಳವರ ಮಿಲಾಖತ್ತಿಗೆ ಬಂದು ಇದ್ದಲ್ಲಿ — ಹೊರಮಲೆನಾಡ ಕೋಟೆ ಕಾಡು ಎಂಬ ಅರಣ್ಯಕ್ಕೆ ಎರಡು ಆನೆ ಬಂದು ಇದೆ, ರೈತರ ಪೈರು ಪಚ್ಚೆಕರಡು ಮಾಡುತ್ತದೆ ಎಂತ ಕೇಳಿದ್ದರಿಂದ ಮಹಾರಾಜರು ಸ್ವಾದೆ ಬಸವಲಿಂಗ ರಾಜರ, ಸದರಿ ಸಾಹೇಬ ಜನರ ಸಹ ಕರದು ಕೊಂಡು, ಆ ಅರಣ್ಯಕ್ಕೆ ಹೋಗಿ, ಅದರ ಸುತ್ತ ಜನರ ನಿಲ್ಲಿಸಿ, ಕೆಲವು ಜನರ ಆ ಕಾಡ ಒಳಗೆ ಕೂಡಿಸಿ, ಅಟ್ಟಿಸಿದಲ್ಲಿ ವೀರರಾಜೇಂದ್ರ ಒಡೆಯರವರ ಬಳಿಗೆ ಎರಡು ಆನೆಯೂ ಬಂದದರಿಂದ ಅದನ್ನು ತಮ್ಮ ಖಾಸಾ ಹಸ್ತದಿಂದ ರೈಫಲ್ ಕೋವಿಂದ ಹೊಡದಲ್ಲಿ ಒಂದೊಂದು ಗುಂಡಿಗೆ ಆ ಎರಡು ಆನೆಯೂ ಅಲ್ಲಿಯೇ ಬಿದ್ದು ಹೋಯಿತು. ಆ ಬಳಿಕ ಆ ಸರದಾರರು ಯಾವತ್ತೂ ನೋಡಿ, ಬಹಳ ಆಶ್ಚರ್ಯ ಪಟ್ಟು, ಸಂತೋಷವಾಗಿ ಆ ಆನೆಗಳನ್ನು ಬೆಲ್ ಸಾಹೇಬರ ಕೈಯಿಂದ ಅಳೆದಲ್ಲಿ ಒಂದು ಆನೆ ಏಳು ಕಾಲು ಮೊಳ ಎತ್ತರ ಇತ್ತು; ಮತ್ತೊಂದು ಆನೆ ಆರು ಅರೆ ಮೊಳ ಎತ್ತರ ಇತ್ತು. ಆ ಬಳಿಕ ಧೊರೆಗಳು, ಆ ಸರದಾರ ಸಾಹೇಬರು ಸಹಾ, ಅರಮನೆಗೆ ಬಂದು ಇರುತ್ತಿದ್ದಲ್ಲಿ ಯಾವತ್ತೂ ಸಾಹೇಬರು ತಷ್ಮ ಸರಕಾರದ ಕೆಲಸದ ಮೇಲೆ ಹೊರಟು ಹೋದರು.

ಇನ್ನು ಬೇಟೆ ನೋಡ ಬೇಕು ಎಂಬದಾಗಿ, ಸವಾರ ಪಾರ್ಸನ್ಸ್ ಸಾಹೇಬರು ನಿಂತರು. ಹೀಗೆ ಇರುವಾಗ್ಯೆ, ಕೆಲವು ದಿವಸದಲ್ಲಿ — ಎಡವನಾಡ ಏಳುಸಾವಿರಶೀಮೇ ಕಡೆಯಲ್ಲಿ ಮೃಗಜಾತಿಗಳು ಹೆಚ್ಚಿ ಪೈರುಪಚ್ಚೆ ಬಹಳ ಕೇಡು ಮಾಡುತ್ತವೆ ಎಂತ, ಸಮಾಚಾರ ಕೇಳಿದ್ದರಿಂದ ಮಹಾರಾಜರವರು ಸ್ವಾದೆ ಧೊರೆಗಳ, ಸವಾರ ಪಾರ್ಸನ್ಸ್ ಸಾಹೇಬರ ಸಹ, ಕರದು ಕೊಂಡು, ಕಲಿ ಸಂದ ೪೯೦೮ನೇ ಕ್ಷಯ ಸಂ

ವತ್ಸರದ ಚೈತ್ರ ಶುದ್ಧ ಷಷ್ಠಿ ಬುಧವಾರ ದಿವಸ ಹೋಗಿ, ಎಡವನಾಡಲ್ಲಿ ಮೊಕ್ಕಾಮಾಗಿ, ಅಲ್ಲಿಂದ ಮಾರನೇ ಶುದ್ಧ ಸಪ್ತಮಿ ಗುರುವಾರ ದಿವಸ ಏಳುಸಾವಿರಶೀಮೆಗೆ ಹೋಗುವಾಗ್ಯೆ ಬಾಗೆರಿ ಎಂಬ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದಂಥ ಮೃಗಜಾತಿಗಳ ವಿವರ: ಸಾರಂಗ ಇಪ್ಪತ್ತೇಳು, ಕಡವೆ ಹದಿನಾಲ್ಕು, ಹಂದಿ ಮೂರು, ಕರಡಿ ಒಂದು, ಕಾಟಿ ಎರಡು, ಹೆಬ್ಬಾವು ಒಂದು,—ಅಂತು ನಾಲ್ವತ್ತೆಂಟಕ್ಕೆ; ಸ್ವಾದೆ ರಾಜರು ಒಂದು ಕಡವೆ ಇಟ್ಟರು.

ಈ ದಿವಸ ಕಣಕಾಲಿಗೆ ಹೋಗಿ, ಮೊಕ್ಕಾಂ ಮಾಡಿ, ಮೂರು ದಿನ ಇದ್ದಲ್ಲಿ ಈ ಶುದ್ಧ ಅಷ್ಟಮಿ ಶುಕ್ರವಾರ ಮಾಲಂಬಿಬೆಟ್ಟದ ಅರಣ್ಯದಲ್ಲೂ ಬೇಟೆ ಆಡಿ ಇಟ್ಟ ಮೃಗಜಾತಿಗಳ ವಿವರ: ಸಾರಂಗ ಇಪ್ಪತ್ತೊಂದು, ಕಡವೆ ನಾಲ್ವತ್ತ ಒಂಬತ್ತು, ಹಂದಿ ಎರಡು, ಕರಡಿ ಒಂದು, ಕೂರಪಂದಿ ನಾಲ್ಕು, ಕಾಟಿ ಆರು,—ಅಂತು ಎಂಬತ್ತ ಮೂರಕ್ಕೆ; ಕೊಡಗಿನ ಮಹಾರಾಜರು ಇಟ್ಟದ್ದು ಕಡವೆ ಒಂದು, ಸಾರಂಗ ಒಂದು; ಪಾರ್ಸನ್ಸ್ ಸಾಹೇಬರು ಇಟ್ಟದ್ದು ಕಡವೆ ಎರಡು; ಸ್ವಾದೆ ರಾಜರು ಇಟ್ಟದ್ದು ಕಾಟಿ ಒಂದು.

ಈ ಶುದ್ಧ ನವಮಿ ಸ್ಥಿರವಾರ ಮೂರುಕಲ್ಲುಬೆಟ್ಟದ ಕಾಡಿನಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತಿಗಳ ವಿವರ: ಸಾರಂಗ ನಾಲ್ವತ್ತು, ಕಡವೆ ಮೂವತ್ತು, ಹಂದಿ ಒಂದು, ಕೂರಪಂದಿ ಮೂರು, ಮುಳ್ಳುಹಂದಿ ಎರಡು, ಕಾಟಿ ಹದಿನೈದು,—ಅಂತು ತೊಂಬತ್ತ ಒಂದಕ್ಕೆ; ವೀರರಾಜೇಂದ್ರ ಒಡೆಯರವರು ಇಟ್ಟದ್ದು ಸಾರಂಗ ಮೂರು; ಪಾರ್ಸನ್ಸ್ ಸಾಹೇಬರು ಇಟ್ಟದ್ದು ಸಾರಂಗ ಒಂದು.

ಅಲ್ಲಿಂದ ತಿರುಗ ಕೂಚಾಗಿ, ಎಡವನಾಡಿಗೆ ಬಂದು, ನಾಲ್ಕು ದಿವಸ ಮೊಕ್ಕಾಂ ಆದಲ್ಲಿ ಬೇಟೆ ಆದದ್ದು ಶುದ್ಧ ದಶಮಿ ಭಾನುವಾರ ಚಿಕ್ಕನಕಡವಿನ ಕಾಡ ಬೇಟೆ ಆಡಿದಲ್ಲಿ ಬಿದ್ದ ಮೃಗಗಳ ವಿವರ: ಸಾರಂಗ ಹದಿನೆಂಟು, ಕಡವೆ ಇಪ್ಪತ್ತು, ಹಂದಿ ಒಂದು, ಕುರಂಗಿ ಎರಡು, ಕಾಟಿ ಒಂದು,—ಅಂತು ನಾಲ್ವತ್ತೆರಡಕ್ಕೆ; ಸ್ವಾದೆ ರಾಜರು ಇಟ್ಟ ಕಡವೆ ಒಂದು.

ಈ ಶುದ್ಧ ಏಕಾದಶಿ ಚಂದ್ರವಾರ ದಿವಸ ಪಾರ್ಸನ್ಸ್ ಸಾಹೇಬರವರು, ತಮಗೆ ಸರಕಾರದ ಕೆಲಸವಿದೆ, ಹೋಗ ಬೇಕು ಎಂಬದಾಗಿ, ಮಹಾರಾಜರಿಗೆ ಹೇಳಿ ಕೊಂಡು, ಹೊರಟು ಹೋದರು. ಈ ದಿವಸ ನೂರೊಂದುಬಸವನಕಣಿವೆಕಾಡಿನಲ್ಲೂ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತೀ ವಿವರ: ಸಾರಂಗ ಹತ್ತು, ಕಡವೆ ಇಪ್ಪತ್ತೇಳು, ಹಂದಿ ಒಂದು, ಕುರಂಗಿ ಎರಡು, ಹೆಬ್ಬುಲಿ ಒಂದು,—ಅಂತು ನಾಲ್ವತ್ತು.

ಈ ಮೇರೆ ಬೇಟೆ ಆಡಿ ಕೊಂಡು ಧೊರೆಗಳು ತಂಬಿಗೆ ಬಂದಲ್ಲಿ ಕುಸಬೂರ ಕಾಡಲ್ಲಿ ಹೇರಳ ಆನೆಗಳು ಇದೆ ಎಂತ ಅರಿಕೆ ಮಾಡಿದ್ದರಿಂದ— ಆನೆಗಳು ಬಹಳ ಕೆಲಸಕ್ಕೆ ಬರುತ್ತಾ ಇದೆ, ಬೇಟೇ ಬಿಲ್ಲ ಒಳಗೆ ಆನೆಗಳು ಶಿಕ್ಕಿದಾಗ್ಯೂ ಒಬ್ಬರೂ ಗುಂಡು ಹೊಡೆಯ ಬಾರದು ಎಂಬದಾಗಿ, ಯಾವತ್ತರಿಗೂ ಅಪ್ಪಣೆ ಕೊಟ್ಟು ಇದ್ದಲ್ಲಿ ಆ ದಿವಸ ಸಾಯಂಕಾಲದಲ್ಲಿ ನೂರೊಂದುಬಸವನಕಣುವೆ ಕಾಡಿನ ಬೇಟೆಯಲ್ಲಿ ಬಿದ್ದ ಮೃಗಜಾತಿಗಳ ಮಾಂಸ ಹೊತ್ತು ಕೊಂಡು, ಕುಸಬೂರ ಕಾಡ ಸಮೀಪದ ಮಾರ್ಗದಲ್ಲಿ ಜನರು ಬರುತ್ತಾ ಇದ್ದಲ್ಲಿ ಕಾಡಿನಿಂದ ಮಸ್ತಾಗಿ ಇರುವ ಆನೆಗಳು ಬಂದು, ಈ ಮಾಂಸ ತರುತ್ತಿದ್ದಂಥ ಜನರ ಬೆನ್ನಟ್ಟಿ, ಬೆರಸಿ, ಒಬ್ಬ ಮನುಷ್ಯನ ತುಳಿದು ಕೊಂದು ಹಾಕಿದ್ದರಿಂದ ಈ ಸಮಾಚಾರ ಮಹಾರಾಜರಿಗೆ ಅರಿಕೆ ಮಾಡಿದಲ್ಲಿ ಆನೆಗಳಿಗೆ ಗುಂಡು ಇಡ ಕೆಲಸವಲ್ಲ ಎಂತ ಯಾವತ್ತರಿಗೂ ನಾವು ಅಪ್ಪಣೆ ಕೊಟ್ಟು ಇದ್ದೆವು, ಈ ಪ್ರಕಾರ ಸುಮ್ಮನೆ ದಾರೀಲಿ ಬರುತ್ತಾ ಇದ್ದಂಥ ಮನುಷ್ಯನ ತುಳಿದು ಕೊಂದ ಮೇಲೆ ಅದೇ ಪ್ರಕಾರ ಆನೆಗಳ ಕೊಲ್ಲದೆ ಬಿಡ ಬಾರದು, ಯಾವತ್ತೂ ಜನರು ತಯಾರಾಗಿ ಬೆಳಿಗ್ಗೆ ಆ ಆನೆಗಳು ಇರುವ ಕಾಡಿಗೆ ಬೇಟೆ ಆಡ ಬೇಕೆಂತ ಅಪ್ಪಣೆ ಕೊಟ್ಟದರಿಂದ ಅದೇ ಮೇರೆ ಆ ಮಾರನೇ ಶುದ್ಧ ದ್ವಾದಶಿ ಮಂಗಳವಾರ ದಿವಸ ಬೆಳಿಗ್ಗೆ ಧೊರೆಗಳವರು ಯಾವತ್ತೂ ಜನರನ್ನು ಕರದು ಕೊಂಡು ಹೋಗಿ, ಆ ಕುಸಬೂರ ಕಾಡಿಗೆ ಸುತ್ತ ಜನರ ನಿಲ್ಲಿಸಿ, ಹದಿನೈದು ಘಳಿಗ್ಗೆ ಆನೆಗಳಿಗೆ ಗುಂಡು ಇಡುವದಕ್ಕೆ ಶುರು ಆಗಿ, ಏಳು ಅರೆ ಘಳಿಗೆಯ ಒಳಗೆ ಆನೆ ಇಪ್ಪತ್ತಾರು, ಕಾಟಿ ಇಪ್ಪತ್ತ ಮೂರು, ಹಂದಿ ನಾಲ್ಕು, ಕಡವೆ ಹದಿಮೂರು, ಸಾರಂಗ ಆರು, ಕುರಂಗಿ ಒಂದು,—ಅಂತು ಎಪ್ಪತ್ತ ಮೂರನ್ನು ಹೊಡದು ಕೊಂದರು; ಇದರಲ್ಲಿ ವೀರರಾಜೇಂದ್ರ ಒಡೆಯರವರು ಇಟ್ಟದ್ದು: ಮನುಷ್ಯನ ತುಳಿದ ಏಳು ಮೊಳ ಎತ್ತರದ ದೊಡ್ಡ ಕೊಂಬಿನ ಆನೆ ಒಂದು, ಸಣ್ಣ ಆನೆ ಒಂದು, ಕಾಟಿ ಎರಡು, ಕಡವೆ ಒಂದು; ಸ್ವಾದೆ ರಾಜರು ಇಟ್ಟದು: ಆನೆ ಒಂದು, ಕಡವೆ ಒಂದು. ಈ ಪ್ರಕಾರ ಹೊಡದರು.

ಶುದ್ಧ ಚತುರ್ದಶಿ ಗುರುವಾರ ದಿವಸ ವಳಗಾರದ ಕಾಡಿನಲ್ಲೂ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತಿಗಳ ವಿವರ: ಸಾರಂಗ ಹದಿನಾಲ್ಕು, ಕಡವೆ ಇಪ್ಪತ್ತು, ಕುರಂಗಿ ಎರಡು, ಕಾಟಿ ಆರು,—ಅಂತು ನಾಲ್ವತ್ತ ಎರಡಕ್ಕೆ; ಕೊಡಗಿನ ರಾಜರು ಇಟ್ಟದ್ದು: ಸಾರಂಗ ಒಂದು, ಸ್ವಾದೆ ರಾಜರು ಇಟ್ಟದ್ದು ಕಡವೆ ಒಂದು.

ಆ ಮಾರನೇ ದಿವಸ ಶುದ್ಧ ಪೂರ್ಣಮಿ ಶುಕ್ರವಾರ ದಿವಸ ಬೆಳಿಗ್ಗೆ ಕೂಚಾಗಿ ಹೊರಂಗಿಗೆ ಬಂದು, ಹುಂಡೂರು ಹುದಗೂರು ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತಿಗಳ ವಿವರ: ಸಾರಂಗ ಹನ್ನೊಂದು, ಕಡವೆ ಹತ್ತೊಂಬತ್ತು, ಹಂದಿ ಎರ

ಡು, ಕುರಂಗಿ ಒಂದು, ಕೂರಪಂದಿ ಒಂದು, ಕಾಟಿ ಎಂಟು, — ಅಂತು ನಾಲ್ವತ್ತ ಎರಡಕ್ಕೆ; ಕಾಡಗಿನ ರಾಜರು ಇಟ್ಟದ್ದು: ಸಾರಂಗ ಒಂದು, ಕಡವೆ ಒಂದು.

ಈ ಬಹುಳ ಪಾಡ್ಯವು ಸ್ಥಿರವಾರ ಕೆಂಗೇರಿಬಾಗೇರಿ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಜಾತೀ ವಿವರ: ಸಾರಂಗ ಇಪ್ಪತ್ತ ನಾಲ್ಕು, ಕಡವೆ ಹದಿನೈದು, ಕುರಂಗಿ ಎರಡು, ಕೂರಪಂದಿ ಒಂದು, ಕಾಟಿ ಒಂದು, — ಅಂತು ನಾಲ್ವತ್ತ ಮೂರಕ್ಕೆ; ಮಹಾರಾಜರು ಇಟ್ಟದ್ದು: ಸಾರಂಗ ಎರಡು, ಕಾಟಿ ಒಂದು.

ಬಹುಳ ದ್ವಿತೀಯ ಶಾನುವಾರ ಹದರೆಬೆಟ್ಟದ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಗಳ ವಿವರ: ಸಾರಂಗ ಎರಡು, ಕಡವೆ ಏಳು, ಹಂದಿ ಮೂರು, ಕರಡಿ ಒಂದು, ಕುರಂಗಿ ಒಂದು, ಕೂರಪಂದಿ ಒಂದು, — ಅಂತು ಹದಿನೈದಕ್ಕೆ; ಕಾಡಗಿನ ಧಾರೆಗಳು ಇಟ್ಟದ್ದು: ಕರಡಿ ಒಂದು.

ಈ ಬಹುಳ ತ್ರಿತೀಯ ಚಂದ್ರವಾರ, ಕಾಜೂರಕಸಗೆ ಕಾಡಲ್ಲಿ ಬೇಟೆ ಆಡಿದಲ್ಲಿ ಬಿದ್ದ ಮೃಗಗಳ ವಿವರ: ಸಾರಂಗ ಇಪ್ಪತ್ತೆರಡು, ಕಡವೆ ಮೂವತ್ತೊಂದು, ಹಂದಿ ಒಂದು, ಕುರಂಗಿ ಏಳು, ಕೂರಪಂದಿ ಐದು, ಕಾಟಿ ಹನ್ನೆರಡು, ಕಾಡ ಹೆಬ್ಬುಲಿ ಒಂದು, — ಅಂತು ಇಪ್ಪತ್ತ ಒಂಭತ್ತಕ್ಕೆ; ಕಾಡಗಿನ ಮಹಾರಾಜರು ಇಟ್ಟದ್ದು: ಸಾರಂಗ ಒಂದು, ಕಾಟಿ ಒಂದು, ಕಡವೆ ಆರು, ಹೆಬ್ಬುಲಿ ಒಂದು, — ಅಂತು ಒಂಭತ್ತು.

ಬಹುಳ ಚತುರ್ಥಿ ಮಂಗಳವಾರ ಗಂಜಿಗುಣಿ ಕಾಡಲ್ಲಿ ಬೇಟೆ ಆಡಿದಲ್ಲಿ ಮೃಗಜಾತಿಗಳು ಬಿದ್ದ ವಿವರ: ಸಾರಂಗ ಒಂಭತ್ತು, ಕಡವೆ ಹತ್ತು, ಕೂರಪಂದಿ ಒಂದು, — ಅಂತು ಇಪ್ಪತ್ತಕ್ಕೆ; ಸ್ವಾದೆ ರಾಜರು ಇಟ್ಟದ್ದು: ಕಡವೆ ಒಂದು.

ಅಂತು ಬೇಟೆ ಹನ್ನೆರಡಕ್ಕೆ ಬಿದ್ದ ಮೃಗಜಾತಿಗಳು ಆರುನೂರ ಇಪ್ಪತ್ತೆಂಟು ಬಿದ್ದು ಹೋಯಿತು. ಈ ಮೇರೆ ಬೇಟೆ ಆಡಿ ಕೊಂಡು, ಮಹಾರಾಜರು ಅರಮನೆಗೆ ಬಂದರು; ಧಾರೆಗಳವರು ಮೊದಲು ಬೇಟೆ ಆಡಿದ್ದಲ್ಲಿ ಒಂದೊಂದು ಬೇಟೆಯೊಳಗೆ ನೂರ, ನೂರ ಇಪ್ಪತ್ತೈದರ ಪರಿಯಂತ್ರ ಮೃಗಜಾತಿಗಳು — ಒಂದೊಂದು ಬೇಟೆಯೊಳಗೆ ಎಂಟು, ಒಂಭತ್ತು ಆನೆ, ಮೂರು, ನಾಲ್ಕು ಹೆಬ್ಬುಲಿಗಳು ಸಹಾ — ಬಿದ್ದು ಇದೆ. ಆದಾಗ್ಯೂ, ಒಳಗೆ ಬರದ ಮೇರೆ, ಒಂದು ಬೇಟೆಯಲ್ಲಿ ಹನ್ನೆರಡು ಗಂಟೇ ಮೇಲೆ ಮೂರು ಗಂಟೆಯೊಳಗೆ ಒಂದು ಜಾವ ಹೊತ್ತಿನಲ್ಲಿ ಇಪ್ಪತ್ತಾರು ಆನೆ ನಮ್ಮ ಬೇಟೆಯೊಳಗೆ ಶಿಕ್ಕಲೂ ಇಲ್ಲ, ಈ ಮೇರೆ ಶಿಕ್ಕಿದಂಥಾದ್ದು ಕೇಳಲೂ ಇಲ್ಲ. ಇದು ಬಹಳ ಆಶ್ಚರ್ಯವಾದಂಥಾದ್ದು, ದೇವಸಂಕಲ್ಪದಿಂದ ಶಿಕ್ಕಿದ್ದೇ ಹೊರ್ತು, ಮನುಷ್ಯಯೋಚನೆಯಿಂದ ಆದಂಥಾದಲ್ಲ. ಮುಂದು ಶಿಕಾರೀ ಮೇಲೆ ಬಹಳ ಪ್ರೀತಿ ಇರುವಂಥಾವರು ಬೇಟೆ ಆಡಿದರೆ ಒಂದು ಜಾವದ ಒಳಗೆ ಇಪ್ಪತ್ತಾರು

ಆನೆ ಶಿಕ್ಕಿ ಬಿದ್ದು ಹೋಗುವಂಥಾದ್ದು ಬಹಳ ಪ್ರಯಾಸವಾದೀತು. ಆದ್ದರಿಂದ ಈ ಆನೆಗಳ ತಲೆಗಳನ್ನು ತರಿಸಿ, ಎಡವನಾಡ ತಾಲೂಕಿನ ಸೋಮವಾರ ಪ್ಯಾಟೇ ಮುಂದೆ ಕಟ್ಟೆಯನ್ನು ಕಟ್ಟಿಸಿ, ಆ ಕಟ್ಟೆಯ ಮೇಲೆ ಇಪ್ಪತ್ತಾರು ಆನೇ ತಲೆಗಳನ್ನು ಮಡಗಿಸಿ, ಆನೆತಲೆಕಟ್ಟೆ ಎಂಬದಾಗಿ ಹೆಸರು ಮಡಗಿ, ಈ ಇಪ್ಪತ್ತಾರು ಆನೆಗಳ ಬಾಲವನ್ನು, ನಿಶಾನಿ ಕಾಣುವ ಉದ್ದಿಶ್ಯ, ಇಂಗ್ರೇಜಿ ಸರದಾರರು—ಟಾರಿನ್ ಸಾಹೇಬರು, ಬೆಲ್ ಸಾಹೇಬರು, ಪಾರ್ಸನ್ಸ್ ಸಾಹೇಬರು ಸಹಾ—ನೋಡುವ ಬಗ್ಗೆ, ವೀರರಾಜೇಂದ್ರ ಪ್ಯಾಟೆಯಲ್ಲಿ ಅವರು ಇಳಿದು ಇದ್ದಲ್ಲಿಗೆ ಕಳುಹಿಸಿ ಕೊಟ್ಟರು. ಈ ಬೇಟೆಯಲ್ಲಿ ದೇವರ ಅಪ್ಪಣೆಯಿಂದ ಈ ಪ್ರಕಾರ ಆದಂಥಾದ್ದು ಎಂತ ತಿಳಿಯುವ ಬಗ್ಗೆ, ಈ ಸಾಧನದಲ್ಲಿ ಬರಸಿ ಮಡಗಿ ಇದೆ.

(Rajahndrunamah.)

## 78. WHO IS AN OUTCASTE?

## ೭೮. ಹೊಲೆಯನು ಯಾರು?

ಹೊಲೆಯ ಹೊರಗಿಹನೆ? ಊರೊಳಗಿಲ್ಲವೆ? ಶ್ರೀಪತಿ ಸ್ಮರಣೆಯ
ನು ಬಲ್ಲವರು ಹೇಳೀ! || ಪಲ್ಲ ||
ಶೀಲವನು ಕೈಕೊಂಡು ನಡಸದಾತನು ಹೊಲೆಯ,
ಹೇಳಿದ್ದ ಪತಿಕಥೆಯ ಕೇಳದವ ಹೊಲೆಯ, ||
ಆಳಾಗಿಯರಸಂಗೆಯರಡು ಬಗೆವವ ಹೊಲೆಯ,
ಸೂಳೆಯನು ಹೋಗುವವ ಶುದ್ಧ ಹೊಲೆಯ! || ೧ ||
ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ,
ಲಂಡತನದಲ್ಲಿ ನಡವನು ಚಂಡಹೊಲೆಯ, ||
ಉಂಡ ಮನೆಗೆರಡನ್ನು ಬಗವಾತನೇ ಹೊಲೆಯ,
ಹೆಂಡತಿಯ ಇಚ್ಛೆಯವ ಹೇಡಿ ಹೊಲೆಯ! || ೨ ||
ಇದ್ದಾಗ ದಾನಧರ್ಮವ ಮಾಡದವ ಹೊಲೆಯ,

ಮುದ್ದಿಕ್ಕಿ ಕೊಲ್ಲುವಾತನೆ ಮಾರಿಹಾಲೆಯ, ||
ಬದ್ಧವಾಗಿ ನಯ ನುಡಿಯಿಲ್ಲದಾತನೆ ಹಾಲೆಯ,
ಶುದ್ಧ ತಾನೆಂಬಾತ ಶುಂಠಹಾಲೆಯ! || ೩ ||
ಆಶೆಮಾತನು ಕೊಟ್ಟು ಭಾಷೆ ತಪ್ಪುವ ಹಾಲೆಯ,
ಲೇಸುವುಪಕಾರಗಳ ಮಾಡದವ ಹಾಲೆಯ, ||
ಮೋಸದಲಿ ಜೀವಕ್ಕೆ ಮುನಿದು ಕೆಡಿಸುವ ಹಾಲೆಯ,
ಹುಸಿಯ ಬೊಗುಳುವ ಪಾಬ್ಬ ಹುಚ್ಚ ಹಾಲೆಯ! || ೪ ||
ಅರಿತು ಆಚಾರವನು ನಡಸದಾತನೆ ಹಾಲೆಯ,
ಪರಾತುಮಚರಣಗಳನು ನೆನೆಯದವ ಹಾಲೆಯ! ||
ಗುರುಹಿರಿಯರನು ಕಂಡು ನಮಿಸದಾತನೆ ಹಾಲೆಯ,
ಪರಸತಿಗೆ ಅಳುಕದವ ಪಾಪಿ ಹಾಲೆಯ! || ೫ ||

(Dasuru Pudu)

## 79. AN EXHORTATION TO BECOME WISE

## ೭೯. ಬುದ್ಧಿಪಾಲನೆ

ಕೆ ಮೂರ್ಖನಾದ್ಯೋ, ಮನುಜ? ನೀನ್ಯಾಕೆ
ಮೂರ್ಖನಾದ್ಯೋ?
ಯಾಕೆ ಮೂರ್ಖನಾದ್ಯೋ? ಕಾಕಬುದ್ಧಿಯ ಬಿಟ್ಟು ಲೋಕನಾಥನನೆನೆ;
ಕಂಡ್ಯಾ, ಮನುಜ? || ಪಲ್ಲ ||
ಮಕ್ಕಳು ತನ್ನವರೆಂದು, ರೊಕ್ಕವನೆಲ್ಲ ಘಳಿಸಿ ಕೊಂಡು,
ಸೊಕ್ಕಿನಿಂದಲಿ ತಿರುಗಾರೇನೋ, ಮನುಜ? || ೧ ||
ಕಕ್ಕಸನ ದೂತರ್ಬಂದು, ಲೆಕ್ಕವಾಯ್ತು ಹೊರಡೆಂದರೆ,
ನಕ್ಕೋರೆಲ್ಲ;—ಬಿಡಿಸಾರೇನೋ, ಮನುಜ? || ೨ ||
ಧಾನಧರ್ಮವನ್ನು ಮಾಡು, ಬುದ್ಧಿಯಿಂದ ತಿಳಿದು ನೋಡು,
ಹೀನ ಬುದ್ಧಿಯ ಮಾಡದೀರೋ, ಮನುಜ! || ೩ ||
ಸಾಧು ಜನರ ಸಂಗ ಮಾಡು, ಭೇದ ಭೇದ ತಿಳಿದು ನೋಡು,

ಪಾದದ ಬುದ್ಧಿ ಮಾಡದಿರೋ, ಮನುಜ! || ೪ ||
ಅರಿವರ್ಗಗಳಾಟವ ಬಿಟ್ಟು, ಪರಾತುಮಚರಣವ ಮುಟ್ಟಿ,
ಪರವ ಸೇರುವ ದಾರಿ ನೋಡೋ, ಮನುಜ! || ೫ ||

(Dasuru Pada)

## 80. THE BAD MINISTERS

## ೮೦. ದುಷ್ಟ ಪಂಡಿತರು

"ಪಂಡಿತಾಃ ಕ್ಷುದ್ರಾ ಮಾಯೋಪಜೀವಿನಃ ಕುರ್ಯುಃ ಕೃತ್ಯಮಕೃತ್ಯಂ ವೈ,, ||
ಅಂದರೆ:
ಹೀನರಾದ, ಮೋಸದಿಂದ ಜೀವಿಸುವ ಪಂಡಿತರು ಕೃತ್ಯ ಅಕೃತ್ಯಗಳನ್ನು ಮಾಡ್ಯಾರು.

ಒಂದಾನೊಂದು ವನಪ್ರದೇಶದಲ್ಲಿ ಮದೋತ್ಕಟವೆಂಬ ಸಿಂಹವು ವಾಸವಾಗಿರುವದು; ಕಾಗೆಯು ಆನೆಯು ನರಿಯು ಮೊದಲಾದವು ಅದರ ಸೇವೆ ಮಾಡುತ್ತಿರುವವು. ಅನಂತರ ಅವು ಅತ್ತಿತ್ತ ತಿರುಗುವಂಥಾ ಸಮಯದಲ್ಲಿ ಹಿಂದಿನಿಂದ ಭ್ರಷ್ಟವಾದ ಒಂದು ಕ್ರಥನಕವೆಂಬ ಒಂಟೆ ನೋಡಿದವು. ಆಗ ಸಿಂಹವು ಹೀಗಂದಿತು — ಇದು ಆಶ್ಚರ್ಯವಾದ ಅಪೂರ್ವದ ಪ್ರಾಣಿ! ತಿಳುಕೊಳ್ಳುವ! ಎಲೇ ಇದು ಏನು? ಗ್ರಾಮಸಂಬಂಧದ್ದೋ, ಅಥವಾ ಅರಣ್ಯಸಂಬಂಧದ್ದೋ? — ಅದು ಕೇಳಿ, ಕಾಗೆ ನುಡಿಯಿತು — ಎಲೇ ಸ್ವಾಮಿ, ಈ ಒಂಟೆ ಎಂಬ ಹೆಸರಿನದು ಗ್ರಾಮಸಂಬಂಧದ್ದೇ, ಪ್ರಾಣಿಗಳಲ್ಲಿ ಇದು ವಿಶೇಷ ತರದ್ದು, ನಿನ್ನ ಭಕ್ಷಣೆಗೆ ತಕ್ಕದ್ದು, ನೀನು ಕೊಲ್ಲ ಬಹುದು. — ಅಂದು ಸಿಂಹ ಅಂದದ್ದು — ಮನೆಗೆ ಬಂದಂಥಾದನ್ನು ನಾನು ಕೊಲ್ಲುವದಿಲ್ಲ. ಮತ್ತು ಈ ಗ್ರಂಥ ಹೇಳಿತು —

"ಗೃಹೇ ಶತ್ರುಮಪಿ ಪ್ರಾಪ್ತಂ ವಿಶ್ವಸ್ತಮ್ ಅಕುತೋಭಯಂ |
ಯೋ ಹನ್ಯಾತ್ ತಸ್ಯ ಪಾಪಂ ಸ್ಯಾಚ್ ಛತಬ್ರಾಹ್ಮಣಘಾತಜಂ,, ||೩-೨೧||
ಅಂದರೆ:

ಮನೆಗೆ ಬಂದ, ವಿಶ್ವಾಸ ಪಟ್ಟ, ಯಾತಕ್ಕೂ ಅಂಜದ ಶತ್ರುವನ್ನಾದರೂ ಯಾವನು ಕೊಲ್ಲುತ್ತಾನೋ ಅವನ ಪಾಪವೇ ನೂರು ಬ್ರಾಹ್ಮಣರನ್ನು ಕೊಂದಂಥಾದ್ದಾಗುವದು.

ನೀವು ಅಭಯ ಕೊಟ್ಟು, ಅದನ್ನು ನನ್ನ ಬಳಿಗೆ ತರ ಬೇಕು; ಅದು ಬಂದ ಕಾರ
ಣವನ್ನು ವಿಚಾರಿಸುತ್ತೇನೆ.—ಆ ಮೇಲೆ ಆ ಒಂಟೆಯು ಎಲ್ಲವುಗಳಿಂದ ವಿಶ್ವಾಸ
ಪಡಕೊಂಡು, ಅಭಯವಾಗಿ, ಆ ಮದೋತ್ಕಟದ ಸಮೀಪಕ್ಕೆ ಬಂದು, ನಮಸ್ಕರಿಸಿ,
ಕೂತು ಕೊಂಡು, ಬಿಂನಹದ ಮೇರೆಗೆ ತಾನು ಕುಲಭ್ರಷ್ಟವಾದ ಕಾರಣವನ್ನು ಅರು
ಹಿಸಿತು. ಅದಕ್ಕೆ ಸಿಂಹವು ಹೇಳಿದ್ದೇನಂದರೆ—ಎಲೋ ಕ್ರಥನಕನೇ, ನೀನು ಗ್ರಾ
ಮವನ್ನೈದಿ ಪುನಹ ಭಾರ ಹೊರುವ ಕಷ್ಟದ ಪಾಲುಗಾರನಾಗ ಬೇಡ, ಅದು ಕಾರ
ಣ ಈ ಅರಣ್ಯದಲ್ಲಿಯೇ ಶಂಕೆ ಇಲ್ಲದೆ ಪಚ್ಚೇ ಸದೃಶವಾದ ಎಳೇ ಹುಲ್ಲು ಭಕ್ಷಿಸುತ್ತಾ,
ನನ್ನ ಕೂಡ ವಾಸಿಸುತ್ತಾ ಉಳು ಕೊ!—ಆ ಒಂಟೆಯು ಹಾಗಾಗಲಿ ಎಂದು ಒಡಂ
ಬಟ್ಟು, ಅವುಗಳೊಂದಿಗೆ ನಿರ್ಭಯದಿಂದ ತಿರುಗುವಂಥಾದ್ದಾಗಿ ಇರುವದು. ಕೆಲವು
ದಿವಸದ ಮೇಲೆ ಮದೋತ್ಕಟಕ್ಕೂ ಅರಣ್ಯಸಂಚಾರಿಯಾದ ಆನೆಗೂ ಜಗಳವಾಗೋ
ಣ,—ಒನಕೆಯೋಪಾದಿಯ ಅದರ ದಂತಗಳು ತಿವಿದು, ಸಿಂಹಕ್ಕೆ ಬಹಳ ವ್ಯಥೆ ಬಂ
ದರೂ ಪ್ರಾಣ ಬಿಡಲಿಲ್ಲ. ತದನಂತರ ಆ ಸಿಂಹವು ತನ್ನ ಶರೀರಾಸಮರ್ಥ್ಯದಿಂದ ಒಂ
ದು ಹೆಜ್ಜೆ ಆವರೂ ಮುಂದಿಡಲಿಕ್ಕೆ ಆಗದಿರಲು,—ಸಕಲ ಸೇವಕರೂ ಕ್ಷುಧೆಯುಳ್ಳವ
ರಾಗಿ, ಪರಮ ದುಖ್ಖ ಪಟ್ಟರು. ಬಳಿಕ ಸಿಂಹವು ಅವರಿಗೆ ಹೇಳಿತು—ಎಲೇ ನೀವು
ಎಲ್ಲಿಯೂ ಏನೂ ಒಂದು ಪ್ರಾಣಿ ಹುಡುಕಿರಿ, ನಾನು ಈ ಕಷ್ಟದಲ್ಲಿ ಬಿದ್ದಿರುವಾ
ಗ್ಯೂ ಅದನ್ನು ಹತ ಮಾಡಿ, ಅದರಿಂದ ನಿಮಗೆ ಊಟ ಸಂಪಾದಿಸಿ ಕೊಟ್ಟೇನು.—
ಒಡನೆ ಆ ನಾಲ್ಕುವುಗಳು ತಿರುಗಲಾರಂಭಿಸಿ, ಏನೂ ಕಾಣದಿರಲಾಗಿ ಕಾಗೆ ನರಿಗಳೆರ
ಡೂ ಪರಸ್ಪರವಾಗಿ ಆಲೋಚಿಸಿದವು. ಆಗ ನರಿ ಮಾತನಾಡಿತು—ಎಲೋ ಕಾಗೆ
ಯಣ್ಣಾ, ಬಹಳ ಭ್ರಾಂತಿಯಿಂದ ಏನು? ನಮ್ಮ ಪ್ರಭುವಿನ ವಿಸ್ವಾಸದಲ್ಲಿ ಕ್ರಥನ
ಕವು ಅದೆಯಲ್ಲ? ಅದನ್ನೇ ಕೊಂದು, ಸರ್ವ ಪರಿವಾರಜನರ ಪ್ರಾಣ ರಕ್ಷಿಸುವಾ!—
ಅದಕ್ಕೆ ಕಾಗೆ ಹೇಳಿತು—ಇಗೋ ಒಳ್ಳೇ ಯುಕ್ತಿ ಹೇಳಿದಿ! ಆದರೆ ಸ್ವಾಮಿಯು ಅದಕ್ಕೆ
ಅಭಯ ಕೊಟ್ಟನಲ್ಲಾ? ಅದರಿಂದ ಅದನ್ನ ಕೊಲ್ಲಲಾಗದು.—ಆಗ್ಯೆ ನರಿ ಕೇಳಿ, ಎ
ಲೋ ಕಾಗೆಯೇ, ನಾನು ಸ್ವಾಮಿಗೆ ತಿಳಿಸಿ, ಸ್ವಾಮಿ ಅದನ್ನು ಕೊಲ್ಲುವ ಹಾಗೆ ಮಾ
ಡುತ್ತೇನೆ; ಅದು ಕಾರಣ ನೀವು ಇಲ್ಲಿ ನಿಲ್ಲಿರಿ, ನಾನು ಸ್ವಾಮೀ ಮನೆಗೆ ಹೋಗಿ,
ಆಜ್ಞೆ ಪಡಕೊಂಡು ಬರುತ್ತೇನೆ ಎಂದು, ತ್ವರೆಯಾಗಿ ಸಿಂಹದ ಹತ್ತರ ಹೋಗಿ, ಹೀ
ಗೆ ಹೇಳಿತು—ಸ್ವಾಮಿಯೇ, ನಾವು ಎಲ್ಲಾ ವನವ ತಿರಿಗ್ಯಾಡಿ ಬಂದೆವು, ಆದರೂ
ಯಾವದೊಂದು ಪ್ರಾಣಿಯೂ ದೊರಕಲಿಲ್ಲ, ಅದರಿಂದ ಸದ್ಯಕ್ಕೆ ಏನು ಮಾಡುವಾ?
ನಾವು ಈಗ ಹಶುವಿಗಾಗಿ ಒಂದು ಹೆಜ್ಜೆಯನ್ನಾದರೂ ಇಡಲಿಕ್ಕೆ ಸಾಮರ್ಥ್ಯ ಹೀ
ನರಾದೆವು; ಅದಲ್ಲದೆ ಸ್ವಾಮಿ ಸಹ ಪಥ್ಯದ ಊಟದಲ್ಲಿ ಇದ್ಧಾನಲ್ಲ? ಅದರ ಸಲು

ವಾಗಿ ಸ್ವಾಮಿಯ ಆಜ್ಞೆ ಆದ ಪಕ್ಷದಲ್ಲಿ ಈವತ್ತು ಕ್ರಥನಕದ ಮಾಂಸದಿಂದ ಉಳಿಯುವ ಕಾರ್ಯವಾದೀತು. — ಸಿಂಹವು ಆ ನಿಷ್ಠುರ ವಾಕ್ಯವನ್ನು ಕೇಳಿ, ಕೋಪದಿಂದನೆ ಹೀಗೆ ಹೇಳಿತು — ಛೀ ಛೀ, ಪಾಪಿಷ್ಠ! ಅಧಮ! ನೀನು ಹೀಗೆ ತಿರಿಗಿ ಹೇಳಿದ್ದಾದರೆ ನಿನ್ನನ್ನು ಆ ಕ್ಷಣದಲ್ಲಿಯೇ ಕೊಲ್ಲುತ್ತೇನೆ, ಯಾಕಂದರೆ ನಾನು ಅಭಯ ಕೊಟ್ಟದ್ದನ್ನು ಹ್ಯಾಗೆ ಸಂಹರಿಸಲಿ! — ಮತ್ತು ಈ ಗ್ರಂಥ ನುಡಿಯಿತು —

"ನ ಗೋಪ್ರದಾನಂ ನ ಮಹೀಪ್ರದಾನಂ ನಾನ್ನಪ್ರದಾನಂ ಹಿ ತಥಾ ಪ್ರಧಾನಂ |
ಯಥಾ ವದನ್ತೀಹ ಬುಧಾಃ ಪ್ರಧಾನಂ ಸರ್ವಪ್ರದಾನೇಷ್ವಭಯಪ್ರದಾನಂ" ||೩-೨೦||

ಅಂದರೆ:

ಗೋಪ್ರದಾನವೂ ಭೂಪ್ರದಾನವೂ ಅನ್ನಪ್ರದಾನವೂ ಪ್ರಧಾನವಲ್ಲ; ಬುದ್ಧಿವಂತರು ಹೇಳಿದ ಹಾಗೆ ಅಭಯಪ್ರದಾನವು ಸರ್ವ ದಾನಗಳಲ್ಲಿ ಪ್ರಧಾನವಾಗಿದೆ.

"ಯೇಕತಃ ಕ್ರತವಃ ಸರ್ವೇ ಸಮಾಪ್ತವರದಕ್ಷಿಣಾಃ |
ಯೇಕತೋ ಭಯಭೀತಸ್ಯ ಪ್ರಾಣಿನಃ ಪ್ರಾಣರಕ್ಷಣಂ" ||೩-೨೧||

ಅಂದರೆ:

ಸಂಪೂರ್ಣ ಶ್ರೇಷ್ಠ ದಾನಗಳಾದ ಸರ್ವ ಯಜ್ಞಗಳಿಗೆ ಭಯ ತುಂಬಿದ ಪ್ರಾಣಿಯ ಪ್ರಾಣರಕ್ಷಣೆಯು ಸಮಾನವಾಗಿದೆ.

ಅದು ಕೇಳಿ, ನರಿ ಹೇಳಿತು — ಸ್ವಾಮಿ ಅಭಯವನ್ನು ಕೊಟ್ಟು ವಧೆ ಮಾಡಿದರೆ ದೋಷವಾಗುವದು; ಆದರೆ ಪುನಹ ಅದು ಸ್ವಾಮಿಯ ಭಕ್ತಿಯಿಂದ ತನ್ನ ಜೀವವನ್ನು ಕೊಟ್ಟದ್ದಾದರೆ ಆ ವಿಷಯದಲ್ಲಿ ದೋಷವಿಲ್ಲ; ಮತ್ತು ತನ್ನನ್ನು ತಾನೇ ಒಪ್ಪಿಸಿದ್ದಾದರೆ ಅದನ್ನು ವಧೆ ಮಾಡು, ಅಥವಾ ನಮ್ಮೊಳಗೆ ಒಬ್ಬನನ್ನು ವಧೆ ಮಾಡು! ಯಾಕಂದರೆ ಸ್ವಾಮಿ ಪಥ್ಯದ ಊಟದವನು, ಹಸು ತಡದ್ದಾದರೆ ಕಡೇ ಅವಸ್ಥೆ ಪ್ರಾಪ್ತವಾದೀತು; ಸ್ವಾಮಿ ಕಾರ್ಯಕ್ಕೆ ಒದಗದಿರುವ ಈ ನಮ್ಮ ಪ್ರಾಣದಿಂದ ಏನು? ಯಾವಾಗ್ಯೆ ಸ್ವಾಮಿಗೆ ಅನಿಷ್ಟವಾದೀತೋ ಆವಾಗ್ಯೇ ನಾವು ಅಗ್ನಿಪ್ರವೇಶ ಮಾಡುವದೇ ವಿಹಿತ. — ಮತ್ತು ಈ ಗ್ರಂಥ ಹೇಳಿತು —

"ಯಸ್ಮಿನ್ ಕುಲೇ ಯಃ ಪುರುಷಃ ಪ್ರಧಾನಃ ಸ ಸರ್ವಯತ್ನೇನ ಹಿ ರಕ್ಷಣೀಯಃ |
ತಸ್ಮಿನ್ ವಿನಷ್ಟೇ ಕುಲಸಾರಭೂತೇ ನ ನಾಭಿಭಂಗೇ ಹ್ಯರಯೋ ವಹನ್ತಿ" || ೩-೨೪ ||

ಅಂದರೆ:

ಕುಲದಲ್ಲಿ ಪ್ರಧಾನನಾದ ಪುರುಷನನ್ನು ಸರ್ವ ಯತ್ನದಿಂದ ಕಾಪಾಡ ಬೇಕು; ಕುಲಸಾರವಾದವನು ನಶಿಸಿದರೆ ಶತ್ರುಗಳು ನಷ್ಟ ಪಡಿಸುವರಲ್ಲವೋ?

ಅದನ್ನು ಕೇಳಿ, ಮದೋತ್ಕಟವು ಹೇಳಿತು — ಹೀಗಾದರೆ ನಿನಗೆ ಹಿತವಾದ್ದನ್ನು ಮಾಡು! — ಅದನ್ನು ಕೇಳಿ, ನರಿಯು ತ್ವರೆಯಿಂದ ಹೋಗಿ, ಎಲ್ಲವುಗಳ ಬಳಿಯಲ್ಲಿ

ಮಾತಾಡಿತು — ಎಲೇ, ಎಲೇ, ಸ್ವಾಮಿಗೆ ಅತಿ ಸಂಕಷ್ಟದಿಂದ ಪ್ರಾಣವು ಮೂಗಿನ ತುದಿಗೆ ಬಂದಿರುತ್ತದೆ! ಬರಿದೇ ತಿರಿಗಿದ್ದರಿಂದ ಏನು? ಅವನ ವಿನಹಾ ನಮ್ಮನ್ನು ಈ ವನದಲ್ಲಿ ಕಾಪಾಡುವವರ್ಯಾರು? ಅದು ಕಾರಣ ನಾವು ಹೋಗಿ, ಹಶಿವೆಯ ರೋಗದಿಂದ ಪರಲೋಕಕ್ಕೆ ತೆರಳುವ ನಮ್ಮ ಸ್ವಾಮಿಗೆ ನಮ್ಮ ಶರೀರದಾನವನ್ನು ಕೊಟ್ಟು, ಸ್ವಾಮಿಯ ಅನುಗ್ರಹವೂ ಋಣ ಪರಿಹಾರವೂ ಹೊಂದುವೆವು! — ಅದಕ್ಕೆ ಈ ಗ್ರಂಥ ಹೇಳಿತು —

"ಆಪದಂ ಪ್ರಾಪ್ನುಯಾತ್ ಸ್ವಾಮೀ ಯಸ್ಯ ಭೃತ್ಯಸ್ಯ ಪಶ್ಯತಃ |
ಪ್ರಾಣೇಷು ವಿದ್ಯಮಾನೇಷು ಸ ಭೃತ್ಯೋ ನರಕಂ ವ್ರಜೇತ್„ || ೩೨೫ ||

ಅಂದರೆ:

ನೋಡುವ ಸೇವಕನ ಕಣ್ಣೆದುರಾಗಿ ಸ್ವಾಮಿಗೆ ಮರಣ ಬಂದರೆ ಅಂಥ ಸೇವಕನು ಜೀವವಿರುವಾಗ ನರಕಕ್ಕೆ ಹೋಗುತ್ತಾನೆ.

ಆ ಮೇಲೆ ಅವೆಲ್ಲವು ಹೋಗಿ, ದುಃಖದಿಂದ ಅತ್ತು, ಕಣ್ಣೀರು ಚರಿತವಾಗಿ, ಮದೋತ್ಕಟವನ್ನು ನಮಸ್ಕರಿಸಿ, ಕೂತು ಕೊಂಡವು. ಅವುಗಳನ್ನು ನೋಡಿ, ಮದೋತ್ಕಟವು — ಎಲೇ, ಯಾವದಾದರೂ ಪ್ರಾಣಿಯನ್ನು ನೋಡಿದಿರೋ? ಪ್ರಾಪ್ತವಾಯಿತೋ? ಹ್ಯಾಗೆ? ಎಂದು ಕೇಳಲು, — ಕಾಗೆಯು ಮಾತನಾಡಿತು — ಸ್ವಾಮಿ, ನಾವು ಇಷ್ಟು ವರೆಗೆ ಎಲ್ಲೆಲ್ಲಿ ತಿರಿಗಿದರೂ ಯಾವ ಪ್ರಾಣಿಯನ್ನು ನೋಡಲೂ ಇಲ್ಲ, ದೊರಕಲೂ ಇಲ್ಲ; ಆದ ಕಾರಣ ಈ ಸಮಯದಲ್ಲಿ ನನ್ನನ್ನು ತಿಂದು, ಸ್ವಾಮಿಯು ಪ್ರಾಣವನ್ನು ಧರಿಸಿ ಕೊಳ್ಳಲಿ! ಯಾವ ಕಾರಣದಿಂದ ಸ್ವಾಮಿಯು ಸಮಾಧಾನವಾಗುವದೋ ಅದರಿಂದಲೇ ನನಗೆ ಸ್ವರ್ಗ ಪ್ರಾಪ್ತವಾಗುವದು. — ಮತ್ತು ಈ ಗ್ರಂಥ ಹೇಳಿತು.

"ಸ್ವಾಮ್ಯರ್ಥೇ ಯಸ್ ತ್ಯಜೇತ್ ಪ್ರಾಣಾನ್ ಭೃತ್ಯೋ ಭಕ್ತಿಸಮನ್ವಿತಃ |
ಪರಂ ಸ ಪದಮ್ ಆಪ್ನೋತಿ ಜರಾಮರಣವರ್ಜಿತಂ„ || ೩೨೬ ||

ಅಂದರೆ:

ಸ್ವಾಮಿಗಾಗಿ ತನ್ನ ಪ್ರಾಣ ಬಿಡುವ ಭಕ್ತಿಯುಳ್ಳ ಸೇವಕನು ಮುಪ್ಪು ಮರಣವಿಲ್ಲದ ಪರಮ ಪದ ಪಡೆಯುತ್ತಾನೆ.

ಅದನ್ನು, ಕೇಳಿ ನರಿ ಹೇಳಿತು — ಎಲೇ, ನೀನು ಸಣ್ಣ ಶರೀರ ಉಳ್ಳದ್ದು, ನಿನ್ನ ಚಿಕ್ಕಣಿಯಿಂದ ಸ್ವಾಮೀ ಪ್ರಾಣವು ಬದುಕಲಾರದು, ಮತ್ತು ಇನ್ನೊಂದು ದೋಷ ಸಹಾ ಉಂಟಾಗುತ್ತದೆ. — ಇದಕ್ಕೆ ಹೇಳಿದ ಗ್ರಂಥ —

"ಕಾಕಮಾಂಸಂ ಶುನೋಚ್ಛಿಷ್ಟಂ ಸ್ತೋಕಂ ತದಪಿ ದುರ್ಬಲಂ |
ಭಕ್ಷಿತೇನಾಪಿ ಕಿಂ ತೇನ ತೃಪ್ತಿರ್ ಯೇನ ನ ಜಾಯತೇ,, || ೩೨೭ ||

ಅಂದರೆ:

ಕಾಗೆಯ ಮಾಂಸವೂ ನಾಯಿಯ ಎಂಜಲೂ ಸ್ವಲ್ಪವಾದದಲ್ಲದೆ ಬಲಹೀನವು; ತೃಪ್ತಿ ಆಗದ್ದನ್ನು ತಿನ್ನುವದರಿಂದ ಏನು?

ನಿನ್ನಿಂದ ಸ್ವಾಮಿಯ ಚಕ್ತಿಯೂ ಊಟದ ಋಣಪರಿಹಾರವೂ ತೋರ ಬಂದದೆ, ಎರಡು ಲೋಕಗಳ ಕೀರ್ತಿಮಾತೂ ನಿನಗೆ ಪ್ರಾಪ್ತವಾಯಿತು; ಅದು ಕಾರಣ ಸಾಕು, ಹಿಂದಾಗು! ಇದಕ್ಕಾಗಿ ನಾನು ಸ್ವಾಮಿಯನ್ನು ವಿಜ್ಞಾಪಿಸುತ್ತೇನೆ. — ಹೀಗೆ ನಿಶ್ಚೈಸಿದ ಮೇಲೆ ಆದರಣೆಯಾದನೆ ನರಿಯು ಸಿಂಹವನ್ನು ನಮಸ್ಕರಿಸಿ, ಹೀಗಂದಿತು — ಸ್ವಾಮಿ, ಈವತ್ತು ನನ್ನ ಶರೀರದಿಂದ ಪ್ರಾಣಸಂರಕ್ಷಣೆಯನ್ನು ಪಡಕೊಂಡು, ನನಗೆ ಎರಡೂ ಲೋಕ ಪ್ರಾಪ್ತ ಮಾಡು. — ಮತ್ತು ಈ ಗ್ರಂಥ ಹೇಳಿತು —

ಸ್ವಾಮ್ಯಾಯತ್ತಾಃ ಸದಾ ಪ್ರಾಣಾ ಭೃತ್ಯಾನಾಮ್ ಅರ್ಜಿತಾ ಧನೈಃ |
ಯತಸ್ತೇನ ನ ದೋಷೋ ಸ್ತಿ ತೇಷಾಂ ಗ್ರಹಣಸಂಭವೇ|| ೩೨೮ ||

ಅಂದರೆ:

ಸೇವಕರ ದ್ರವ್ಯದಿಂದ ಘಳಿಸಿದ ಪ್ರಾಣವು ಯಾವಾಗಲೂ ಸ್ವಾಮ್ಯಾಧೀನವಾಗಿದೆ; ಹಾಗಾದರೆ ಅದನ್ನು ತಕ್ಕೊಂಡರೆ ದೋಷವಿಲ್ಲ.

ಆ ಮೇಲೆ ಅದನ್ನು ಕೇಳಿ, ಆನೆಯು ಹೇಳಿತು — ಎಲೇ, ನೀನು ಒಳ್ಳೇ ಮಾತು ಆಡಿದಿ, ಆದರೆ ನೀನು ಸಣ್ಣ ಶರೀರ ಉಳ್ಳದ್ದೂ ಸ್ವಜಾತಿಯೂ ಉಗುರಾಯುಧ ಉಳ್ಳದ್ದೂ; ಆದ್ದರಿಂದ ಚಕ್ಷಣೆಗೆ ಯೋಗ್ಯವಲ್ಲ. — ಮತ್ತು ಈ ಗ್ರಂಥ ಹೇಳಿತು —

ನಾಭಕ್ಷ್ಯಂ ಭಕ್ಷಯೇತ್ ಪ್ರಾಜ್ಞಃ ಪ್ರಾಣೈಃ ಕಂಠಗತೈರಪಿ |
ವಿಶೇಷಾತ್ ತದಪಿ ಸ್ತೋಕಂ ಲೋಕದ್ವಯವಿನಾಶನಂ|| ೩೨೯ ||

ಅಂದರೆ:

ಪ್ರಾಣ ಕಂಠಕ್ಕೆ ಬಂದರೂ ಬುದ್ಧಿಶಾಲಿಯು ತಿನ್ನ ಬಾರದ್ದನ್ನು ತಿನ್ನ ಬಾರದು; ಅದು ತೀರ ಸ್ವಲ್ಪವಾದರೂ ಎರಡು ಲೋಕವನ್ನು ನಾಶನ ಮಾಡುತ್ತದೆ.

ನಿನ್ನ ಕುಲೀನತ್ವವನ್ನು ನೀನು ತೋರಿಸಿದ್ದಾಯಿತು; ಅದಕ್ಕಾಗಿ ಒಳ್ಳೇ ಮಾತು ಹೇಳಿರುವದೇನಂದರೆ —

ಯೇತದ್ ಅರ್ಥಂ ಕುಲೀನಾನಾಂ ನೃಪಾಃ ಕುರ್ವನ್ತಿ ಸಂಗ್ರಹಂ |
ಆದಿಮಧ್ಯಾವಸಾನೇಷು ನ ತೇ ಯಾನ್ತಿ ಹಿ ವಿಕ್ರಿಯಾಂ|| ೩೩೦||

ಅಂದರೆ:

ಈ ಕಾರಣಕ್ಕಾಗಿ ಅರಸರು ಕುಲೀನರನ್ನು ಕಾಪಾಡುತ್ತಾರೆ; ಆದಿ ಮಧ್ಯ ಅಂತ್ಯಗಳಲ್ಲಿ ಅವರು ವ್ಯತ್ಯಾಸ ಪಡಿಯುವದಿಲ್ಲ.

ಎದುರಿಂದ ಹಿಂದಾಗು! ಇದಕ್ಕಾಗಿ ನಾನು ಸ್ವಾಮಿಯನ್ನು ಸಹ ಒಡಂಬಡಿಸುತ್ತೇನೆ. — ಹೀಗೆ ನೇಮಿಸಿ ಕಾಂಡ ಮೇಲೆ ಆ ಆನೆ ನಮಸ್ಕರಿಸಿ, ಮದಾ‍ೋತ್ಕಟಕ್ಕೆ ಹೇಳಿತು — ಸ್ವಾಮಿ, ನನ್ನ ಪ್ರಾಣದಿಂದ ಪ್ರಾಣವನ್ನು ರಕ್ಷಿಸಿ ಕೊಳ್ಳ ತಕ್ಕದ್ದು; ಸ್ವರ್ಗದಲ್ಲಿ ನನಗೆ ಸ್ಥಳವೂ ಭೂಲೋಕದಲ್ಲಿ ಕೀರ್ತಿಯೂ ಆಗಲಿ! ಈ ವಿಷಯದಲ್ಲಿ ಸಂಶಯ ಮಾಡಲಾಗದು! — ಮತ್ತು ಈ ಗ್ರಂಥ ಹೇಳಿತು —

ಮೃತಾನಾಂ ಸ್ವಾಮಿನಃ ಕಾರ್ಯೇ ಭೃತ್ಯಾನಾಮ್ ಅನುವರ್ತಿನಾಂ |
ಭವೇತ್ ಸ್ವರ್ಗೇ ಕ್ಷಯೋ ವಾಸಃ ಕೀರ್ತಿಶ್ಚ ಧರಣೀತಲೇ ||೩೩೧||

ಅಂದರೆ:

ಸ್ವಾಮಿಯ ಕಾರ್ಯ ನಡಿಸಿ ಸತ್ತ ಸೇವಕರಿಗೆ ಸ್ವರ್ಗದಲ್ಲಿ ಕ್ಷಯವಿಲ್ಲದ ಸ್ಥಳವೂ ಭೂಮಿಯಲ್ಲಿ ಕೀರ್ತಿಯೂ ಸಿಕ್ಕುವದು.

ಅದನ್ನು ಕೇಳಿ, ಕ್ರಥನಕವು ಆಲೋಚಿಸಿತು — ಇವು ಚೆಲೋ ಮಾತುಗಳಾಡಿದವು, ಸ್ವಾಮಿ ಅವುಗಳಲ್ಲಿ ಒಂದನ್ನೂ ನಾಶನ ಮಾಡಲಿಲ್ಲ, ಆದ ಕಾರಣ ನಾನು ಸಹ ಸಮಯೋಚಿತ ಅರಿಕೆ ಮಾಡುತ್ತೇನೆ, ಈ ನನ್ನ ಮಾತಿಗೆ ಆ ಮೂರು ಜನರು ಒಪ್ಪಿ ಕೊಳ್ಳುವರು. — ಹೀಗೆ ನಿಶ್ಚೈಸಿ, ಹೇಳಿತು — ಎಲೇ, ನೀನು ಯುಕ್ತವಾದ ಮಾತು ಆಡಿದಿ, ಆದರೆ ನೀನೂ ಉಗುರಾಯುಧ ಉಳ್ಳದ್ದು, ನಿನ್ನನ್ನು ಸ್ವಾಮಿ ಹ್ಯಾಗೆ ಭಕ್ಷಣೆ ಮಾಡ್ಯಾನು? — ಮತ್ತು ಈ ಗ್ರಂಥ ಹೇಳಿತು —

ಮನಸಾಪಿ ಸ್ವಜಾತ್ಯಾನಾಂ ಯೋ ನಿಷ್ಟಾನಿ ಪ್ರಚಿನ್ತಯೇತ್ |
ಭವನ್ತಿ ತಸ್ಯ ತಾನ್ಯೇವ ಲೋಕೇ ತ್ರೈವ ಪರತ್ರ ಚ|| ೩೩೨||

ಅಂದರೆ:

ಸ್ವಜಾತಿಯವರಿಗೆ ಕೇಡನ್ನು ಮನಸಿನಿಂದಾದರೂ ಚಿಂತಿಸುವವನಿಗೆ ಇಹದಲ್ಲ್ಯಾಗಲಿ ಪರದಲ್ಲ್ಯಾಗಲಿ ಅದೇ ಆಗುತ್ತದೆ.

ನೀನು ಎದುರಿಂದ ಹಿಂದಾಗು! ಇದಕ್ಕಾಗಿ ನಾನು ಸ್ವಾಮಿಯನ್ನು ಬಿನ್ನೈಸುತ್ತೇನೆ. — ಅನಂತರ ಕ್ರಥನಕವು ಎದುರಿಗೆ ನಿಂತು, ನಮಸ್ಕರಿಸಿ, ಹೇಳಿತು — ಸ್ವಾಮಿ, ಈ ಜನರು ನಿನ್ನಿಂದ ತಿನ್ನ ತಕ್ಕವರಲ್ಲ, ಅದಕ್ಕಾಗಿ ನನ್ನ ಪ್ರಾಣದಿಂದ ನಿನ್ನ ಪ್ರಾಣ ಸಂರಕ್ಷಣೆಯನ್ನು ಮಾಡು, ಈ ಕಾರಣದಿಂದ ನನಗೆ ಎರಡು ಲೋಕ ಪ್ರಾಪ್ತವಾಗುತ್ತವೆ. — ಮತ್ತು ಈ ಗ್ರಂಥ ಹೇಳಿತು —

ನ ಯಜ್ವಾನೋ ಽಪಿ ಗಚ್ಛನ್ತಿ ತಾಂ ಗತಿಂ ನೈವ ಯೋಗಿನಃ |
ಯಾಂ ಯಾನ್ತಿ ಪ್ರೋಜ್ಝಿತಪ್ರಾಣಾಃ ಸ್ವಾಮ್ಯರ್ಥೇ ಸೇವಕೋತ್ತಮಾಃ || ೩೩೩ ||

ಅಂದರೆ:

ಸ್ವಾಮಿಯ ಹಿತಕ್ಕೆ ಜೀವ ಬಿಟ್ಟ ಉತ್ತಮ ಸೇವಕರು ಹೊಂದುವ ಗತಿಯನ್ನು ಯಜ್ಞ ಮಾಡುವವರೂ ಯೋಗಿಗಳೂ ಹೊಂದುವದಿಲ್ಲ.

ಹೀಗೆ ಹೇಳುತ್ತಿರಲಿಕ್ಕಾಗಿ, ಸಿಂಹದಿಂದ ಅಪ್ಪಣೆ ಪಡಕೊಂಡು, ಕಿರಬ ಮತ್ತು ನರಿ ಕ್ರಥನಕದ ಹೊಟ್ಟೆ ಶೀಳಿದವು, ಕಾಗೆ ಅದರ ಕಣ್ಣು ಕಿತ್ತಿತು; ಈ ಪ್ರಕಾರ ಆ ಕ್ರಥನಕವು ಮೃತಿ ಹೊಂದಿತು. ಆ ಮೇಲೆ ಆ ಸಮಸ್ತ ಕೆಟ್ಟ ಪಂಡಿತರು ಕೂಡಿ, ಭಕ್ಷಿಸಿದರು. ಅದಕ್ಕಾಗಿ ಹೇಳಿರುವ ಗ್ರಂಥವು ಏನಂದರೆ—

ಬಹವಃ ಪಂಡಿತಾಃ ಕ್ಷುದ್ರಾಃ ಸರ್ವೇ ಮಾಯೋಪಜೀವನಃ |
ಕುರ್ಯುಃ ಕೃತ್ಯಮಕೃತ್ಯಂ ವಾ ಉಷ್ಟ್ರೇ ಕಾಕಾದಯೋ ಯಥಾ || ೩೩೪ ||

ಅಂದರೆ:

ಹೀನ ಪಂಡಿತರು ಬಹಳ ಮಂದಿ; ಅವರೆಲ್ಲರು ಮೋಸದಿಂದ ಜೀವಿಸುವಂಥವರು, ಕೃತ್ಯ ಅಕೃತ್ಯ ಮಾಡುವಂಥವರು;—ಕಾಗೆ ಮೊದಲಾದವು ಒಂಟಿಗೆ ಮಾಡಿದ ಹಾಗೆ.

(Translated from the Sunscrit Punchutuntru.)

## 81. THE FOOLISH TURTLE

## ೮೧. ಮೊದ್ದ ಕೂರ್ಮ

ಕೂರ್ಮೋ ದುರ್ಬುದ್ಧಿಃ ಕಾಷ್ಠಾದ್ ಭ್ರಷ್ಟೋ ವಿನಶ್ಯತಿ ||

ಅಂದರೆ:

ದುರ್ಬುದ್ಧಿಯಾದ ಕೂರ್ಮವು ಕಾಷ್ಟದಿಂದ ಬಿದ್ದು ನಾಶ ಹೊಂದಿತು.

ಒಂದಾನೊಂದು ಸರೋವರದಲ್ಲಿ ಕಂಬುಗ್ರೀವ ಎಂಬ ಕೂರ್ಮವು ಇರುವದು. ಸಂಕಟ ವಿಕಟ ಎಂಬ ಹೆಸರುಳ್ಳ ಹಂಸಪಕ್ಷಿಗಳು ಅಪರಿಮಿತ ಸ್ನೇಹಸಂಪೂರ್ತಿಯಿಂದ ಯಾವಾಗಲೂ ಸರೋವರತೀರವನ್ನೈದಿ, ಅದರೊಂದಿಗೆ ದೇವಋಷಿ ರಾಜಋಷಿ ಬ್ರಹ್ಮಋಷಿಗಳ ಅನೇಕ ಕಥೆಯ ಹೇಳಿ, ಸಾಯಂಕಾಲಸಮಯ

ದಲ್ಲಿ ತಮ್ಮ ಗೂಡಿನ ಆಶ್ರಯವ ಪೊಂದಿರುವವು. ಆ ಮೇಲೆ ಕಾಲಗತಿಯಾಗಿ ಅ ನಾವೃಷ್ಟಿಯಿಂದ ಆ ಸರೋವರವು ಮೆಲ್ಲಮೆಲ್ಲಗೆ ಆರಿ ಹೋಯಿತು. ಅದರ ದೆಸೆ ಯಿಂದ ಅವು ದುಃಖಿತವಾಗಿ ಹೀಗಂದವು—ಎಲೇ, ಮಿತ್ರನೇ, ಈ ಸರೋವರದಲ್ಲಿ ಕೆಸರು ಮಾತ್ರ ಉಳಿಯಿತು, ಆದ ಕಾರಣ ನಿನ್ನ ಸ್ಥಿತಿ ಹ್ಯಾಗಾದೀತು ಎಂಬ ಚಿಂತೆ ಯಿಂದ ನಮ್ಮ ಹೃದಯವು ವ್ಯಾಕುಲ ಪಡುತ್ತದೆ.—ಅದನ್ನು ಕೇಳಿ, ಕಂಬುಗ್ರೀವವು ಹೇಳಿತು—ನಮಗೆ ನೀರಿನ ವಿನಹ ಜೀವನಕ್ಕೆ ಬೇರೆ ಉಪಾಯವಿಲ್ಲ, ಆದ್ದರಿಂದ ಒಂದು ಉಪಾಯವನ್ನು ಆಲೋಚಿಸ ತಕ್ಕದ್ದು.—ಮತ್ತು ಈ ಗ್ರಂಥ ಹೇಳಿತು—

ಮಿತ್ರಾರ್ಥೇ ಬಾಂಧವಾರ್ಥೇ ಚ ಬುದ್ಧಿಮಾನ್ ಯತತೇ ಸದಾ |
ಜಾತಾಸ್ವಾಪತ್ಸು ಯತ್ನೇನ ಜಗಾದೇದಂ ವಚೋ ಮನುಃ || ೩೫೮ ||

ಅಂದರೆ:

ಮಿತ್ರರ ಹಿತಕ್ಕೂ ಬಂಧುಗಳ ಹಿತಕ್ಕೂ ಬುದ್ಧಿವಂತನು ನಿತ್ಯದಲ್ಲಿ ಯತ್ನ ಮಾಡುತ್ತಾನೆ, ಆಪತ್ತು ಹುಟ್ಟುವಾಗ ಯತ್ನದಿಂದ ನಡೆಯುತ್ತಾನೆ; ಇದು ಮನುವು ಹೇಳಿದ್ದು.

ಹಾಗಾದರೆ ವೈಯ ಬಹುದು; ಒಂದು ಘಟ್ಟಿಯಾದ ಹಗ್ಗವೂ ಲಘುವಾದ ಕಾಷ್ಟವೂ ಹುಡುಕಿರಿ; ನೀರು ತುಂಬಿರುವ ಸರೋವರಕ್ಕೆ ನನ್ನನ್ನು ಆ ಲಘು ಕಾಷ್ಟ ದಲ್ಲಿ ಕೂಡ್ರಿಸಿ ಹಲ್ಲಿನಿಂದ ಎರಡು ಪಾರ್ಶ್ವ ಹಿಡಿದು ವೈಯಿರಿ!—ಅದಕ್ಕೆ ಅವು ಹೇಳಿದವು—ಎಲೇ, ಮಿತ್ರನೇ, ಇದನ್ನು ಮಾಡುತ್ತೇವೆ, ಆದರೆ ನೀನು ಮಾತ್ರ ಮೌನವಾಗಿ ಕೂತು ಕೊಳ್ಳ ಬೇಕು, ಇಲ್ಲದಿದ್ದರೆ ಕಾಷ್ಟದಿಂದ ಬಿದ್ದು ಚೂರು ಚೂ ರು ಆಗಿ ಹೋಗುವಿ.—ಆಗ ಕೂರ್ಮ ಹೇಳಿತು—ನಾನು ಆಕಾಶಮಾರ್ಗವಾಗಿ ಸರೋವರಕ್ಕೆ ಹೋಗುವ ಪರಿಯಂತ ಮೌನವಾಗಿರುವೆನು.—ಹಾಗೆ ಮಾಡಿ ಹೋ ಗುವ ಸಮಯದಲ್ಲಿ ಆ ಕಂಬುಗ್ರೀವವು ಕೆಳಗೆ ಇರುವಂಥ ಒಂದಾನೊಂದು ಗ್ರಾಮ ನೋಡಿತು. ಆ ಗ್ರಾಮಸ್ಥರು ಆ ಪ್ರಕಾರ ತೆಗದು ಕೊಂಡು ಹೋಗುವ ಕೂರ್ಮವ ನ್ನು ನೋಡಿ, ಕೌತುಕದಿಂದ—ಓಹೋ, ಆಶ್ಚರ್ಯ! ದುಂಡಗಾಗಿ ವಿನೋ ಒಂ ದನ್ನು ಪಕ್ಷಿಗಳು ವೈಯುತ್ತವೆ, ನೋಡಿ ನೋಡಿರಿ! ಎಂದು ಗದ್ದಲ ಮಾಡುವದನ್ನು ಆ ಕಂಬುಗ್ರೀವ ಕೇಳಿ,—ಎಲಾ, ಏನಿದು ಗದ್ದಲ? ಎಂದು ಮಾತಾಡ ಮನಸ್ಸುಳ್ಳ ದ್ದಾಗಿ, ಅರ್ಥ ಮಾತಾಡುವಷ್ಟರಲ್ಲಿ ಕೆಡವಿ ಬಿತ್ತು; ಊರ ಜನರು ಅದನ್ನು ತುಂಡು ತುಂಡಾಗಿ ಮಾಡಿದರು. ಆದ್ದರಿಂದ ಇದಕ್ಕೆ ಒಂದು ಗ್ರಂಥ ಹೇಳಿರುವದೇನಂದರೆ—

ಸುಹೃದಾಂ ಹಿತಕಾಮಾನಾಂ ನ ಕರೋತೀಹ ಯೋ ವಚಃ |
ಸ ಕೂರ್ಮ ಇವ ದುರ್ಬುದ್ಧಿಃ ಕಾಷ್ಠಾದ್ಭ್ರಷ್ಟೋ ವಿನಶ್ಯತಿ || ೩೬೦ ||

ಅಂದರೆ:

ಹಿತ ಬಯಸುವಂಥ ಸ್ನೇಹಿತರ ಮಾತನ್ನು ಯಾವನು ನಡಿಸುವದಿಲ್ಲವೋ ಆ ಹೆಡ್ಡನೇ ಕೂರ್ಮದಂತೆ ಕಟ್ಟಿಗೆಯಿಂದ ಬಿದ್ದು ನಾಶವಾಗುವನು.

(Translated from the Sunscrit Punchutuntru)



# 82. A JOURNEY OF KOUSHEKU MOONEE

# ೮೨. ಕೌಶಿಕ ಮುನಿಯ ಪಯಣ



ವಿಮಳಮತಿಕುಶ, ಕೇಳು, ಸಿದ್ಧಾ—
ಶ್ರಮದಾಳಿರ್ದನು ಸಕಲ ಋಷಿಕುಲ—
ಕಮಲಮಿತ್ರನು ಮುನಿಪವಿಶ್ವಾಮಿತ್ರನೀಚೆಯಲೀ. ||
ಅಮರರಿಪುಮಾರೀಚ, ಘನವಿ—
ಕ್ರಮಸುಬಾಹುಗಳೆಂಬ ರಾಕ್ಷಸ—
ರಮಣರಾ ಮುನಿಮಖಕೆ ಕಂಟಕರಾದರಡಿಗಡಿಗೇ. || ೧ ||
ಮುನಿ ಬಳಿಕ ಬಲು ಚಿಂತೆಯಲಿ ಗತ—
ದನುವನ್ ಅವರಿಗೆ ಕಾಣಲರಿಯದೆ,
ಘನ ದೇವರ ಸಾರಿ, ಬಿನ್ನಹ ಮಾಡಿದನು ಹದನಾ.— ||
ಮುನಿಪ, ಕೇಳಿದಕೇಕೆ ಬಿಮಿಸುತಿ?
ಜನರುಗಳ ಹಿತಕವನಿಚಾರವ—
ನಾನೆಯ ದಶರಥಗುದಿಸಿಹನು ರಾಮನೆಲವೆನೆ ದೇವಾ;— || ೨ ||
ಕರಸಿ ಋಷಿವರ್ಗವನು, ಮುನಿಜನ
ವೆರಸಿ, ಸಿದ್ಧಾಶ್ರಮವನುಳಿದು—
ಬ್ಬರದ ವಿವಿಧ ವನಾಳಿಗಳ, ವಿಷಯಾಂತರಾಳದಲೀ ||
ಗಿರಿಸರಿತ್ಸಂಕುಲವ ಕಳಿಕಳಿ—
ದ್, ಅರಿವಿಜಯದಶರಥಮಹೀಶನ

ಧರಣಿಯನು ಸಾರಿದನು ಸಂತೋಷದ ಸಘಾಡದಲೀ. || ೩ ||
ಬರಬರಲು, — ತತ್ಕೋಸಲದ ಗಂ —
ಹರಿ ವಿರಾಜಿಸಿರುಳೊಳು ಹಗಲೊಳು
ಹರಿವ ಹೊಳೆಗಾಲುವೆಯ ಕೆರೆದುಂಬುಗಳ ನೀರುಗಳಾ ||
ತೆರಳಿಕೆಯ ತಡಾಗ್ರಮನಿಕರದ
ಸಿರಿಯ ಶಾಲಿಯ ಚೆಲ್ವ ಬನದು —
ಬ್ಬರದ ಧವಳೇಕ್ಷುಗಳನುಪಮದ ನಂದನಂಗಳಲೀ, || ೪ ||
ಹಲಸು ಖರ್ಜೂರಾಮ್ರಕುಲ ಮಾ —
ದಲ ಮಧೂಕ ಕ್ರಮುಕ ದಾಡಿಮ
ತಿಲಕ ಕುರವಕ ಜಂಬು ಜಂಬೀರ ಪ್ರಕೀರ್ಣದಲೀ, ||
ನೆಲನು ಕಾಣಿಸದ್, ಈಕ್ಷಿಸಿದ ದೆಸೆ —
ಗಳಲಿ ಹೂದೋಟಗಳ ವನಗಳ
ವಳಯದೆಡ ಬಲ ವೀಧಿಯಲಿ ಕಾಣಿಸಿದುದಾ ಮುನಿಗೇ. || ೫ ||
ಪರಿಧಿಪರಿವೃತ ರವಿಯವೋಲ್ನಿಜ
ಪರಿಧಿಪರಿವೃತ ನಗರವೆಸದುದು,
ತರುಣಿ ಕೇಳ್ಕೈ, ಕಂಗಳಿಗೆ ದೂರದಲಿ ಕೌಶಿಕನಾ. ||
ಮರಕತದ ಮಾಣಿಕದ ಚಾಮೀ —
ಕರದ ಚಟುಳ ಪ್ರಭೆಯ ಶಾಲಾ —
ವರಣದಲಿ, ಮುಖಶಾಲೆಗಳ ಸೌಧಗಳ ಸೊಂಪಿನಲೀ, || ೬ ||
ಮುರಿಮುರಿದ ಕೊತ್ತಳದ ಕೋಟೆಯ
ಥರಥರದ ಮುಗಿಲಟ್ಟಳೆಯ ವಿ —
ಸ್ತರದ ವಿಮಲ ಸ್ಪಟಿಕಬದ್ಧರದಾಳುವೇರಿಗಳಾ ||
ಪರಿಪರಿಯ ಮಣಿಕನಕಮಯದು —
ಪ್ಪರಿಗೆಗಳ ಸಾಲಿನಲಿ ಸುರಪನ
ಪುರವನಣಕಿಸುತಿರ್ದುದಾ ಸತ್ಯಾವತೀನಗರಾ. || ೭ ||
ಹೊಳಲು ಹಾಸ ರೀತಿಯಲಿ, — ಮಿಗೆ ಕಂ —
ಗೊಳಿಸುತಿರ್ದುದು, ಮುನಿಪತಿಗೆ ಹೊರ
ವಳಯ ರಮ್ಯೋದ್ಯಾನವೆಸದುದು ಚೈತ್ರರಥದಂತೇ; ||

ನಲಿವ ಕಿನ್ನರನರ್ತನದಿ, ಮಿಗೆ
ಗಳಹುವಾ ಗಿಳಿವಿಂಡಿನಲಿ, ಹೆ—
ಕ್ಕಳಿಪ ಕೋಗಿಲೆಗಳಲಿ, ಮೊರವಳಿಕುಳದ ಮೇಳದಲೀ, ||೮||
ಹಾರವ ಮಕರಂದದ ತುಷಾರದ
ಪರಿಮಳದ ಪಸರಿಕೆಯ ಕುಸುಮೋ—
ತ್ಕರದ—ನಸು ಮಿಡಿಗಾಯಿ ಕಸುಗಾಯ್ದೋರೆಗಾಯಿಗಳಾ— ||
ಬಿರಿದಾಗುವ ಬಂಬಲಿನ ಸೋನೆಯ
ಸರಿಯ ಪಕ್ವಫಲಾದಿಗಳ ಬಂ—
ಧುರದ ಚೂತ ಪ್ರಮುಖ ಭೂಜದಿನೆಸದುದುದ್ಯಾನಾ. ||೯||
ಬೀಗಿ ಬೆಳದೆಳೆ ವಳ್ಳಿಗಳ, ಸಲೆ
ತೂಗಿ ತೋನವಡಕೆಗಳ, ಕಾನೆಯಲಿ
ಬಾಗಿ ಬಳಕುವ ಬಾಳೆಗಳ, ಫಲಭರದ ತೆಂಗುಗಳಾ, ||
ಸೋಗೆಗಳ ಸುಳಿವುಗಳ, ಕಪಿಗಳ
ಲಾಗುಗಳ ಲಂಘನೆಯಲೆಸೆಯುವ—
ದಾಗಲಾ ವನ ಮುನಿಪಚಕ್ಷುವಿಗಮಿತ ಪರಿಯಾಗೀ. ||೧೦||
ಮರಕತದ ನೆಲಗಟ್ಟುಗಳ, ಶಶಿ—
ಕಿರಣಕಾಂತದ ನೆಲೆನೆಲೆಯ, ಬಂ—
ಧುರದ ಘನಸೋಪಾನಗಳ, ಕೇಳೀ ಮನೋಹರದಾ ||
ಸರಸಿಗಳ, ಮಣಿಸೌಧಗಳ, ವಿ—
ಸ್ತರದ ವಿವಿಧ ಸುರತ್ನಹೇಮೋ—
ತ್ಕರದ ಕೃತಕಾದ್ರಿಗಳಲೊಪ್ಪಿದುದಾ ಪುರೋದ್ಯಾನಾ. ||೧೧||
ಸರಸಿಗಳ ಪುಣ್ಯೋದಕದಲ್ ಅಘ—
ಮರುಷಣಂ ಗೈದಬ್ಜಕುಸುಮೋ—
ತ್ಕರಪರಾಗದ ಲೇಪನಾಂಗದಿನಳಿಕವಂಬಕದಾ ||
ವರಚತುಃಸ್ವರದಮಲ ನಿಗಮೋ—
ತ್ಕರದ ತದ್ವನಸಂಚರದ ಪರಿ—
ಸರದ ಪಾವನ ಪವನ ಮುನಿಯಪ್ಪಿದುದು ಕೌಶಿಕನಾ. ||೧೨||
ಚಾರಿಸಿದ ಸರಣೀ ಶ್ರಮೋದ್ಭವ
ವಾರಿ ತನುಗತ ದಾರಿಗನಿಗೆ ಮ—

ನೋರಥದಲುದಿಸಿದುದು ವಿಶ್ರಮ, ಮುನಿಗಳೊಡೆಯನಿಗೇ. ||
ಪೌರ ಜನರ್ ಇಚ ಹಯ ವರೂಥದ
ಸಾರಥಿಯ ಪಥವಿಡಿದು, ನಗರ—
ದ್ವಾರವನು ಸಾರಿದನು ಸಂಮೇಳದಲಿ ಮುನಿನಾಥಾ. || ೧೩ ||
ಸಗರರಂದು ಮಹಾಧ್ವರಾಶ್ವವ
ಜಗವೆರಡರಲಿ ನೋಡಿ, ಕಾಣದೆ,
ಬಗಿದಿಳೆಯನಂದಿಳಿದ ವಿತಳದ್ವಾರವೋ? ಪುರದಾ ||
ಅಗಳೊ? ರವಿಯಡೆಯಾಟಕಿಕ್ಕಿದ
ಗಗನಸೀಮೆಯೋ? ಕೋಟೆಯೋ? ಯೆನು—
ತ, ಗಡು ರಾಜಮುನೀಂದ್ರ ಹೊಗಳುತ, ಹೊಕ್ಕನಾ ಪುರವಾ. || ೧೪ ||
ಪಳುಕಿನರೆಯಲಿ ಬಿಗಿದ ಬೀದಿಯ
ನೆಲನ, ನಿಳಯಶ್ರೇಣಿಗಳನು—
ಜ್ವಲಿಪ ಚಂದ್ರೋಪಲದ ಘನಸೋಪಾನಪಂಕ್ತಿಗಳಾ, ||
ಬಳಿಬಳಿಯ ಸೌಧಾವಳಿಯ, ಹೊಂ—
ಗಲಶಗಳ ಹೊದರಿನ, ಪತಾಕಾ--
ವಳಿಯ ಪಸರದಿನೆಸದುದಾ ಪುರ ಮುನಿಯ ಕಣ್ಮನಕೇ. || ೧೫ ||
ಪರಿಪರಿಯ ವಸ್ತೂತ್ಕರದ ವಿ—
ಸ್ತರದ ವಿವಿಧ ವಣಿಗ್ವರರ ಬಂ—
ಧುರದ ಛಹಳಿತ ಸೂರ್ಯವೀಧಿಯ ಸೋಮವೀಧಿಗಳಾ, ||
ಪುರದ ಜನರುಗಳೆಸೆವ ಚಂದದಿ
ನಿರುಪಮಾಲಯವೀಧಿಗಳ ಮುನಿ
ವರನು ನೋಡುತ ಬಂದು, ಹೊಕ್ಕನು ನೃಪಸಭಾಸ್ಥಳವಾ. || ೧೬ ||
ಧರಣಿಪತಿ ಮುನಿಸಾರ್ವಭೌಮನ
ಬರವ ಕಾಣುತ, ಧಿಂಮನುರು ವಿ—
ಷ್ಟರವನಿಳಿದಿದಿರ್ಬಂದು, ವಿನಮಿತನಾಗಿ ಕೈಗೊಟ್ಟೂ, ||
ಅರಮನೆಗೆ ತಂದರ್ಘ್ಯ ಪಾದ್ಯೋ—
ತ್ಕರ ವಿಧಾನದಿನಾ ಮುನಿಯನುಪ—
ಚರಿಸಿ, ಬಿಜಯಂ ಗೈದ ಹದನೇನೆಂದು, ಬೆಸಗೊಂಡಾ. || ೧೭ ||
ಬಂದೆವಾವು, ಕೇಳ್ಕೈ, ಸ್ವಕಾರ್ಯದ

ಕುಂದು ಹೆಚ್ಚಿನ ಕಾರತೆಗಳು ನಿಂ—
ನಿಂದ ನಮಗೆ ಸುಸೂತ್ರವಹುದೆಂಬೀ ವಿಚಾರದಲೀ; ||
ಇಂದಿಗೀ ನೆಲೆಗಾವನೈ ನಿಂ--
ನಿಂದ ತೇಜಿಷ್ಟನು ಮಹೀಶರಾ—
ಳ್? ಎಂದು, ಕಾಂಡಾಡಿದನು ಮುನಿ ದಶರಥಮಹೀಪತಿಯಾ. || ೧೮ ||
ಜನಪ, ಕೇಳೈ, ಕೇಳ ಬೇಕೆಂ—
ಬಿನಿತು ತಾನುಪಚಾರ ನಿಂನಯ!
ಜನಪಧರ್ಮದ ಸಕಲ ನೀತಿಯ ಸಾರಸಂಗ್ರಹದಾ ||
ಮನು ಪುರೂರವ ಕಾರ್ತಿವೀರ್ಯಾ—
ರ್ಜುನ ಹರಿಶ್ಚಂದ್ರಾದಿ ರಾಯರ
ನೆನಹವನು ಮಾಣಿಸಿದೆ; ಮಾತಿಂನಾವುದೆಮಗೆ, ನೃಪಾ? || ೧೯ ||
ಈಸು ದಿನ ನಮ್ಮಗ್ನಿಹೋತ್ರಕೆ
ಮೀಸಲಳಿಯದೆ, ನಡದುದ್; ಈಗ ವಿ—
ನಾಶಕರವಾಯ್ತುದರಿನಾದುದು ಬರವು ನಮಗೆನಲೂ;— ||
ಐಸಲೇ, ನಿಮಗಾದ ಚಿಂತೆಯಿ—
ದೇಸು ದಾಡ್ಡಿತು? ಬೆಸಸಿ ಮಾಡುವೆ—
ನಾಶೆಮಾತಲ್ಲೆಲೆ, ಮುನೀಶ್ವರ, ನಂಬು ನೀನೆಂದಾ. || ೨೦ ||
ಪಾಡವಿಪತಿ, ಕೇಳ್ನಿಗಮನಿಕರಗ—
ಳೆಡಹಿ ವಾಚಿಸಿದರೆಯು, ನಿಂಮಯ
ನುಡಿಗೆ ಹಾದ್ದದು ಹಳಿವು, ಮನುವಿಡಿದಿಂದು ಪರಿಯಂತಾ; ||
ನುಡಿದು ನೋಡುವ ನಾವು! ನಂಮಯ
ನುಡಿಯ ನೀ ಪಾಲಿಸಿದಡದು ಮೈ—
ಗಾಡುವ ಭಾಗ್ಯದ ಬೆಳಸಲೇ ನಮಗೆಂದನಾ ಮುನಿಪಾ. || ೨೧ ||
ನಾವು ಬೇಡುವ ವಸ್ತುವಾಹನ—
ವಾವುದದು? ಕೇಳರಸ! ರಾಘವ—
ಸೇವೆಯನು ಕಾಡು, ಕಡೆಯ ಮಾತಿದು, ಯಜ್ಞರಕ್ಷಣೆಗೇ! ||
ಭೂವಧೂವರ, ಕೇಳಿದೈ, ಸಂ—
ಭಾವನೋಚಿತವಿನಿತಲೇ! ಮ—
ತ್ತಾವುದಕೆ ನಿರ್ಬಂಧಿಸುವರಲ್ಲೆಂದನಾ ಮುನಿಪಾ. || ೨೨ ||

ಎಲೆ, ಕುಶನೆ, ಕೇಳ್ಮುನಿಪನುತ್ತರ—
ದ್ ಅಲಗು ಬೆಂಸಿಲಿ ಮೂಡಿದುದು, ಹೆಡ—
ತಲೆಗೆ ಸಾರ್ದುದು, ಜಿಹ್ವೆ ಕಳವಳಿಸಿದವು ಕರಣಚಯಾ, ||
ಒಳಗುಗವದುದು, ತಾಪದಲಿ ಮುಂ—
ಮುಳಿತನಾದನು, ಮುಂದುಗಾಣದೆ,
ಹಲವನೆಣಿಸುತ ಹರುಷಗೆಟ್ಟಿಂತೆಂದನಾ ಭೂಪಾ: || ೨೩ ||
ಐಸಲೇ, ಮುನಿನಾಥ, ರಾಮನ—
ದೇಸರವ? ತುತ್ತುಂಬ ಹರಿಯದ
ಶೈಶವನ ಕ್ರೈಯಿಂದ ಸಲಹಿಸಿ ಕಾಂಬುದೇ ಯಜನಾ? ||
ಸೂಸಿದಿರಿ ನೀವು ನಗೆಯಿದಕೇ—
ನೈಸಲೇ? ಮುಖಪರಿಕರವ ಮೇ—
ಳೈಸಿ,—ಮರೆಮಾತೇನು?—ರಕ್ಷಿಸುವೆನು ಮಹಾಧ್ವರವಾ.— || ೨೪ ||
ನಗೆಯ ಸೂಸುವಡ್ ಆವು ಲೋಕದ
ಹಗರಣಿಗರೇ? ಕೇಳಿದ್ಮೈ, ನೃಪ,
ಮಗುವು ರಾಘವನೆಂದು ತಪ್ಪಿಸಿ, ನುಡಿವ ನುಡಿ ನಿನಗೇ ||
ನಿಗರವೇ? ರಘುನಾಥ ನಾಡಾ—
ಡಿಗಳ ನರನೇ? ಮರುಳಲಾ ನಿಂ—
ನಗಡುತನವನು ಬಲ್ಲೆನ್; ಅದು ಕಾಳ್ಗದು, ಕಣಾ! ಯಂದಾ. || ೨೫ ||
ಘುರದಾಳಿಂದ್ರನ ಸದೆಬಡಿದ ಶಂ—
ಬರನ ಸಮರವ ಗೆಲಿದೆನೆಂಬೀ
ಬಿರುದ ಬಿಡು! ಕೇಳರಸ, ದಿಗ್ವಿಜಯದ ಪರಾಕ್ರಮದಾ ||
ಹುರುಳು ನಿನಗುಂಟೆಂಬರದು ಕೆಲ—
ಕಿರಲಿ! ವೀರಸುಬಾಹು ಮಾರೀ—
ಚರುಗಳಾರೆಂದರಿಯೆಲಾ, ನರನಾಥ? ಕೇಳೆಂದಾ. || ೨೬ ||
ಕಳುಹುವಡೆ, ನೃಪ ಕೇಳು, ರಾಮನ
ಕಳುಹು! ಕಳುಹದಪೆಂಮನೀಕ್ಷಣ
ಕಳುಹು! ಕಾವವರುಂಟು ಯಜ್ಞವನಿಳೆಯಾಳರಸುಗಳೂ; ||
ಹಾಳದು ನುಡಿವರಸಲ್ಲವೆಂದ್, ಆ—
ನಾಳಗನರಿಯದೆ, ಬಂದೆವೈಸಿದ—

ಕಳುಕಲ್ಯಾತಕೆ? ಬಿರುದ ಬಿಸುಟರೆ, ತಾಟಿಯೇನೆಂದಾ. || ೨೭ ||
ಮುಸುಡು ಕಂಡೆನು ಹಲವು ಕಾಲಕೆ
ಶಿಶುಗಳಿವದಿರ ನಿಮ್ಮ ಕೃಪೆಯಲಿ;
ಹಸುಳೆಗಳಲಾ? ಹರಿಬವನು ನೀವೆಂದ ಹಗೆಗಳಿಗೇ ||
ಎಸಗಬಲ್ಲರೆ? ರತುನವನು ಕೆಡೆ
ಬಿಸುಡಿಸಲು ಬೇಡ್ವೆಯ! ರಕ್ಕಸ—
ರ ಸಮರಣದಾಳಗುಳಿಯ ಬಲ್ಲರೆ? ತಂದೆ, ಹೇಳೆಂದಾ. || ೨೮ ||
ಅರಿತೆ ನಾನ್, ಇದು ರಾಮಚಂದ್ರನ
ವರಪರಾಕ್ರಮದಿಂದಲಾಪುದು!
ಕರಬಲೋನ್ನತಿಯುಂಟವಂಗಪರಿಮಿತ ತರವಾಗೀ; ||
ನರಪ, ಕೇಳ್ವೆ, ನಿಖಿಳ ಜಗದಲಿ
ಶಿರದ ಮಣಿಯಾಗಿಹನು ರಾಮನೆ,
ತರಣಿಕುಲದವನಿವನ ಸರಿಗಾಣೆನೆನಲಾ ಮುನಿಪಾ;— || ೨೯ ||
ಶೆರೆಗಳೌಕಿದವಾ ನರೇಂದ್ರನ
ಕಾರಳನ್; ಆ ಮುನಿನಾಥ ನುಡಿದು—
ತ್ತರಕೆ ಮಾರುತ್ತರವ ಕಾಣದೆ, ಮನದ ಮರುಕದಲೀ ||
ಗುರುಮುಖಾಂಬುಜವನು ನಿರೀಕ್ಷಿಸೆ;—
ಬೆರಳ ಸಂನೆಯಲಾ ಮುನಿಪ ನಿ—
ರ್ಧರಿಸಿದನು ನಿಜವೆಂದು; ಕಳುಹಿಂನಂಜ ಬೇಡೆಂದಾ. || ೩೦ ||
ಗುರುನಿರೂಪವಲಂಘ್ಯವೆಂದನು;
ಕರಸಿ ಕರದನು ಮಗನನೀ ಮುನಿ—
ವರನ ಕೃಪೆ ನಿನಗಾಯ್ತು, ಪಾಲಿಸು ಮುನಿಪನಧ್ವರವಾ! ||
ತೆರಳು ನೀನೆಂದೆಂಬ ವಚನಾಂ—
ತರದಾಳಾಸರಿದವ್ ಅಶ್ರುಜಲ; ನಿ—
ಬ್ಬರದ ಬೆರಗಿನ ವಶದಾಳಿರ್ದುದದಕ್ಕೆ ಸಭಾಸ್ಥಾನಾ.— || ೩೧ ||
ನಮಿಸಿ ತಂದೆಗೆ, ಗುರುವಶಿಷ್ಟನ
ಸುಮುಖತೆಯ ಹರಕೆಯನು ಕೈಕಾಂ—
ಡ್, ಅಮಿತ ವಿಕ್ರಮ ನಿಷುಧಿ ಚಾಪ ಕೃಪಾಣವನು ಧರಿಸೀ, ||

ಗಮಿಸಿದನು ಮುನಿಯೊಡನೆ; ಹರುಷೋ—
ದ್ಗಮದಲಾತನ ಬೆಂಬಳಿಯಲಾ—
ಕ್ರಮಿಸುತಾ, ಸೌಮಿತ್ರಿ ಕಳುಹಿಸಿ ಕೊಂಡನಾ ನೃಪನಾ. || ೩೨ ||
ಬೀಳುಗೊಂಡನು ಮುನಿ ಬಳಿಕ ಭೂ—
ಪಾಲಕನ ಹರುಷದಲಿ ತಂನೃಪ—
ಬಾಲಕರು ಸಹಿತ್; ಅಲ್ಲಿಗಲ್ಲಿಗೆ ನೆರದ ಪೌರಜನಾ ||
ಜಾಳಿಸುವ ಕಂಬನಿಗಳಲಿ—ಬಿರು
ನಾಲಿಗೆಯ ಬೈಗಳಲಿ—ಮುನಿಯನು
ಕೀಳು ನುಡಿಯಲಿ ಜಡಿವುತಿರ್ದುದು, ಜರದು ಜನಪತಿಯಾ. || ೩೩ ||
ಪುರವ ಹೊರವಂಟಾ ಮುನಿಪನಾ
ತರಣಿಕುಲಜರು ಸಹಿತ ಬಂದನು
ಸರಯುವೆಂಬ ತರಂಗಿಣಿಗೆ.—ನಿಜ ಭಾವಶುದ್ಧಿಯಲೀ ||
ಪರಮ ನಿಷ್ಠೆಯಲಾ ಮುನಿಪನಘ—
ಮರುಷಣಾದಿ ಸಮಸ್ತ ಕರ್ಮಾಂ—
ತರವ ವಿರಚಿಸಿ, ಕಾಟ್ಸನವರಿಬ್ಬರಿಗನುಗ್ರಹವಾ. || ೩೪ ||
ಕಂದ, ಕೇಳ್ಳೈ, ಮುನಿ ಬಳಿಕ ಮುದ—
ದಿಂದ ಸರಯುವ ದಾಂಟಿ, ದಶರಥ—
ನಂದನರು ಸಹಿತೈದಿದನು ಘನ ಘೋರ ಕಾನನವಾ; ||
ದಂದಶೂಕ ಮಹೋಗ್ರ ಖಗ ಮೃಗ—
ದಿಂದ ಮಿಗೆ ಕಪ್ಪುಗಿವ ಕತ್ತಲೆ—
ಯಿಂದ ಬೀರಿತು ಭಯವನಾ ರಘುರಾಜಪುತ್ರರಿಗೇ.— || ೩೫ ||

(Ramayunu, 10th Chapter)



# 83. DESCRIPTION OF BHUDRAVUTEE

# ೮೩. ಭದ್ರಾವತಿಯ ವಿಸ್ತಾರ

ಭೂವಧೂರಮಣ, ಕೇಳ್ವೈ, ಮುಂದೆ ನಡೆಸುವ ಕ—
ಥಾವಿಸ್ತರವನಿಂನು ಪಯಣಗತಿಯಿಂದ ಭ—
ದ್ರಾವತೀ ದೇಶಮಂ ಪಾಕ್ಕರನಿಲಜ, ವೃಷಧ್ವಜ
ಘಟೋತ್ಕಚ ತನುಜರೂ. ॥ ೧ ॥

ಎಲ್ಲಿಯುಂ ಪರಿವ ಪೇರ್ದೊರೆಯಿಂದ, ಕೆರೆಯಿಂದ—
ಲೆಲ್ಲಿಯುಂ ಕುಸುಮದಾಗರದಿಂದ, ಸರದಿಂದ—
ಲೆಲ್ಲಿಯುಂ ರತ್ನಮಯದಿಳೆಯಿಂದ, ಬೆಳೆಯಿಂದ,
ಮಣಿಕೃತಕಶೈಲದಿಂದಾ, ॥
ಎಲ್ಲಿಯುಂ ಸುಳಿವ ಗೋವ್ರಜದಿಂದ, ಗಜದಿಂದ—
ಲೆಲ್ಲಿಯುಂ ಕಸ್ತುರಿಯ ಮೃಗದಿಂದ, ಖಗದಿಂದ—
ಲೆಲ್ಲಿಯುಂ ವಿರಚಿತ ಭವನದಿಂದ, ಜನದಿಂದಲಾ ನಾಡ ಸಿರಿ
ಮೆರದುದೂ. ॥ ೨ ॥

ಅಂಚೆ ವಿಂಡಾಡದ ಕೊಳಂ, ಕೊಳಂಗಳೊಳ್ ಸಲೆ ಪ—
ಳಂಚಿ ಸುಳಿಯದ ಗಾಳಿ, ಗಾಳಿಗಳ ಬಳಿ ವಿಡಿದು
ಸಂಚರಿಸುವೆಳೆ ದುಂಬಿ ದುಂಬಿಗಳ ಬಿಡಯಕಿಂಪೆನಿಸದಚ್ಚಲರ್,
ಅಲರ್ಗಳಾ ॥
ಗೊಂಚಲೆರಗಿಸದ ಲತೆ, ಲತೆಗಳಡರದ ತಳ್ಕಿ—
ನಿಂ ಚಿಗುರದ ಮಾವು, ಮಾವುಗಳ ಚಂದಳಿ—
ರ್ಮಿಂಚದ ಬನಂ, ಬನಂಗಳಿಂ ಬಳಸದೂರ್ಗಳಿಲ್ಲದೆಡೆ
ಯಿಲ್ಲಿಳೆಯೊಳೂ. ॥ ೩ ॥

ಬೆಳೆಯದ ಪೊಲಂಗಳಂ, ಬೆಳ್ದಾವರೆಗಳಲ—
ರ್ದಳೆಯದ ಕೊಳಂಗಳಂ, ಮಣಿಶಿಲಾರೋಚಿಯಿಂ

ಪಾಳೆಯದಚಲಂಗಳಂ, ತರುಣಾರುಣಪ್ರಭಾಲಕ್ಷ್ಮಿಯಂ ನಗುವಂತಿರೇ ||
ತಳೆಯದ ಬನಂಗಳಂ, ಕಿವಿಯಾಳಿದಿವಾಸರಂ
ಕಳೆಯದ ಸ್ವನಂಗಳಂ, ಮನಕನವರತ ಸುಖಂ
ಮೊಳೆಯದ ಜನಂಗಳಂ — ಮುಳಿದರಸಲ್ — ಆಂ ಕಾಣೆನಾ ಮಹೀ
ಮಂಡಲದಾಳೊ. || ೪ ||

ಉರ್ವರೆಯ ಶಾಲಿಗಳ ಪಾಲ್ದೆನೆಗೆ ನಭದಿಂ ಮು —
ಗುರ್ವ ಗಿಳಿವಿಂಡುಗಳನ್ ಉಲಿಯಿಂದ ಪಾಮರಿಯ —
ರೆರ್ವಿಸಿದಾಡಿರದೆ ಬಾಂದಳಕೆ ಮಗುಳೇಳ್ವವೋಲ್ — ಕಲ
ಮಂಗಳಿಕ್ಕೆಲದಾಳೂ ||
ಕಾರ್ವಿ, ನಳನಳಿಸಿ, ನಿಳ್ದುರೆ ಬೆಳೆದ ರಸದಾಳಿ —
ಗರ್ವುಗಳ ಸೋಗೆಗಳ ಪಸುರು ವೊಗರಾಗಸಕೆ
ಪರ್ವುತಿಪ್ಪಾ ನಾಡಾಳೆಲ್ಲಿಯುಂ ದಾರಿಗರ ಕಣ್ಗೆ
ಕೌತುಕಮಾಗಲೂ; — || ೫ ||

ತಂಬೆಲರ ಸೋಗಸಿಂಗೆ ತಲೆ ದೂಗುವಂತೆ, ತಳೆ —
ದಂಬುಜದ ಪರಿಮಳಕೆ ಶಿರವನಾಲಪಂತೆ, ಮರಿ
ದುಂಬಿಗಳ ಗಾನಕ್ಕೆ ಕಾರಳನಾಲದಾಡುವಂತಾಯ್ತಾಯ್ತು
ನಾಲದಾಡುವಾ ||
ಪಾಂಬಂಗಮೆಸೆವ ಕಳಮಸ್ತ್ರೀಯ ಪರಿಚರ್ಯ —
ಮಂ ಬಿಡದೆ ಮಾಳ್ಪ, ಕೆಳದಿಯರೆನಲ್ — ಕೀರನಿಕು —
ರುಂಬಮಂ ಸೋವಲಿಕ್ಕಲ್ಲಿರ್ದ ಪಾಮರಿಯರಾದಗಿದವರಿಗೆ
ತೋರ್ಪರೂ. || ೬ ||

ಪಿಂ ತಾಳ್ದುದಾ ಚೆಲ್ವಮಿಾ ದೇಶಮೆಂದು, ನಲ —
ವಾಂತು, ಮುಂದಳೆವುತಿರೆ, — ಕಂಡರವರಾ ಪುರ —
ಪ್ರಾಂತ್ಯದಾಳ್ ತಮ್ಮ ಪತಿಗಳಿಗಾಳಗೆ ನಡಕಾಂಡವರನಧಿಕ
ಸುಖ ಪಡಿಸುತಾ, ||
ಸ್ವಾಂತ ಸುಖಮಂ ಪಡೆವ ಪೌರನಾರಿಯರ ವಿ —
ಶ್ರಾಂತಿಗಮರಿದ, ರನ್ನವಾಸರೆಗಳಿಂದ ಶಶಿ —
ಕಾಂತಶಿಲೆಗಳ ಕಂದರಂಗಳಿಂದತಿ ಮನೋಹರಮಾದ
ಗಿರಿಯಾಂದನೂ. || ೭ ||

ಆ ಗಿರಿಯ ಮಸ್ತಕವನಡರಲ್ಕದರ ಪೂರ್ವ
ಭಾಗದೊಳ್ಮೆರವ ಭದ್ರಾವತಿಯ ಸಿರಿಗೆ ತಲೆ
ದೂಗುತ ವೃಕೋದರಂ ನುಡಿದನೆಲೆ, ವೃಷಕೇತು, ನೋಡಿದೈ,
ಕೌತುಕವನೂ? ||

ಈಗಳೀ ನಗರಂ ಮಹೀಲಲನೆಗಾಸ್ಯಾಬ್ಜ —
ಮಾಗಿರ್ಪುದ್; ಎತ್ತಲುಂ ಗಗನದೆಡೆಗೇಳ್ವ ಬಹು
ಯಾಗಧೂಮಂಗಳೆಂಬಾಲೋಲ ನೀಲಾಳಕಾವಳಿಯು
ರಾಜಿಸಿದುದೂ. || ೮ ||

ಎನಿಸು ಜನಮಿರ್ದಾಡಂ, ತ್ರಿದಶಜನಕಾವಾಸ —
ಮೆನಿಪುದಮರಾವತೀಪಟ್ಟಣಂ ಮೂಜಗದಾ —
ಳೆನಿಸು ಜಸವಡೆದಾಡಂ, ಗುಹ್ಯಕಾಸ್ಪದವೆನಿಪುದ್;
ಅಳಕಾಪುರಂ ತಿಳಿವಡೇ, ||

ಎನಿಸು ಜನಮಿರಲೆನಿಸು ಜಸವಡೆಯಲದರಿಂದ
ತನಗಿನಿಸು ಕುಂದಿಲ್ಲವೆಂಬ ಪೆಂಪಿಂದ ಪುರ —
ವನಿತೆ ಗಹಗಹಿಸಿ ನಗುವಂತೆಸೆವ ಸೌಧಂಗಳ
ಮರೀಚಿಯಂ ನೋಡೆಂದನೂ. || ೯ ||

ಶ್ವೇತಾದ್ರಿಶಿಖರದೊಳ್ಕಂಗೊಳಿಸುವುಜ್ಜ್ವಲದ
ಜ್ಯೋತಿರ್ಲತೆಯಾ? ಮೇಣ್ಸಲ್ಲಲಿತ ಶುಭ್ರ ಜೀ —
ಮೂತದೊಡ್ಡಿನ ಮೇಲೆ ಪೊಳೆವ ಸೌದಾಮಿನಿಯಾ? ಪೂರ್ವ
ಪರ್ವತದೊಳೆಸೆವಾ ||

ಶೀತಾಂಶುಲೇಖೆಯಾ? ಬಗೆವಡೀ ನಗರದ ವಿ —
ನೂತನ ಪ್ರಾಸಾದದಗ್ರದೊಳ್ಪೊಳೆವಂಬು —
ಜಾತ ನಯನನರತನುವಲ್ಲರಿಯ ಕಾಂತಿಯಾ?
ಕರ್ಣಸುತ, ನೋಡೆಂದನೂ. || ೧೦ ||

ನಳನಳಿಪ ತರುಣತೆಯ ಸೊಂಪುವೆತ್ತಗುಣತೆಯ
ತಳಿರಿಡಿದ ತೋರಣದ ಚೆಲ್ವನಾಂತೋರಣದ
ತೊಳಪ ಕಲಶದ ಗುಡಿಯ ಸಾಲ್, ದಳದ ಸಾಲ
ಸೀಗುರಿಚಮರಿಯಾ ||

ಚಲಿತ ಲೀಲಾಸ್ಪದ ಪತಾಕೆಗಳ ಲಾಸ್ಯದ ಪ —

ವಳ ಮುತ್ತುಗಳ ಗೊಂಚಲ್ಗಳೊತ್ತುಗಳ ಗೊಂ—
ದಳದ ಬಗೆ ಕಂಗಳಿಂಬಿಗೆ ಕೌತುಕಂಗಳಿಂ
ಬೀದಿಗಳೊಳೆಸೆದಿರ್ಪವೂ. || ೧೧ ||

ಒತ್ತರಿಸಿದುನ್ನತ ಪ್ರಾಸಾದ ಜನಗಳ ಸು—
ಚಿತ್ತವದನದ ಸುಮಂದಸ್ಮೇರಚಂದ್ರಿಕೆಯೊ—
ಳ್, ಉತ್ತುಂಗದೇವಾಲಯದ ಗೋಪುರದ ಮಾಣಿಕದ
ಕಲಶದೆಳೆ ವಿಸಿಲೊಳೂ ||

ಕತ್ತಲೆ ಪರವುದಲ್ಲದೀ ನಗರದೊಳ್ಬೇರೆ
ಮತ್ತೆ ಸೋಮಾದಿತ್ಯಕಿರಣಂಗಳೈದುವಡೆ
ಸುತ್ತಲುಂ ಮುಗಿಲ ಮುಟ್ಟಿದ ಕೋಟೆಗಳ ವಳಯವ್;
ಅಣುಗ, ನೋಡಚ್ಚರಿಯನೂ! || ೧೨ ||

ಮೇಲೆ ನಿಚ್ಚಂ ಪರಿವ ದಿನಮಣಿಯು ಮಣಿರಥದ
ಘಾಲಿಗಳ ನೇಮಿಗಳ ಪೊಯ್ಲಿಂದ ಹಾಡೆ,—ಯುದ್ಧ
ಸಾಲ ಹೊಂಗೋಟೆದೆನೆಗಾನೆಗಳಿಂದೇಳ್ವ ಧೂಳಲ್ಲಿಗಲ್ಲಿಗೆ ನಚದೊಳೂ; ||
ಸ್ಥೂಲ ದಂಡಾಕೃತಿಯನಾಂತವೊಲ್ ಪ್ರಾಕಾರ
ಜಾಲಮಂ ಮೀರ್ದ ಹೇಮದ ಡೆಂಕಣಿಯ ಕೈಗ—
ಳೊಲಿಗಚ್ಚರಿಯಾಗಿ ತೋರುತಿವೆ; ತನಯ, ನೋಡೀ
ನಗರದೇಣ್ದೆಸೆಯೊಳೂ! || ೧೩ ||

ಆವಗಂ ಬಳಲಿ ದಣಿದಿಹ ಮನುಜರಾದಗೆ, ಯಾ
ಠಾವು ಸೌಖ್ಯದ ಶಾಂತಿಯಡೆಯುವಂದದಲಿ ರಾ—
ಜೀವಮಿತ್ರಂ ತಂನ ತಾಪದ ಕರಂಗಳಂ ಪೆರೆದೆಗದನೆಂಬಂತಿರೇ,— ||
ಆ ವೆಡೆಯೊಳುಂ ಛಿದ್ರಮೇನಿಲ್ಲ, ವಿವಿಧ ದ್ರು—
ಮಾವಳಿಯ ನಿಬಿಡ ಪತ್ರಛಾಯೆಗಳ ಸೊಂಪು
ದೀವಿದಾರಾಮಂಗಳೆಂದುಮೀ ಪುರಜನರ್ಗೀಂ
ವಿಲಾಸಮನೀವವೋ? || ೧೪ ||

ನಿಚ್ಚಳದೊಳೆಸೆವ ತಿಳಿಗೊಳನ ಕಲಕಾಡಿ, ಬಿರಿ—
ದಚ್ಚಲರ ಧೂಳಿಗಳ ಚೆಲ್ಲಾಡಿ, ಸಲೆ ಮುದಂ
ಪೆಚ್ಚಿ, ತರುಲತೆಯನಣದಾಡಿ, ಮರಿದುಂಬಿಗಳ ಬಳಗಮಂ ಕೂಡಿ
ಕೊಂಡ್, ಈ ಬನದೊಳೂ ||

ನಿಚ್ಚಲೆಳೆಯಲರೆಂಬ ಸಾಕ್ಕಾನೆ ತಾನೆ ತಂ—
ನಿಚ್ಛೆಯಿಂ ತಿರುಗುತಿದೆ; ತಾಲಗಿದಾ ವಿರಹಿಗ—
ಳ್ಗೆಚ್ಚರದಾಳೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ
ಕೋಗಿಲೆಗಳೂ. ||೧೫||

ಮಿಗೆ ಮುತ್ತಿ ಮೊರೆವ ತುಂಬಿಗಳ ತಿಂಥಿಣಿಯನೇ
ಮುಗಿಲೆಂದು, ಸುಳಿವ ಗಾಳಿಗೆ ಬಿಡದೆ ನರ್ತಿಪ ಲ—
ತೆಗಳ ಕುಡಿಗಾನರ ನುಣ್ಬಗರನೇ ಮಿಂಚೆಂದು, ಸಾಗಯಿಸುವ
ಪೂಗಳಿಂದಾ ||
ಪಾಗುವ ಮಕರಂದಬಿಂದುಗಳನೇ ಮಳೆಗಳೆಂ—
ದ್, ಒಗೆವ ಸಂತಸದಾಳಾವಗಮಿದ್ದು ಕುಣಿವ ಸೋ—
ಗೆಗಳ ಬಳಗಂಗಳಂ, ಮಗನೆ, ಕಂಡೈ ತಳಿತ
ನಗರೋಪವನದೆಡೆಯಾಳೂ? ||೧೬||

ನಸು ಗಾಳಿ ಸಂಧಿಸೆ,—ಕೆದರ್ದ ಪಾಂಬಾಳೆಗಳ
ಕುಸುರಿಗಳ್ತಿಳಿವಕ್ಷತೆಗಳ್, ಅಮಲ ಮಂಜರಿಯ
ಕುಸುಮಂಗಳಾಂತ ಪುಷ್ಪಾಂಜಲಿಗಳ್, ಒಂದಿ ಕಿಕ್ಕಿರಿದ
ಪೇರ್ಗಾನೆಗಳಿಂದಾ ||
ಎಸೆವ ಚೆಂದೆಂಗಾಯ್ಗಳ್ ಒಂದಾಂದನೆಡೆಯಾತ್ತ—
ಲ್ ಒಸರಿ ಸೋರ್ವೆಳೆ ನೀರ್ಗಳರ್ಘ್ಯಂಗಳ್ ಆಗೆ,—ರಂ—
ಜಿಸುತಿಪ್ಪ, ಋತುಮಾತೆಗಾಲುಮೆಯಿಂದರ್ಚಿಸುವಾಲಿದೆ; ಕುವರ,
ನೋಡೆಂದನೂ. ||೧೭||

ತರುಣ ಪಲ್ಲವದ ವಿಸ್ತಾರದಿಂ, ನೇರದಿಂ
ಸ್ವರಗೈವ ಕಲಪಿಕೋಚ್ಚಾರದಿಂ, ಸಾರದಿಂ
ಸುರಿವ ಪೂದಾಂಗಲ ತುಷಾರದಿಂ, ಸ್ವೈರದಿಂ ಸಲ್ಲಾಪ
ಕೆಳಸಿ ಬಳಸೀ ||
ಮೊರೆವ ತುಂಬಿಗಳ ಝೇಂಕಾರದಿಂ, ತೋರದಿಂ
ಪರಿಪಕ್ವಮಾದ ಫಲಭಾರದಿಂ, ಕೀರದಿಂ
ಕರಮೆಸವುತಿಪ್ಪ ಸಹಕಾರದಿಂ ತೀರದ್ ಇಂದೆಲ್ಲಿಯುಂ
ನಂದನದಾಳೂ. ||೧೮||

ಕುದ್ದಾಲ ಹತಿಯನುರೆ ತಾಳ್ದಿಂಮುನಿಂನೆಗಂ

ಮುದ್ದು ಗೈದೀ ಮಾತೆ ಬೆಳಸಿದಳೆಂದು, ತುರು—
ಗಿದ್ದ ತನಿ ವಣ್ಗಳಿಂದೆಸೆವ ಪೇರ್ಗೊನೆಗಳಂ ಸಲೆ ಸಮರ್ಪಿಸಲಾಶಿಸೀ, ||
ಎದ್ದಿರದೆ, ಬಾಗಿದವು ಕದಳಿಗಳ್ಧರಣಿಗೆನ—
ಲ್,—ಉದ್ದ ಹೆಮ್ಮನು ಮರದು, ಧರ್ಮಾರ್ಥಮಂ ಮಾಡಿ—
ಯುದ್ದಾಮ ದಾನಗಳ ದಾಯಕನ ಪಾಗಳ ತಕ್ಕದು
ಮನುಜಕುಲಸಕಲರೂ. || ೧೯ ||

ಕಡುಗೆಂಪೆಸೆವ ತಳಿರ ತನಿಗೆಂಡಮಂ ಕಲಕಿ,
ನಡೆದು, ಮೊನೆಮುಗುಳ ಶಸ್ತ್ರಂಗಳಂ ಪಾಯ್ದು, ಮಾ—
ಮಿಡಿಯ ರಾಜಿಪ ವಜ್ರಮುಷ್ಟಿಯಂ ಪಿಡಿದು, ಲತೆಗಳ ಕಾನರ
ಚಾಟಿಯಿಂದಾ ||
ಬಡಿದು, ಕೋಗಿಲೆಯ ನಿಡುಸರದ ಬೊಬ್ಬೆಯೊಳಾಲ್ದು,
ಬಿಡದೆ ಬನರಾಣಿಯೋಲಗದೊಳುತ್ಸವದಿಂದ—
ಲಡಿಗಡಿಗೆ ತೂಣಗಾಂಡವನಂತೆಸೆವ ಮಂದ ಮಾರುತನ
ನೋಡೆಂದನೂ. || ೨೦ ||

ಬಕುಳ, ಮಂದಾರ, ಪಾದರಿ, ಕರ್ಣಿಕಾರ, ಚಂ—
ಪಕ, ಕೋವಿದಾರ, ಪ್ರಿಯಂಗು, ಕರವೀರ, ಕುರ—
ವಕ, ತಿಲಕ, ಸುರಗಿ, ನಂದ್ಯಾವರ್ತ, ಮೇರುಸೇವಂತಿಗೆ, ಶಿರೀಷಮೆಂಬಾ ||
ಸಕಲ ತರುನಿಚಯಂ, ರಣಾಗತರ ವಿವಿಧಸಾ—
ಯಕದ ಮೂಡಿಗೆಗಳಂತೆಸೆವ ನವ ಕುಸುಮಿತ ಸ್ತ—
ಬಕದಿಂದೊಪ್ಪುತಿಹ ಕುಂದ, ಮಾಲತಿ, ಮಲ್ಲಿಕಾದಿ
ಪೂವಲ್ಲಿಗೂಡೀ, || ೨೧ ||

ಸಾಲಸಾಲಂಗಳಿಂ, ಬಕುಳಕುಳದಿಂದ, ಹಿಂ—
ತಾಲ, ತಾಲಂಗಳಿಂ, ಮಾದಲದಲರ್ಗಳಿಂ, ತ—
ಮಾಲ, ಮಾಲತಿಗಳಿಂ, ಸೌರಂಜ ರಂಜದಿಂ, ಮಂದ
ಮಂದಾರದಿಂದಾ, ||
ಜಾಲಜಾಲಂಗಳಿಂ, ಸುರಹೊಂನೆ, ಹೊಂನೆ, ಬಗೆ
ಪಾಲ, ಪಾಲಾಶತರು, ತರುಣಾಮ್ರಚಯ, ಕಿಂಕಿರ
ಲಾಲಲಾಲಿತ ನವಾಶೋಕದಿಂದ್ ಉದ್ಯದುದ್ಯಾನಮತಿ ಚೆಲ್ವಿನಿಂ
ಮೆರದುದೂ. || ೨೨ ||

ಬಗೆವಡೆದು, ಮುಂನ ಮಾಡಿರ್ದ ದೈವದ್ರೋಹ—
ದಷದಿಂದ ಬನದ ಪೊರವಳೆಯದೊಳ್ಬಹು ಕಂಟ—
ಕಿಗಳಾಗಿ, ಬಂದು, ಸಂಭವಿಸಿರಲ್,—ತಳಿತ
ಹೊಂಗೇದಿಗೆಗಳಲರೊಳಾಡೀ, ||
ಮಿಗೆ ಮಲಿನವಾಯ್ತು ಸರ್ವಾಂಗಮುಂ ಭ್ರಮರಾವ—
ಳಿಗೆ; ತಮಗದರ ಸಂಗಮೇಕೆಂದು, ಪೂತ ಸಂ—
ಪಗೆಗಳ್ ಅತಿ ಶುಚಿಗಳಂತೆಸವುತಿವೆ, ನೋಡು, ನಂದನ, ಪುರದ
ನಂದನದೊಳೂ. ||೨೩||

ಮುಡಿವಾಳ ಲಾಮಂಚಗಳ ಬೇರ್ಗಳಿಂ, ಬೇರ್ಗ—
ಳಿಡಿದಗರು ಚಂದನಂಗಳ ಕಾಂಬಿನಿಂ, ಕಾಂಬಿನಿಂ
ತೊಡರಿದೆಚ್ಚೆಸಳುಮಲ್ಲಿಗೆ ಜಾಜಿಗಳ ಪೂಗಳಿಂ ಪೂಗಳೊಂದುಗೂಡೀ, ||
ಕಡುಗಂಪು ಪಡೆದುದಾಮೂಲಾಗ್ರಮುಂ; ಬನದ
ನಡುವೆ ಪುಟ್ಟಿರ್ದಾ ಮರಂಗಳೆಲ್ಲಾ ಸೊಂಕಿ—
ದೊಡೆ ತಂಬೆಲರಿಂಗೆ ಪರಿಮಳವನೀಯ್ವುದ ಕುಜಂ
ನಂದನದೊಳೊಂದಿಲ್ಲೆನೇ. ||೨೪||

ಈ ವನದ ನಡುನಡುವೆ ತೊಳತೊಳಗುತಿಹ ಸ—
ರೋವರವರದೊಳೇ ದಳದಳದು ಬೆಳಬೆಳದ ರಾ—
ಜೀವದಲರಲರ ತುಳಿತುಳಿದು, ವಿಡಿದಿಡಿದ ಬಂಡನೊಡನೊಡನೆ
ಸವಿದು, ಸವಿದೂ, ||
ಆವಗಮ್ ಅಗಮ್ ಅಗಲದೆ, ಯುಗಯುಗದಿ ನೆರನೆರದು,
ಕಾವಸೊಗಸೊಗಸಿನಲಿ ನಲಿದು, ಮೊರೆವೊರೆವ ಭೃಂ—
ಗಾವಳಿಯ ಗಾವಳಿಯ ಕಳಕಳಂಗಳ ನೋಡು,
ರವಿತನಯತನಯಾ! ||೨೫||

ಅಗ್ಗಿ ಬಲದಿಂದಾಗಸಕೆ ಹಾರಿ, ಸಾಗರಕೆ
ಮುಗ್ಗುವ ಕುಲಾದ್ರಿಗಳ ಮರಿಗಳ ಸಮೂಹಮೆನ—
ಲ್, ಒಗ್ಗಿನಿಂ ಪೇರ್ಗಡಲ ನೀರ್ವೊಗೆಯಲಿಳಿದ
ಕಾರ್ಮುಗಿಲ ಬಳಗಂಗಳೆನಲೂ, ||
ದಿಗ್ಗಜಮನೇಕಂಗಳಾದವೆನೆ,—ಕರಿಘಟೆಯ
ಮೊಗ್ಗರಂ ವರಸರೋವರದ ಸಲಿಲಪಾನಕ್—ಇಳೆ

ನೆಗ್ಗಿದಲ್ಲದೆ ಮಾಣದೆಂಬಂತೆ — ಪೊಳಲ ಪೊರಮಟ್ಟು
ಬಂದಪುದೆಂದನೂ. || ೨೬ ||

ಖಳರ ಪುರುಷಾರ್ಥಮಂ ಕಾಮಿಸುವ ಯಾಚಕಾ—
ವಳಿಯಂತೆ ಪೊಳಲಿಂದ ಪೊರಮಟ್ಟು ಸರಸಿಯೊ—
ಳ್ಮುಳುಗುತಿಪ್ಪಾನೆಗಳ ದಾನಾಭಿಲಾಷೆಯಂ ಬಿಟ್ಟು, ಅಳಿಕುಲಂ
ತೊಲಗಲೂ; — ||

ಕಳಕಳಿಸಿ ನಗುವ ಸಜ್ಜನರ ಪೋಲ್ ಸರಸಪರಿ—
ಮಳದ ಮಕರಂದಮಂ ಭ್ರಮರಾವಳಿಗೆ ಮಾಜ—
ದೊಲಿದಿತ್ತು ಮೆರವ ಬೆಳ್ದಾವರೆಯ ಬಿಚ್ಚಲರ್ಗಳ ಪೆಚ್ಚ
ನೋಡೆಂದನೂ. || ೨೭ ||

ಕಾರ್ಗಾಲದಭ್ರಮಾಲೆಗಳಮರಸರಣಿಯಾ—
ಳ್ತಾಗರ್ಗೂಡುತೆತ್ತಲುಂ ನಿಬಿಡಮಪ್ಪಂದದಿಂ
ನೀರ್ಗುಡಿಯೆ, — ಪೊಳಲ ಪೆರ್ಬಾಗಿಲ್ಗಳಿಂದ ಪೊರಮಡುವ
ಸರ ಸರಂಗಳಿಂದಾ — ||

ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯ
ಮಾರ್ಗದೊಳ್ ತವೆ — ಶೀವಿ ಸಂದಣಿಸುತಿವೆ; ನೃಪರಾ—
ಳಾರ್ಗಿವನ ಸೌಭಾಗ್ಯಮುಂಟಮಮ! ಪೊಗಳ್ವೆನೆಂತಣುಗ,
ನೋಡಚ್ಚರಿಯನೂ! || ೨೮ ||

ಬೇರೆ ಬೇರಿನಿತೆಲ್ಲಮಂ ಕರ್ಣತನಯಂಗೆ
ತೋರುತಿರ್ದಂ ಭೀಮನ್; ಅಂನೆಗಂ ಬಿಸಿಯ ಬಿಸಿ—
ಲೇರಿದುದು; ಭದ್ರಾವತಿಯೊಳುಳ್ಳ ತೇಜಿಗಳ ಚಪಲತೆಯ
ಸೌರಂಭದಾ ||

ಮೀರಿದ ಜವಂಗಳಂ ಕಂಡು, ಕಾಲ್ಗೆಟ್ಟೆಳೆಯ—
ಲಾರದಾಯ್ತನೆ ನಡೆವ ತೇರ್ಗುದುರೆಯಂ ಕಂಡು,
ನೂರೆಲೆಗೆಳೆಯನುಗ್ರಕೋಪದಿಂದುರಿಯನುಗುಳದೆ
ಮಾಣನೆಂಬಂತಿರೇ, — || ೨೯ ||

ಭಾನು ಮಧ್ಯಾಹ್ನಗತನಾದನ್. ಈ ಕುದುರೆಗಳಾ—
ಳಾನುತ್ತಮಾಶ್ವಮಂ ಕಂಡುದಿಲ್ಲದರಿಂದ

ಮೇಣದಂ ಪಾರಮಡಿಸರಾ? ಪಾಳಲಾಳಿಲ್ಲವಾ?
ಕಣ್ಗೆಗಾಂಚರಮಾಗದಾ? ||
ಈ ನಿಧಾನವನರಿವಡೆಂತುಟೆಮಗೆಲೆ, ಕರ್ಣ—
ಸೂನು, ಪೇಳೆಂದು, ಚಿಂತಾನಿಷ್ಟನಾಗಿ, ಪವ—
ಮಾನಜಂ ಚಿತ್ತದಾಳ್ದೇವ ಪರಿಶುದ್ಧಪಾದಂಪ್ಳಿಯಂ
ಧ್ಯಾನಿಸಿದನೂ. || ೩೦ ||

(Jaimenee 3rd Chapter)

## 84. THE SEA NEAR DWARUKEE

# ೮೪. ದ್ವಾರಾವತೀ ಸಮೀಪದ ಸಮುದ್ರದ ವರ್ಣನೆ

ಇಲೆ, ಮಹೀಶ್ವರ, ನಾಗನಗರಮಂ ಪಾರಮಟ್ಟ—
ನಿಲಸುತಂ ಪಯಣಗತಿಯಾಳ್ಬರುತ, ಕಂಡನಷ—
ಕುಲದಪವಿಘಾತ ಚಯಶಮನೌಷಧಿಯನ್, ಅತುಲ
ಕಲ್ಲೋಲ ನಿರವಧಿಯನೂ, ||
ಜಲಜಂತುಚಾರಣವಿಧಿಯನ್, ಇಳಾಮಂಡಲದ
ಬಳಸಿನ ಪರಿಧಿಯನ್, ಅಪಹೃತಗಣಿತ ಸುಧೆಯನ್, ಅವಿ—
ರಳ ಘೋಷದುದಧಿಯನ್, ಅನೇಕ ರತ್ನಪ್ರತತಿಗಳ ನಿಧಿಯನ್,
ಅಂಬುಧಿಯನೂ. || ೧ ||
ಘುಳಿಘುಳಿಸುತೇಳ್ವ ಬಾಬ್ಬುಳಿಗಳಿಂ, ಸುಳಿಗಳಿಂ
ಸೆಳಸೆಳದು ನಡೆವ ಪೇರ್ತೆರೆಗಳಿಂ, ನೊರೆಗಳಿಂ
ಪಾಳೆವ ತುಂತುರಿನ ಸೀರ್ವನಿಗಳಿಂ, ಧ್ವನಿಗಳಿಂ,
ವಿವಿಧರತ್ನಂಗಳಿಂದಾ, ||

ಒಳಕಾಂಬ ನಾನಾ ಪ್ರವಾಹದಿಂ, ಗ್ರಾಹದಿಂ—
ದಳತೆಗ್ ಅಳವಡದೆಂಬ ಪೆಂಪಿನಿಂ, ಗುಂಪಿನಿಂ
ದಳದ ಪವಳದ ನಿಮಿರ್ದ ಕುಡಿಗಳಿಂ, ತಡಿಗಳಿಂದಾ
ಕಡಲ್ಕಣ್ಗೆಸದುದೂ. ||೨||

ಚಿಪ್ಪೊಡೆದು ಸಿಡಿವ ಮುತ್ತುಗಳಲ್ಲದಿವು ಮುಗು—
ಳ್ದುಪ್ಪರಿಸುವೆಳೆ ಮೀನ್ಬಿದಿರ್ವ ಸೀಕರಮಲ್ಲ—
ಮ್, ಒಪ್ಪುವ ಸುಲಲಿತ ಶಂಖದ ಸರಿಗಳಲ್ಲದಿವು
ಬೆಳ್ನೊರೆಗಳೊಟ್ಟಿಲಲ್ಲಾ, ||

ತಪ್ಪದೊಳಗಣ ರನ್ನವೆಳಗಲ್ಲದಿವು ತೊಡ—
ರ್ದಿಪ್ಪ ಕೆಂಬವಳಮಲ್ಲ್, ಇವು ಪಯೋನಿಧಿಯ ಕೆನೆ—
ಯೊಪ್ಪಮಲ್ಲದೆ ನೀರ್ವೊರ್ಗೆಯಲಿಳಿವ ಮೇಘಂಗಳಲ್ಲ್ ಎನಿಸಿತಾ
ಕಡಲೊಳೂ. ||೩||

ಕ್ರೂರ ಕರ್ಕಟಕಟಕಂ, ಕಮಠಮಠಮ್, ಇಡಿದ
ನೀರಾನೆಗಳ್ಳೆಗಳ್ಪಡೆ ಮುದಮುದ್ರೈಪ ಶಾ—
ಲೂರಕುಲರಾಜಿ ರಾಜಿಪ ಗೃಹಂ, ನಿಬಿಡ ಗಂಡೂಪದಂ ಪೆರ್ಚಿದಾ ||
ಘೋರ ಸಮುದಗ್ರದ ಗ್ರಾಹಝಷಝಷವನಮುಂ,
ಝೂರಿ ಝೀಕರ ಮಕರಮ್ ಅಹಿ ತಿಮಿತಿಮಿಂಗಿಲ ಕ—
ಠೋರತರರಾಜೀವ ಜೀವಪ್ರತತಿಗಳ ವಾಸವ್ ಆ
ಸಮುದ್ರದೊಳೆಸೆದುದೂ. ||೪||

(Jaimenee 6th Chapter.)



## 85. SUNSET

## ೮೫. ಅಸ್ತಮಾನ

ರಂಜಿಸುವ ಪಶ್ಚಿಮಾಚಲಕಿರಾತಂ ತೊಟ್ಟ
ಗುಂಜಾಭರಣವೊ? ಮೇಣ್ಗಗನಾಂಬುಧಿಯ ತಡಿಯ

ಮಂಜು ವಿದ್ರುಮಲತೆಯಾ? ಬಗೆಗಪರ
ದಿಗ್ವಧುವಿನಂಗಕುಂಕುಮಲೇಪವೋ? ||
ಅಂಜನೇಭದ ಸಿಂಧುರವಾ? ರಾಶಿಕೇಶಮಯ
ಕೆಂಜೆಡೆಯಾ? ಪೇರ್ಪಾದ ಪಂಕರುಹದರುಣತೆಯಾ?
ಸಂಜೆವೆಣ್ಣುಟ್ಟ ರಕ್ತಾಂಬರವಾ? ಪೇಳೆನಲ್ಕಾ
ಬೈಗುಕೆಂಪೆಸೆದುದೂ. || ೧ ||
ಎಚ್ಚಿದಗ್ನಿಯ ಬಾಣಗಳ ಕಾಂತಿಯೆನೆ, ರನ್ನ—
ದಚ್ಚಾಗ್ನಿಗೆಂಡಂಗಳೆನೆ, ಲೋಕಮಂ ನುಂಗ—
ಲಿಚ್ಛೈಸಿ ಬಪ್ಪ ಕತ್ತಲೆಯೆಂಬ ಕಾಳರಕ್ಕಸಿ ಕೋಪದಿಂದುಗುಳ್ದ ||
ಕಿಚ್ಚಿನ ಕೆದರ್ಗಿಡಿಗಳೆನೆ, ತನ್ನ ಸಿಂಗರಕೆ
ನಚ್ಚಿನವಳೀ ರಾತ್ರಿವಧುವೆಂದು ಹಿಮಕರಂ
ಮೆಚ್ಚಿ ಮುಂಗಳುಪಿದೆಳೆ ಮಾಣಿಕದ ಮಣಿಗಳೆನೆ,—
ಸಂಜೆಧಾರೆಗಳೆಸೆದವೂ. || ೨ ||
ಓಡಿದವು ಪಕ್ಷಿಗಳ್ಗೂಡಿಂಗೆ, ದೆಸೆಗಳಂ
ನೋಡಿದವು ಘೂಕಂಗಳ್, ಅಳಿಗಳಂ ಸೆರೆ ಗೈದು
ಹೂಡಿದವು ಬಾಗಿಲಂ ಕಮಲಂಗಳ್, ಅರಳ್ದವಿಂದೀವರಂಗಳ್,
ನಭದೊಳೂ ||
ಮೂಡಿದವು ತಾರೆಗಳ್, ಚಕ್ರವಾಕಂಗಳುಂ
ಕೂಡಿದವು ಸುಸಮೋದಕ್, ಅವನಿಯನ್ನೆಲ್ಲಮುಂ
ಶೀಡಿದವು ಕತ್ತಲೆಗಳ್, ಅಲ್ಲಿಗಲ್ಲಿಗೆ ಮನೆಮನೆಯ
ಸೊಡರ್ಕಣ್ಗೆಸೆದುದೂ. || ೩ ||
ರವಿ ಪಶ್ಚಿಮಾಬ್ಧಿಯಂ ಮರೆಗೊಳೆ,—ತಮಸ್ತೋಮ—
ಮವನಿಯಂ ಮುಸುಕಿಶೀ ತೆರದೊಳಸಿತಧ್ವಜಂ
ಬವರದೊಳ್ಮುರಿದು, ಭಂಗಿತನಾಗಿ, ತಿರುಗಿದಂ ತನ್ನ
ಪಟ್ಟಣಕಿತ್ತಲೂ. || ೪ ||

(Jaimenee 8th Chapter.)

## 86. DESCRIPTION OF THE SUMMIT OF VENDHYU

## ೮೬. ವಿಂಧ್ಯಾಚಲದ ವರ್ಣನೆ

ಆಲಿಸೆಲೆ, ಜನಮೇಜಯ, ಕ್ಷಿತಿಪ, ಮುಂದಣ ಕ—
ಥಾಲಾಪಕೌತುಕವನುಚಿತದಿಂ! —ಫಲುಗುಣಂ
ನೀಲಧ್ವಜನ ಕಂಡ ಬಳಿಕಾತನಂ ಕೂಡಿ ಕಾಂಡಖಿಳ ಸೇನೆಸಹಿತಾ ||
ಮೇಲೆ ನಡದಂ ತೆಂಕ ಮುಖಮಾಗಿ ಹಯದಾಡನೆ.—
ಕಾಲಿಡುವ ಮಂದಿಗಿಂಬಿಲ್ಲ; ನೆಲನಾಗಸಂ
ಸಾಲದೇಳುವ ಧೂಳಿಗ್; ಪಿಣ್ದೆಸೆ ಕಠೋರ ವಾದ್ಯಧ್ವನಿಗೆ
ನೆರೆದುದೆನಲೂ;— ||೧||

ಸಹದೇವನಾಗಿ, ಸಮುದಿತ ನಕುಲನಾಗಿ, ಸಂ—
ನಹಿತಾರ್ಜುನನುಮಾಗಿ, ವರ ವೃಕೋದರನಾಗಿ,
ಮಹದಿಳಾಭೃದ್ರಾಜನಾಗಿ, ಶಶಿಕಾಂತಕುಲದಿಂದ ಪಾಂಡವರುಮಾಗೀ, ||
ಅಹಿ ತರುಗಳಿಂ ಧಾರ್ತರಾಷ್ಟ್ರರಂ ಕೂಡಿ ಕಾಂ—
ಡಿಹುದರಿಂದಚಲನಾಗಿಹನೆಂದು, ಕೃಷ್ಣನಾಡ
ಬಹ ಪಾರ್ಥನಂ ಮೂದಲಿಪ ತೆರದಿಂದ ವಿಂಧ್ಯಾದ್ರಿ
ಮುಂದೆಸೆದುದೂ. ||೨||

ಎಸೆದುದಾ ಗಿರಿ ಗಗನಮಂಡಲವನ್ ಅಂಡಲೆವ
ಲಸದುಂನತ ಶೃಂಗದುತ್ಕರದ ಸತ್ಕರದ
ಶಶಿಕಾಂತಮಯಮಾದ ರಮಣೀಯ್ಯ ಕಮನೀಯ್ಯ ಕಂದರದ
ಸೌಂದರದಾಳೂ; ||
ಮುಸುಕಿ ತಪ್ಪಲ ಮೇವ ಮಂಜುಗಳ ನಂಜುಗಳ
ದಶನಮುಗ್ರಾಹಿಗಳ ಪುತ್ತುಗಳ ಮುತ್ತುಗಳ
ಬೆಸಲಾದ ಪೆರ್ಬಿದಿರ ಕಾಡುಗಳ ಬೀಡುಗಳ ಶಬರಿಯರ
ಸಂಕುಲದಾಳೂ; ||೩||

ಪಕ್ಷಿಮೃಗಜಾತಿಗಳ ಲೀಲೆ ಮಿಗೆ,—ರಮಿಸುತಿಹ

ನಿಚ್ಚಲೆಳೆಯಲರೆಂಬ ಸಾಕ್ಕಾನೆ ತಾನೆ ತಂ—
ನಿಚ್ಛೆಯಿಂ ತಿರುಗುತಿದೆ; ತಾಲಗಿದಾ ವಿರಹಿಗ—
ಳ್ಗೆಚ್ಚರದಾಳೆತ್ತಲುಂ ಪುಯ್ಯಲಿಡುವಂತೆ ಕೂಗುತಿವೆ
ಕಾಗಿಲೆಗಳೂ. || ೧೪ ||

ಮಿಗೆ ಮುತ್ತಿ ಮೊರೆವ ತುಂಬಿಗಳ ತಿಂಥಿಣಿಯನೇ
ಮುಗಿಲೆಂದು, ಸುಳಿವ ಗಾಳಿಗೆ ಬಿಡದೆ ನರ್ತಿಪ ಲ—
ತೆಗಳ ಕುಡಿಗಾನರ ನುಣ್ಬಾಗರನೇ ಮಿಂಚೆಂದು, ಸಾಗಯಿಸುವ
ಪೂಗಳಿಂದಾ ||
ಪಾಗುವ ಮಕರಂದಬಿಂದುಗಳನೇ ಮಳೆಗಳೆಂ—
ದ್, ಒಗೆವ ಸಂತಸದಾಳಾವಗಮಿದ್ದು ಕುಣಿವ ಸಾ—
ಗೆಗಳ ಬಳಗಂಗಳಂ, ಮಗನೆ, ಕಂಡೈ ತಳಿತ
ನಗರೋಪವನದೆಡೆಯಾಳೂ? || ೧೬ ||

ನಸು ಗಾಳಿ ಸಂಧಿಸೆ,—ಕೆದರ್ದ ಪಾಂಬಾಳೆಗಳ
ಕುಸುರಿಗಳ್ತಿಳಿವಕ್ಷತೆಗಳ್, ಅಮಲ ಮಂಜರಿಯ
ಕುಸುಮಂಗಳಾಂತ ಪುಷ್ಪಾಂಜಲಿಗಳ್, ಒಂದಿ ಕಿಕ್ಕಿರಿದ
ಪೇರ್ಗಾನೆಗಳಿಂದಾ ||
ಎಸೆವ ಚೆಂದೆಂಗಾಯ್ಗಳ್ ಒಂದಾಂದನೆಡೆಯಾತ್ತ—
ಲ್ ಒಸರಿ ಸಾರ್ವೆಳೆ ನೀರ್ಗಳಪ್ಪಂಗಳ್ ಆಗೆ,—ರಂ—
ಜಿಸುತಿಪ್ಪ ಚೂಮಾತೆಗಾಲುಮೆಯಿಂದರ್ಚಿಸುವಾಲಿದೆ; ಕುವರ,
ನೋಡೆಂದನೂ. || ೧೭ ||

ತರುಣ ಪಲ್ಲವದ ವಿಸ್ತಾರದಿಂ, ನೇರದಿಂ
ಸ್ವರಗೈವ ಕಲಪಿಕೋಚ್ಚಾರದಿಂ, ಸಾರದಿಂ
ಸುರಿವ ಪೂದಾಂಗಲ ತುಷಾರದಿಂ, ಸ್ವೈರದಿಂ ಸಲ್ಲಾಪ
ಕೆಳಸಿ ಬಳಸೀ ||
ಮೊರೆವ ತುಂಬಿಗಳ ಝೇಂಕಾರದಿಂ, ತೋರದಿಂ
ಪರಿಪಕ್ವಮಾದ ಫಲಚಾರದಿಂ, ಕೀರದಿಂ
ಕರಮೆಸವುತಿಪ್ಪ ಸಹಕಾರದಿಂ ತೀರದ್ ಇಂದೆಲ್ಲಿಯುಂ
ನಂದನದಾಳೂ. || ೧೮ ||

ಕುದ್ವಾಲ ಹತಿಯನುರೆ ತಾಳ್ದಂಮುನಿಂನೆಗಂ

ಮುದ್ದು ಗೈದೀ ಮಾತೆ ಬೆಳಸಿದಳೆಂದು, ತುರು—
ಗಿದ್ದ ತನಿ ವಣ್ಗಳಿಂದೆಸೆವ ಪೇರ್ಗಾನೆಗಳಂ ಸಲೆ ಸಮರ್ಪಿಸಲಾಶಿಸೀ, ||
ಎದ್ದಿರದೆ, ಬಾಗಿದವು ಕದಳಿಗಳ್ಧರಣಿಗೆನ—
ಲ್, —ಉದ್ದ ಹೆಮ್ಮನು ಮರದು, ಧರ್ಮಾರ್ಥಮಂ ಮಾಡಿ—
ಯುದ್ದಾಮ ದಾನಗಳ ದಾಯಕನ ಪಾಗಳ ತಕ್ಕದು
ಮನುಜಕುಲಸಕಲರೂ. || ೧೯ ||

ಕಡುಗೆಂಪೆಸೆವ ತಳಿರ ತನಿಗೆಂಡಮಂ ಕಲಕಿ,
ನಡೆದು, ಮೊನೆಮುಗುಳ ಶಸ್ತ್ರಂಗಳಂ ಪಾಯ್ದು, ಮಾ—
ಮಿಡಿಯ ರಾಜಿಪ ವಜ್ರಮುಷ್ಟಿಯಂ ಪಿಡಿದು, ಲತೆಗಳ ಕಾನರ
ಚಾಟಿಯಿಂದಾ ||
ಬಡಿದು, ಕಾಗಿಲೆಯ ನಿಡುಸರದ ಬಾಬ್ಬೆಯಾಳಾಲ್ವು,
ಬಿಡದೆ ಬನರಾಣಿಯಾಲಿಗದಾಳುತ್ಸವದಿಂದ—
ಲಡಿಗಡಿಗೆ ತೂಗಾಡಪನಂತೆಸೆವ ಮಂದ ಮಾರುತನ
ನಾಡೆಂದನೂ. || ೨೦ ||

ಬಕುಳ, ಮಂದಾರ, ಪಾದರಿ, ಕರ್ಣಿಕಾರ, ಚಂ—
ಪಕ, ಕಾವಿದಾರ, ಪ್ರಿಯಂಗು, ಕರವೀರ, ಕುರ—
ವಕ, ತಿಲಕ, ಸುರಗಿ, ನಂದ್ಯಾವರ್ತ, ಮೇರುಸೇವಂತಿಗೆ, ಶಿರೀಷಮೆಂಬಾ ||
ಸಕಲ ತರುನಿಚಯಂ, ರಣಾಗತರ ವಿವಿಧಸಾ—
ಯಕದ ಮೂಡಿಗೆಗಳಂತೆಸೆವ ನವ ಕುಸುಮಿತ ಸ್ತ—
ಬಕದಿಂದಾಪ್ಪುಶಿಹ ಕುಂದ, ಮಾಲತಿ, ಮಲ್ಲಿಕಾದಿ
ಪೂವಲ್ಲಿಗೂಡೀ, || ೨೧ ||

ಸಾಲಸಾಲಂಗಳಿಂ, ಬಕುಳಕುಳದಿಂದ, ಹಿಂ—
ತಾಲ, ತಾಲಂಗಳಿಂ, ಮಾದಲದಲರ್ಗಳಿಂ, ತ—
ಮಾಲ, ಮಾಲತಿಗಳಿಂ, ಸೌರಂಚ ರಂಚದಿಂ, ಮಂದ
ಮಂದಾರದಿಂದಾ, ||
ಜಾಲಜಾಲಂಗಳಿಂ, ಸುರಹಾಂನೆ, ಹಾಂನೆ, ಬಗೆ
ಪಾಲ, ಪಾಲಾಶತರು, ತರುಣಾಮ್ರಚಯ, ಕಿಂಕಿರ
ಲಾಲಲಾಲಿತ ನವಾಶಾಕದಿಂದ್ ಉದ್ಯದುದ್ಯಾನಮತಿ ಚೆಲ್ವಿನಿಂ
ಮೆರದುದೂ. || ೨೨ ||

ಬಗೆವಡಿದು, ಮುಂನ ಮಾಡಿರ್ದ ದೈವದ್ರೋಹ—
ದಷದಿಂದ ಬನದ ಪಾರವಳೆಯದಾೞ್ಬಹು ಕಂಟ—
ಕಿಗಳಾಗಿ, ಬಂದು, ಸಂಚವಿಸಿರಲ್,—ತಳಿತ
ಹಾಂಗೇದಿಗೆಗಳಲರಾಳಾಡೀ, ||
ಮಿಗೆ ಮಲಿನವಾಯ್ತು ಸರ್ವಾಂಗಮುಂ ಭ್ರಮರಾವ—
ಳಿಗೆ; ತಮಗದರ ಸಂಗಮೇಕೆಂದು, ಪೂತ ಸಂ—
ಪಗೆಗಳ್ ಅತಿ ಶುಚಿಗಳಂತೆಸವುತಿವೆ, ನೋಡು, ನಂದನ, ಪುರದ
ನಂದನದಾಳೂ. || ೨೩ ||
ಮುಡಿವಾಳ ಲಾಮಂಚಗಳ ಬೇರ್ಗಳಿಂ, ಬೇರ್ಗ—
ಳಿಡಿದಗರು ಚಂದನಂಗಳ ಕಾಂಬಿನಿಂ, ಕಾಂಬಿನಿಂ
ತಾಡರಿದೆಚ್ಚೆಸಳುಮಲ್ಲಿಗೆ ಜಾಜಿಗಳ ಪೂಗಳಿಂ ಪೂಗಳಾಂದುಗೂಡೀ, ||
ಕಪುಗಂಪು ವಡೆದುದಾಮೂಲಾಗ್ರಮುಂ; ಬನದ
ನಡುವೆ ಪುಟ್ಟಿರ್ದಾ ಮರಂಗಳೆಲ್ಲಾ ಸಾಂಕೆ—
ದಾಡೆ ತಂಬೆಲರಿಂಗೆ ಪರಿಮಳವನೀಯ್ವುದ ಕುಜಂ
ನಂದನದಾಳಾಂದಿಲ್ಲೆನೇ. || ೨೪ ||
ಈ ವನದ ನಡುನಡುವೆ ತಾಳತಾಳಗುತಿಹ ಸ—
ರೋವರವರದಾಳೇ ದಳದಳದು ಬೆಳಬೆಳದ ರಾ—
ಜೀವದಲರಲರ ತುಳಿತುಳಿದು, ವಿಡಿದಿಡಿದ ಬಂಡನಾಡನಾಡನೆ
ಸವಿದು, ಸವಿದೂ, ||
ಆವಗಮ್ ಅಗಮ್ ಅಗಲದೆ, ಯುಗಯುಗದಿ ನೆರನೆರದು,
ಕಾವಸಾಗಸಾಗಸಿನಲಿ ನಲಿದು, ಮೊರೆಮೊರೆವ ಭ್ರಂ—
ಗಾವಳಿಯ ಗಾವಳಿಯ ಕಳಕಳಂಗಳ ನೋಡು,
ರವಿತನಯತನಯಾ! || ೨೫ ||
ಅಗ್ಗಿ ಬಲದಿಂದಾಗಸಕೆ ಹಾರಿ, ಸಾಗರಕೆ
ಮುಗ್ಗುವ ಕುಲಾದ್ರಿಗಳ ಮರಿಗಳ ಸಮೂಹಮೆನ—
ಲ್, ಒಗ್ಗಿನಿಂ ಪೇರ್ಗಡಲ ನೀರ್ವೊಗೆಯಲಿಳಿದ
ಕಾರ್ಮುಗಿಲ ಬಳಗಂಗಳೆನಲೂ, ||
ದಿಗ್ಗಜಮನೇಕಂಗಳಾದವೆನೆ,—ಕರಿಘಟೆಯ
ಮೊಗ್ಗರಂ ವರಸರೋವರದ ಸಲಿಲಪಾನಕ್—ಇಳೆ

ನೆಗ್ಗಿದಲ್ಲದೆ ಮಾಣದೆಂಬಂತೆ — ಪೊಳಲ ಪೊರಮಟ್ಟು
ಬಂದಪುದೆಂದನೂ. || ೨೬ ||

ಖಳರ ಪುರುಷಾರ್ಥಮಂ ಕಾಮಿಸುವ ಯಾಚಕಾ —
ವಳಿಯಂತೆ ಪೊಳಲಿಂದ ಪೊರಮಟ್ಟು ಸರಸಿಯಾ —
ಳ್ಮುಳುಗುತಿಪ್ಪಾನೆಗಳ ದಾನಾಭಿಲಾಷೆಯಂ ಬಿಟ್ಟು, ಅಳಿಕುಲಂ
ತೊಲಗಲೂ; — ||

ಕಳಕಳಿಸಿ ನಗುವ ಸಜ್ಜನರ ವೋಲ್ ಸರಸಪರಿ —
ಮಳದ ಮಕರಂದಮಂ ಭ್ರಮರಾವಳಿಗೆ ಮಾಜ —
ದೊಲಿದಿತ್ತು ಮೆರೆವ ಬೆಳ್ದಾವರೆಯ ಬಿಚ್ಚಲರ್ಗಳ ಪೆಚ್ಚ
ನೋಡೆಂದನೂ. || ೨೭ ||

ಕಾರ್ಗಾಲದಭ್ರಮಾಲೆಗಳಮರಸರಣಿಯಾ —
ಳ್ತಾಗೂರ್ಡುತೆತ್ತಲುಂ ನಿಬಿಡಮಪ್ಪಂದದಿಂ
ನೀರ್ಗುಡಿಯೆ, — ಪೊಳಲ ಪೇರ್ಬಾಗಿಲ್ಗಳಿಂದ ಪೊರಮಡುವ
ಸರ ಸರಂಗಳಿಂದಾ — ||

ಊರ್ಗೆ ಮರಳುವ ತೇಜಿಗಳ ಸಾಲ್ಗಳಾ ಮಧ್ಯ
ಮಾರ್ಗದೊಳ್ ತವೆ — ಶೀವಿ ಸಂದಣಿಸುತಿವೆ; ನೃಪರಾ —
ಳಾರ್ಗಿವನ ಸೌಭಾಗ್ಯಮುಂಟಮಮ! ಪೊಗಳ್ವೆನೆಂತಣುಗ,
ನೋಡಚ್ಚರಿಯನೂ! || ೨೮ ||

ಬೇರೆ ಬೇರಿನಿತೆಲ್ಲಮಂ ಕರ್ಣತನಯಂಗೆ
ತೋರುತಿರ್ದಂ ಭೀಮನ್; ಅಂನೆಗಂ ಬಿಸಿಯ ಬಿಸಿ —
ಲೇರಿದುದು; ಭದ್ರಾವತಿಯೊಳುಳ್ಳ ತೇಜಿಗಳ ಚಪಲತೆಯ
ಸೌರಂಭದಾ ||

ಮೀರಿದ ಜವಂಗಳಂ ಕಂಡು, ಕಾಲ್ಗೆಟ್ಟೆಳೆಯ —
ಲಾರದಾಯ್ತನೆ ನಡೆವ ತೇರ್ಗುದುರೆಯಂ ಕಂಡು,
ನೂರೆಲೆಗೆಳೆಯನುಗ್ರಕೋಪದಿಂದುರಿಯನುಗುಳದೆ
ಮಾಣನೆಂಬಂತಿರೇ, — || ೨೯ ||

ಭಾನು ಮಧ್ಯಾಹ್ನಗತನಾದನ್. ಈ ಕುದುರೆಗಳಾ —
ಳಾನುತ್ತಮಾಶ್ವಮಂ ಕಂಡುದಿಲ್ಲದರಿಂದ

ಮೇಣದಂ ಪಾರಮಡಿಸರಾ? ಪಾಳಲಾಳಿಲ್ಲವಾ?
ಕಣ್ಗೆ ಗೋಚರಮಾಗದಾ? ||
ಈ ನಿಧಾನವನರಿವಡೆಂತುಟೆಮಗೆಲೆ, ಕರ್ಣ—
ಸೂನು, ಪೇಳೆಂದು, ಚಿಂತಾನಿಷ್ಠನಾಗಿ, ಪವ—
ಮಾನಜಂ ಚಿತ್ತದೊಳ್ದೇವ ಪರಿಶುದ್ಧವಾದಂಘ್ರಿಯಂ
ಧ್ಯಾನಿಸಿದನೂ. || ೩೦ ||

(Jaimenee 3rd Chapter)

## 84. THE SEA NEAR DWARUKEE

## ೮೪. ದ್ವಾರಾವತೀ ಸಮೀಪದ ಸಮುದ್ರದ ವರ್ಣನೆ

ಒಲೆ, ಮಹೀಶ್ವರ, ನಾಗನಗರಮಂ ಪಾರಮಟ್ಟ—
ನಿಲಿಸುತಂ ಪಯಣಗತಿಯಾಳ್ವರುತ, ಕಂಡನಷ—
ಕುಲದಪವಿಘಾತ ಜಯಶಮನೌಷಧಿಯನ್, ಅತುಲ
ಕಲ್ಲೋಲ ನಿರವಧಿಯನೂ, ||
ಜಲಜಂತುಚಾರಣವಿಧಿಯನ್, ಇಳಾಮಂಡಲದ
ಬಳಸಿನ ಪರಿಧಿಯನ್, ಅಪಹೃತಗಣಿತ ಸುಧೆಯನ್, ಅವಿ—
ರಳ ಘೋಷದುದಧಿಯನ್, ಅನೇಕ ರತ್ನಪ್ರತತಿಗಳ ನಿಧಿಯನ್,
ಅಂಬುಧಿಯನೂ. || ೧ ||
ಘುಳಿಘುಳಿಸುತೇಳ್ವ ಬಾಬ್ಬುಳಿಗಳಿಂ, ಸುಳಿಗಳಿಂ
ಸೆಳಸೆಳದು ನಡೆವ ಪೇರ್ತೆರೆಗಳಿಂ, ನೊರೆಗಳಿಂ
ಪೊಳೆವ ತುಂತುರಿನ ಸೀರ್ವನಿಗಳಿಂ, ಧ್ವನಿಗಳಿಂ,
ವಿವಿಧರತ್ನಂಗಳಿಂದಾ, ||

ಒಳಕಾಂಬ ನಾನಾ ಪ್ರವಾಹದಿಂ, ಗ್ರಾಹದಿಂ—
ದಳತೆಗ್ ಅಳವಡದೆಂಬ ಪೆಂಪಿನಿಂ, ಗುಂಪಿನಿಂ
ದಳದ ಪವಳದ ನಿಮಿರ್ದ ಕುಡಿಗಳಿಂ, ತಡಿಗಳಿಂದಾ
ಕಡಲ್ಕಣ್ಗೆಸದುದೂ. || ೨ ||

ಚಿಪ್ಪಾಡೆದು ಸಿಡಿವ ಮುತ್ತುಗಳಲ್ಲದಿವು ಮಗು—
ಳ್ದುಪ್ಪರಿಸುವೆಳೆ ಮಿಂಚ್ಚಿದಿರ್ಪ ಸೀಕರಮಲ್ಲ—
ಮ್, ಒಪ್ಪುವ ಸುಲಲಿತ ಶಂಖದ ಸರಿಗಳಲ್ಲದಿವು
ಬೆಳ್ನೊರೆಗಳಾಟ್ಟಿಲಲ್ಲಾ, ||

ತಪ್ಪದಾಳಗಣ ರನ್ನವೆಳಗಲ್ಲದಿವು ತಾಡ—
ರ್ದಿಪ್ಪ ಕೆಂಬವಳಮಲ್ಲ್, ಇವು ಪಯಾಽನಿಧಿಯ ಕೆನೆ—
ಯಾಪ್ಪುಮಲ್ಲದೆ ನೀರ್ವೊಗೆಯಲಿಳಿವ ಮೇಘಂಗಳಲ್ಲ್ ಎನಿಸಿತಾ
ಕಡಲಾಳೂ. || ೩ ||

ಕ್ರೂರ ಕರ್ಕಟಕಟಕಂ, ಕಮಠಮಠಮ್, ಇಡಿದ
ನೀರಾನೆಗಳ್ಕೆಗಳ್ವೆಡೆ ಮುದಮುದ್ರೈಪ ಶಾ—
ಲೂರಕುಲರಾಜಿ ರಾಜಿಪ ಗೃಹಂ, ನಿಬಿಡ ಗಂಡೂಪದಂ ಪೆರ್ಚಿದಾ ||
ಘೋರ ಸಮುದಗ್ರದ ಗ್ರಾಹಚಿವಚಿಪನಮಂ,
ಚೂರಿ ಚೀಕರ ಮಕರಮ್ ಅಹಿ ತಿಮಿತಿಮಿಂಗಿಲ ಕ—
ಠಾರತರರಾಜೀವ ಜೀವಪ್ರತತಿಗಳ ವಾಸವ್ ಆ
ಸಮುದ್ರದಾಳೆಸೆದುದೂ. || ೪ ||

(Jaimenee 6th Chapter.)



## 85. SUNSET

## ೮೫. ಅಸ್ತಮಾನ



ರಂಜಿಸುವ ಪಶ್ಚಿಮಾಚಲಕಿರಾತಂ ತಾಟ್ಟ
ಗುಂಜಾಭರಣವೊ? ಮೇಘಗನಾಂಬುಧಿಯ ತಡಿಯ

ಮಂಜು ವಿದ್ರುಮಲತೆಯಾ? ಬಗೆಗಪರ
ದಿಗ್ವಧುವಿನಂಗಕುಂಕುಮಲೇಪವೋ? ||
ಅಂಜನೇಖದ ಸಿಂಧುರವಾ? ಕಾಶಿಕೇಶಮಯ
ಕೆಂಜೆಡೆಯಾ? ಪೇರ್ಪಾದ ಪಂಕರುಹದರುಣತೆಯಾ?
ಸಂಜೆವೆಣ್ಣುಟ್ಟ ರಕ್ತಾಂಬರವಾ? ಪೇಳೆನಲ್ಕಾ
ಬೈಗುಕೆಂಪೆಸೆದುದೂ. ||೧||

ಎಚ್ಚಿದಗ್ನಿಯ ಬಾಣಗಳ ಕಾಂತಿಯೆನೆ, ರನ್ನ—
ದಚ್ಚಾಗ್ನಿಗೆಂಡಂಗಳೆನೆ, ಲೋಕಮಂ ನುಂಗ—
ಲೆಚ್ಛೈಸಿ ಬಪ್ಪ ಕತ್ತಲೆಯೆಂಬ ಕಾಳರಕ್ಕಸಿ ಕೋಪದಿಂದುಗುಳ್ದ ||
ಕಿಚ್ಚಿನ ಕೆದರ್ಗಿಡಿಗಳೆನೆ, ತನ್ನ ಸಿಂಗರಕೆ
ನಚ್ಚಿನವಳೀ ರಾತ್ರಿವಧುವೆಂದು ಹಿಮಕರಂ
ಮೆಚ್ಚಿ ಮುಂಗಳುಪಿದೆಳೆ ಮಾಣಿಕದ ಮಣಿಗಳೆನೆ,—
ಸಂಜೆಧಾರೆಗಳೆಸೆದವೂ. ||೨||

ಓಡಿದವು ಪಕ್ಷಿಗಳ್ಗೂಡಿಂಗೆ, ದೆಸೆಗಳಂ
ನೋಡಿದವು ಘೂಕಂಗಳ್, ಅಳಿಗಳಂ ಸೆರೆ ಗೈದು
ಹೂಡಿದವು ಬಾಗಿಲಂ ಕಮಲಂಗಳ್, ಅರಳ್ದವಿಂದೀವರಂಗಳ್,
ನಚದಾಳೂ ||
ಮೂಡಿದವು ತಾರೆಗಳ್, ಚಕ್ರವಾಕಂಗಳುಂ
ಕೂಡಿದವು ಸುಸಮೋದಕ್, ಅವನಿಯನ್ನೆಲ್ಲಮುಂ
ಶೀಡಿದವು ಕತ್ತಲೆಗಳ್, ಅಲ್ಲಿಗಲ್ಲಿಗೆ ಮನೆಮನೆಯ
ಸೊಡರ್ಕಣ್ತೆಗೆಸೆದುದೂ. ||೩||

ರವಿ ಪಶ್ಚಿಮಾಬ್ಧಿಯಂ ಮರೆಗೊಳೆ,—ತಮಸ್ತೋಮ—
ಮವನಿಯಂ ಮುಸುಕಿಶೀ ತೆರದೊಳಸಿತಧ್ವಜಂ
ಬವರದೊಳ್ಮುರಿದು, ಚಂಗಿತನಾಗಿ, ತಿರುಗಿದಂ ತನ್ನ
ಪಟ್ಟಣಕಿತ್ತಲೂ. ||೪||

(Jaimenee 8th Chapter.)

## 86. DESCRIPTION OF THE SUMMIT OF VENDHYU

# ೮೬. ವಿಂಧ್ಯಾಚಲದ ವರ್ಣನೆ


ಲಿಸೆಲೆ, ಜನಮೇಜಯ, ಕ್ಷಿತಿಪ, ಮುಂದಣ ಕ —
ಥಾಲಾಪಕೌತುಕವನುಚಿತದಿಂ! — ಫಲುಗುಣಂ
ನೀಲಧ್ವಜನ ಕಂಡ ಬಳಿಕಾತನಂ ಕೂಡಿ ಕೊಂಡಖಿಳ ಸೇನೆಸಹಿತಾ ||
ಮೇಲೆ ನಡಬಂ ತೆಂಕ ಮುಖಮಾಗಿ ಹಯದೊಡನೆ. —
ಕಾಲಿಡುವ ಮಂದಿಗಿಂಬಿಲ್ಲ; ನೆಲನಾಗಸಂ
ಸಾಲದೇಳುವ ಧೂಳಿಗ್; ಎಣ್ದೆಸೆ ಕಠೋರ ವಾದ್ಯಧ್ವನಿಗೆ
ನೆರೆದುದೆನಲೂ; — || ೧ ||

ಸಹದೇವನಾಗಿ, ಸಮುದಿತ ನಕುಲನಾಗಿ, ಸಂ —
ನಹಿತಾರ್ಜುನನುಮಾಗಿ, ವರ ವೃಕೋದರನಾಗಿ,
ಮಹದಿಳಾಭೃದ್ರಾಜನಾಗಿ, ಶಶಿಕಾಂತಕುಲದಿಂದ ಪಾಂಡವರುಮಾಗೀ, ||
ಅಹಿ ತರುಗಳಿಂ ಧಾರ್ತರಾಷ್ಟ್ರರಂ ಕೂಡಿ ಕಾಂ —
ಡಿಹುದರಿಂದಚಲನಾಗಿಹೆನೆಂದು, ಕೃಷ್ಣನಾಡ
ಬಹ ಪಾರ್ಥನಂ ಮೂದಲಿಪ ತೆರದಿಂದ ವಿಂಧ್ಯಾದ್ರಿ
ಮುಂದೆಸೆದುದೂ. || ೨ ||

ಎಸೆದುದಾ ಗಿರಿ ಗಗನಮಂಡಲವನ್ ಅಂಡಲೆವ
ಲಸದುಂನತ ಶೃಂಗದುತ್ಕರದ ಸತ್ಕರದ
ಶಶಿಕಾಂತಮಯಮಾದ ರಮಣೀಯ್ಯ ಕಮನೀಯ್ಯ ಕಂದರದ
ಸೌಂದರದಾಳೂ; ||
ಮುಸುಕಿ ತಪ್ಪಲ ಮೇವ ಮಂಜುಗಳ ನಂಜುಗಳ
ದಶನಮುಗ್ರಾಹಿಗಳ ಪುತ್ತುಗಳ ಮುತ್ತುಗಳ
ಬೆಸಲಾದ ಪೆರ್ಬಿದಿರ ಕಾಡುಗಳ ಬೀಡುಗಳ ಶಬರಿಯರ
ಸಂಕುಲದಾಳೂ; || ೩ ||

ಪಕ್ಷಿಮೃಗಜಾತಿಗಳ ಲೀಲೆ ಮಿಗೆ, — ರಮಿಸುತಿಹ

ಯಕ್ಷ ಕಿಂನರ ಕಿಂಪುರುಷ ಗರುಡ ಗಂಧರ್ವ
ರಕ್ಷಾೀಗಣಂಗಳಿಂದ್, ಅಲ್ಲಲ್ಲಿಗೆಸೆವ ಪುಣ್ಯಾಶ್ರಮದ
ಮುನಿಗಳಿಂದಾ, ||

ವೃಕ್ಷವಾನರಕುಲದ ವಿವಿಧ ಚೇಷ್ಟೆಗಳಿಂದ,
ವೃಕ್ಷ ಲತೆಗಳ ಕುಸುಮ ಫಲ ಸಮೃದ್ಧಿಗಳಿಂದ—
ಲ್, ಅಕ್ಷಿಗಚಲೇಂದ್ರಮೆಸೆದಿರ್ದುದು ಪುಳಿಂದಿನೀ
ತನುಗಂಧಬಂಧುರದಾಳೂ.— || ೪ ||

ಅಭಿಲಾಷೆಯಂತಿರೆ ಸದಾ ನವಂ, ಸಿರಿಯಂತೆ
ವಿಬುಧಾಸ್ಪದಂ, ಕಲಾನಿಧಿಯಂತೆ ಮೃಗಧರಂ,
ನಭದಂತೆ ಕುಜಯುತಂ, ದ್ವಿಜನಂತೆ ವಂಶಪರಿಶೋಭಿತಂ,
ಸ್ವರ್ಗದಂತೇ ||

ಶುಭ ಸುರಭಿ ಸಂಭೃತಂ, ರಣದಂತೆ ಶರಧೃತಂ,
ಸಭೆಯಂತೆ ಚಿತ್ರಪತ್ರಾನ್ವಿತಂ, ದಿನಕರ
ಪ್ರಭೆಯಂತೆ ಪುಂಡರೀಕೋಲ್ಲಾಸಕರಮಾಗಿ
ಶಚ್ಛೈಲಮೆಸೆದಿರ್ದುದೂ. || ೫ ||

ಶೃಂಗಮಯಮ್, ಉರು ಶಿಲಾಪಾಂಗಮಯ, ಮದಿತ ಮಾ—
ತಂಗಮಯಮ್, ಅನುಪಮ ಭುಜಂಗಮಯಮ್, ಉಂನತ ಪ್ಲ—
ವಂಗಮಯ, ವಿತತ ಸಾರಂಗಮಯಮ್, ಅದ್ಭುತ ಸಿಂಗಮಯ,
ಶರಭಮಯವೂ, ||

ಭೃಂಗಮಯಮ್, ಅವಿರಳ ವಿಹಂಗಮಯಮ್, ಒಪ್ಪುವ ಕು—
ರಂಗಲಂಘನಮಯಂ, ಬಹು ತರಧ್ವನಿಯ ಪ್ರ—
ಸಂಗಮಯಮೆನಿಪ ಗಿರಿ ಚಂಗಮಯಮಿಲ್ಲದುತ್ತುಂಗಮಯ
ಮಾಗಿರ್ದುದೂ. || ೬ ||

ಬಹು ಕಾಲಮೆನಗೆ ನೀರ್ಮಳೆಗರದ ಧರ್ಮಾರ್ಥ—
ಕಹಹ! ಪ್ರತಿಯುಪಕಾರವನೀವೆನೆಂದಾರೆದು,
ಮಹಿತಲಂ ಸೋನೆಯೆನೆಯಷ್ಟು ದೆಸೆ ಮುಚ್ಚಿ
ಕಾಂಬೆಣ್ಕೆ ಮೀರ್ವ ಧೂಳಿದೇ,— ||

ಬಹಳ ತರು ಗುಲ್ಮ ಲತೆ ಮೃಗ ಪಕ್ಷಿ ಕ್ರಿಮಿ ಕೀಟ
ಗುಹೆ ಡೊಣೆ ಮೊರಡಿ ಪಳ್ಳ ಕೊಳ್ಳ ಜರಿ ಸರಿ ಜಲುಗು

ಗಹನ ಗಂಹರ ವಿಂಧ್ಯಾದ್ರಿಯಂ ಫಲುಗುಣನ ಸೇನೆ
ತುಳಿದಸಿಯರದುದೂ. || ೭ ||
ಪರಮ ಯಾೀಥಕರ ಬರವಂ ಕಾಣುತಾ ವಿಂಧ್ಯ
ಗಿರಿಯ ದುರ್ಮಾರ್ಗಮುಂ ಸನ್ಮಾರ್ಗಮಾಯ್ತು; ದು—
ರ್ಧರ ಹೃದಯವನಜಾಂಧಕಾರಮುಂ ಸುಪ್ರಕಾಶಿತಮಾಯ್ತು;
ವಿಕೃತಿಯಡಗೀ, ||
ಉರು ತರ ಪ್ರಚಾವದಿ ವಿಮುಕ್ತ ಚಾವಿತಮಾಯ್ತು;
ನಿರುಪಮಾಶಾಪರಿಜ್ಞಾನಮಾಯ್ತ್; ಇರದೆ ಗಾೀ—
ಚರಮಾಯ್ತು ಗಗನಮುಖಮ್ ಎನೆ;—ನಡೆದುದಾ ಹಯಂ
ಬೆಂಬಿಡದೆ ಸೇನೆ ಸಹಿತಾ.— || ೮ ||

**(Jaimenee 10th Chapter.)**

## 87. ENGINES

# ೮೭. ಯಂತ್ರವರ್ಗವು

"ಯಸ್ಮಿನ್ ದೇಶೇ ನ ಸನ್ಮಾನೋ ನ ವೃತ್ತಿರ್ ನ ಚ ಬಾಂಧವಃ |
ನ ಚ ವಿದ್ಯಾಗಮಃ ಕ್ಶ್ಚಿತ್ ತಂ ದೇಶಂ ಪರಿವರ್ಜಯೇತ್„ ||
ಹಿತೋಪದೇಶ.

ಅಂದರೆ:

ಉತ್ತಮರಿಗೆ ಮಾನವೂ, ವೃತ್ತಿಯೂ, ಬಂಧುಗಳೂ, ವಿದ್ಯಾವೃದ್ಧಿಯೂ ಯಾವ ದೇಶದಲ್ಲಿ ಏನೂ ಇರುವದಿಲ್ಲವೋ, ಆ ದೇಶವನ್ನೇ ಬಿಟ್ಟು ಬಿಡ ಬೇಕು.

### ೧. ಆವಿಯಂತ್ರಗಳು



ೀಸಿಗೆಗಾಲದಲ್ಲಿ ಮುಂಬಾಯಿಯಿಂದ ಚನ್ನಪಟ್ಟಣಕ್ಕೆ ಹಾೀಗುತ್ತ ಬರುತ್ತ ಇರುವ ಹಾಗೆಹಡಗುಗಳು ಆವಿಯ ಬಲದಿಂದ ನಡೆಯುತ್ತವೆ; ಚನ್ನ



**Railway-Station**

ಹೊಗೆಬಂಡಿಯು ಹೊರಡುವಸ್ಥಳ

ಪಟ್ಟಣದಿಂದ ವೇಲೂರುನಾಡು ದಾಟಿ, ಚೇರ್ವರಾಯಮಲೆಯ ಅಡಿಯಲ್ಲಿ ಬಂದು, ಚೇಲಂನಾಡು ದಾಟಿ, ಕೋಯಮ್ಮುತ್ತೂರು ದಾಟಿ, ಪಾಲೇಕಾಡಿನ ಹತ್ತರ ಬಂದು, ಕೋಳಿಕೋಡಿನ ಸಮೀಪದಲ್ಲಿರುವ ಬೇಪುರಕ್ಕೆ ಹೋಗುತ್ತ ಇರುವ ಹಾಗೆ ಬಂಡಿಯು ಸಹ ಆವಿಯ ಬಲದಿಂದ ನಡೆಯುತ್ತದೆ.

ಚೆಂದಾಗಿ ಮುಚ್ಚಿದ್ದೊಂದು ಪಾತ್ರೆಯೊಳಗೆ ಕಾಸಿದ ನೀರಿನಿಂದ ಏಳುವ ಆವಿಯು ಬಹಳ ಬಲದ್ದು; ಅದು ಧಪ್ಪವಾದ ಕಬ್ಬಿಣಪಾತ್ರೆಗಳನ್ನೂ ಒಡೆದು ಬಿಡ ಬಹುದು. ಆವಿಯ ಬಲವನ್ನು ಹಿತಕ್ಕಾಗಿ ಪ್ರಯೋಗಿಸ ಬಲ್ಲವರಿಗೆ ಅದು ಸಾವಿರಾರು ಮನುಷ್ಯರ ತ್ರಾಣಕ್ಕೂ ಸಾವಿರಾರು ಪಶುಗಳ ತ್ರಾಣಕ್ಕೂ ಸಮಾನವಾಗುತ್ತದೆ. ಅದನ್ನು ಪ್ರಯೋಗಿಸುವ ನಾವಿಕರು — ಪಟವಿಲ್ಲದೆ, ಘಾಳಿಯಿಲ್ಲದೆ, ಘಾಳಿ ಎದುರಾಗಿ ಇದ್ದರೂ — ಸಮುದ್ರಸಂಚಾರವನ್ನು ಬೇಕಾದ ಹಾಗೆ ಮಾಡುತ್ತಾರೆ; ಅದರಿಂದ ವಾಯುವಿನಷ್ಟು ಬೇಗ ಒಂದು ಸ್ಥಳದಿಂದ ಮತ್ತೊಂದಕ್ಕೆ ಹೋಗಲೂ ಸಾಮಾನುಗಳನ್ನು ವೈಯಲೂ ಬಹುದು.

ಹೊಗೆಬಂಡಿಯ ಮತ್ತು ಹೊಗೆಹಡಗದ ಯಂತ್ರದಲ್ಲಿ ವಿಶೇಷವಾದ ಹೆಚ್ಚು ಕಡಿಮೆ ಇಲ್ಲ; ಅವೆರಡರ ಮೂಲಯಂತ್ರವನ್ನು ಇನ್ನು ಮುಂದೆ ಚಿತ್ರಮುಖಾಂತರವಾಗಿ ವರ್ಣಿಸುವ.

ಆವಿಯನ್ನು ಹುಟ್ಟಿಸುವದಕ್ಕೆ ನೀರು ತುಂಬಿಸಿದ್ದೊಂದು ದೊಡ್ಡ ಕಬ್ಬಿಣದ ಅಥವಾ ತಾಂಬ್ರದ ಪಾತ್ರೆ ಬೇಕು; ಆ ನೀರುಪಾತ್ರೆಯ ನಾಲ್ಕು ಕಡೆಯಲ್ಲಿ ಬೆಂಕಿ ಇರುವದು; ಇದು ಮುಖ್ಯವಾಗಿ ಕಲ್ಲಿದ್ದಲಿಯದು. ಯಂತ್ರವು ಸ್ವಲ್ಪ ತ್ರಾಣದ್ದಾಗಿದ್ದರೆ ಸ್ವಲ್ಪ ಇದ್ದಲಿ, ಬಹಳ ತ್ರಾಣದ್ದಾಗಿದ್ದರೆ ಬಹಳ ಇದ್ದಲಿ ಬೇಕಾಗುವದು. ಯಂತ್ರದ ತ್ರಾಣವು ಇಷ್ಟಿಷ್ಟು ಕುದುರೇ ತ್ರಾಣದ್ದೆಂದು ಹೇಳುವದುಂಟು. ಒಂದು ತಾಸಿನೊಳಗೆ ಬೇರೆ ಬೇರೆ ತ್ರಾಣದ ಯಂತ್ರಗಳಿಗೆ ಇಷ್ಟಿಷ್ಟು ಕಲ್ಲಿದ್ದಲಿ ಬೇಕೆಂತ, ಕೆಳಗಿನ ಪಟ್ಟಿಯಲ್ಲಿ ತೋರಿಸಿ ಅದೆ —

೧ ತಾಸಿಗೆ

| | | | | | | | |
|---|---|---|---|---|---|---|---|
| ೧ | ಕುದುರೇ | ತ್ರಾಣದ | ಯಂತ್ರಕ್ಕೆ | ೨೪ | ಸೇರು | ಇದ್ದಲಿ | ಬೇಕು. |
| ೧೦ | ” | ” | ” | ೧೦೦ | ” | ” | ” |
| ೨೦ | ” | ” | ” | ೧೬೬ | ” | ” | ” |
| ೧೦೦ | ” | ” | ” | ೫೫೫ | ” | ” | ” |
| ೨೦೦ | ” | ” | ” | ೧೧೦೦ | ” | ” | ” |

ಒಂದು ಕುದುರೇ ತ್ರಾಣವೆಂದರೆ ಒಂದು ನಿಮಿಷಕ್ಕೆ ೧೦೦ ಸೇರು ತೂಗುವ ದೊಂದು ವಸ್ತುವನ್ನು ೫ ಅಡಿ ಉದ್ದವಾಗಿ ಎತ್ತ ಬಲ್ಲಂಥಾದ್ದು.

ಹೆಚ್ಚು ಬೆಂಕಿಯಿಂದ ಪ್ರಯೋಗಿಸ ಕೂಡದಷ್ಟು ಆವಿ ಹುಟ್ಟಿ ಪಾತ್ರೆಯನ್ನು ಒಡೆಯದ ಹಾಗೆ, ಇದರಲ್ಲಿ ತಕ್ಕ ಭಾರ ಹಾಕಿದ್ದೊಂದು ಚಿಕ್ಕ ಬಾಗಿಲು ಅದೆ; ಪ್ರಯೋಗಿಸ ಕೂಡುವಷ್ಟು ಆವಿಯು ಅದನ್ನು ತೆರೆಯಲಾಗದು, ಆದರೆ ಆವಿ ಹೆಚ್ಚಾದರೆ ಆ ಬಾಗಿಲನ್ನು ತೆರೆದು ಹೊರಡುತ್ತದೆ. I. ಎಂಬ ನಮ್ಮ ಚಿತ್ರದಲ್ಲಿ ಆವಿ ಹು



I ಚಿತ್ರ

ಟ್ಟುವ ಪಾತ್ರೆ ಬರೆದಿರುವದಿಲ್ಲ, ಆದರೆ ಅದು ಎಡಗಡೆಯಲ್ಲಿ ಅದೆಂತ ಭಾವಿಸಿ ಕೊಳ್ಳಬೇಕು; ಹ್ಯಾಗಂದರೆ ೧ ಎಂಬ ಅಂಕೆ ಬರೆದಿರುವಲ್ಲಿ ಆ ಪಾತ್ರೆಯಿಂದ ಯಂತ್ರಕ್ಕೆ ಆವಿಯು ಬರುವ ಕೊಳವಿಯ ಒಂದು ಭಾಗವು ಕಾಣುತ್ತದೆ. ಯಂತ್ರವೆಲ್ಲ ಮುಖ್ಯವಾಗಿ ಕಬ್ಬಿಣದ್ದೆಂದು, ಮುಂದಾಗಿ ತಿಳಿಸ ತಕ್ಕದ್ದಾಗಿದೆ.

೨ ಎಂಬ ಅಂಕೆಯು ಹತ್ತರ ಬರೆದದ್ದು ಒಂದು ಕಬ್ಬಿಣದ ಕೋಲಾಗಿದೆ; ಇದು ಒಂದು ಕೊಳವಿಯೊಳಗೆ ಸೇರಿರುವದೂ, ಕೊಳವಿಯೊಳಗೆ ಅದರ ಬಲಗಡೆಯಲ್ಲಿ ಒಂದು ಕಬ್ಬಿಣದ ಪಟ್ಟಿ ಜೋಡಿಸಿರುವದೂ ಕಾಣುತ್ತದೆ; ಆ ಪಟ್ಟಿ ಪರೀಕ್ಷಿಸಿದರೆ ಮೇಲೆಯೂ ಕೆಳಗೆಯೂ ಅದರಲ್ಲಿ ಅಗಲವಾದದ್ದೊಂದು ಭಾಗವು ಮೂಗಿನ ಹಾಗೆ ತೋರುತ್ತದೆ. ಕೊಳವಿಯೊಳಗೆ ಮೇಲಕ್ಕೂ ಕೆಳಯಕ್ಕೂ ಆಡ ಬಹುದಾದ ಆ ಪ್ರಕಾರದ ಕೋಲಿನ ಹೆಸರು ಸರಕುಗೋಲು (=ಸರಿಯುವ ಕೋಲು) ಎಂತ ಹೇಳುತ್ತಾರೆ. ಇದು ಆ ಕೊಳವಿಯೊಳಗೆ ಇದ್ದರೂ ಆ ಕೊಳವಿಯು ತುಂಬಿ ಇರುವದಿಲ್ಲ. ಹಾಗಾದರೆ ೧ ಎಂಬ ಅಂಕೆ ಬರೆದಿರುವ ಕೊಳವೀ ಮಾರ್ಗವಾಗಿ ಆವಿಯು ಬಂದರೆ ಅದು ಆ ಸರಕುಗೋಲಿರುವ ಕೊಳವಿಯೊಳಗೆ ಸೇರಿ, ಮೇಲಕ್ಕಾಗಲಿ ಕೆಳಯಕ್ಕಾಗಲಿ ಹೋಗ ಬಹುದು. ಮೇಲಕ್ಕೆ ಎಷ್ಟು ವರಿಗೆ ಹೋಗ ಬಹುದೆಂದು ಕೇಳಿದರೆ, ಆ ಸರಕುಗೋಲು ಕೊಳವಿಯೊಳಗಿಂದ ಹೋಗುವಷ್ಟೇ ವರಿಗೆ; ಯಾಕಂದರೆ ಆ ಸರಕುಗೋಲು ಘಾಳಿಹೊಂದಿಕೆಯಾಗಿ (ಘಾಳಿಹೊಂದಿಕೆಯಾಗಿ ಅಂದರೆ ಘಾಳಿಯು ಈಚೆಯಿಂದ ಆಚೆಗೆ, ಆಚೆಯಿಂದ ಈಚೆಗೆ ಸೇರ ಕೂಡದ ರೀತಿಯಾಗಿ) ಹೊರಗೆ ಹೋಗಿ ಏನೂ ಆವಿಯನ್ನು ಹೊರಡಗೊಡದ್ದಲ್ಲದೆ, ತನ್ನ ಅಗಲವಾದ ಮೇಲಿನ ಭಾಗದಿಂದ ಅಥವಾ ಮೂಗಿನಿಂದ ೪ ಎಂಬ ಅಂಕೆ ಬರೆದಿರುವ ಕೊಳವಿಗೆ ಹೋಗುವ ದಾರಿ ಮುಚ್ಚುತ್ತದೆ. ಹಾಗಾದರೆ ಆ ಆವಿಯು ಮೇಲಕ್ಕೆ ದೂರ ಹೋಗ ಕೂಡದೆ, ಕೆಳಗೆ ಇಳಿದು, ೬ ಎಂಬ ಅಂಕೆಯೂ ಆ ಬಾಣವೂ ಬರೆದಿರುವ ದಾರಿಯಲ್ಲಿ ೫ ಎಂಬ ಅಂಕೆ ಬರೆದಿರುವ ಕೊಳವಿಯೊಳಗೆ ಸೇರುತ್ತದೆ.

೪ ಎಂದೂ ೫ ಎಂದೂ ಬರೆದಿರುವದು ಒಂದೇ ಕೊಳವಿ; ಆದರೆ ೩ ಎಂತ ಬರೆದಿರುವ ಕೊಳವಿಯಲ್ಲಿ ಘಾಳಿಹೊಂದಿಕೆಯಾಗಿರುವ ಒಂದು ಗಂಟು ೫ ಎಂಬ ಭಾಗಕ್ಕೂ ೪ ಎಂಬ ಭಾಗಕ್ಕೂ ನಡುವೆ ಅದೆ. ಈ ಗಂಟಿಗೆ ಕೊಳವಿಯೊಳಗಿಂದ ಘಾಳಿಹೊಂದಿಕೆಯಾಗಿ ಮೇಲಕ್ಕೆ ಹೋಗುವದೊಂದು ಕಬ್ಬಿಣದ ಕೋಲು ಹಚ್ಚಿಯದೆ. ಈ ಪ್ರಕಾರದ ಕೋಲಿನ ಹೆಸರು ಗಂಟುಗೋಲು; ಅದು ೪, ೫ ಎಂತ ಬರೆದ ತನ್ನ ಕೊಳವಿಯೊಳಗೆ ಮೇಲಕ್ಕೂ ಕೆಳಯಕ್ಕೂ ಆಡ ಬಹುದು.

ಈ ಗಂಟುಗೋಲಿನ ಕೊಳವಿಯು ೫ ಎಂಬ ಭಾಗದೊಳಗೆ ೬ ಎಂಬ ದಾರಿಯಲ್ಲಿ ಆವಿಯು ಶೇರುತ್ತದೆಂದು, ಮೇಲೆ ಹೇಳಿ ಅದೆ. ಇದು ಒಳಶೇರಿದನಂತರ ಒತ್ತಿ, ತಾನು ಕೆಳಗೆ ಬಂದಿರುವ ಗಂಟುಗೋಲನ್ನು ಮೇಲಕ್ಕೆ ಸರಿಸುತ್ತದೆ.

ಆ ಗಂಟುಗೋಲು ೧೪ ಎಂದು ಬರೆದಿರುವ ಒಂದು ಕಬ್ಬಿಣತುಂಡಿಗೆ, ಈ ತುಂಡು ೮—೮ ಎಂದು ಬರೆದಿರುವ ಅಡ್ಡಪಟ್ಟಿಗೆ ಹಚ್ಚಿ ಅದೆ; ಅಡ್ಡಪಟ್ಟಿಯೂ ಆ ತುಂಡೂ ಕೂಡಿರುವಲ್ಲಿ ಒಂದು ಕೀಲಿನಚ್ಚು ಅದೆ. ಆ ಅಡ್ಡಪಟ್ಟಿಯ ನಡುಭಾಗವು ಒಂದು ಕಂಭದಲ್ಲಿ ಕೀಲಿನಚ್ಚಿನ ಮುಖಾಂತ್ರದಿಂದ ಒಂದು ತ್ರಾಸುಗಂಭದ ಹಾಗೆ ತೂಗಿ ಅದೆ; ಮತ್ತು ಬಲಗಡೆಯಲ್ಲಿ ಆ ಪಟ್ಟಿಗೆ ೧೦ ಎಂಬ ಕಬ್ಬಿಣಗೋಲು ಕೀಲಿನಚ್ಚಿನಿಂದ ಹಚ್ಚಿ ಅದೆ; ಈ ಕೋಲಿನ ಹೆಸರು ಚಕ್ರಗೋಲೆಂತ ಹೇಳುವ. ಈ ಚಕ್ರಗೋಲು ಕೀಲಿನಚ್ಚಿನಿಂದ ೧೧ ಎಂಬ ಕಬ್ಬಿಣತುಂಡಿಗೆ ಹಚ್ಚಿ ಅದೆ; ಈ ಚಕ್ರತುಂಡು ೯—೯—೯ ಎಂತ ಬರೆದಿರುವ ದೊಡ್ಡ ಚಕ್ರದ ನಡುವಿಗೆ ಘಟ್ಟಿಯಾಗಿ ಜೋಡಿಸಿ ಅದೆ. ಈ ಚಕ್ರದ ಹೆಸರು ನಾಯಕಚಕ್ರವೆಂತ ಹೇಳುತ್ತಾರೆ.

ಮೇಲೆ ಹೇಳಿದಂತೆ ೫ ಎಂಬ ಕೊಳವಿಭಾಗದೊಳಗೆ ಬಂದ ಆವಿಯು ತನ್ನ ಮೇಲಿನ ಗಂಟುಗೋಲನ್ನು ಏರಿಸುತ್ತದೆ. ಆದ್ದರಿಂದ ಏನು ಆಗುತ್ತವಂದರೆ—ಗಂಟುಗೋಲಿಗೆ ಹಚ್ಚಿರುವ ೧೪ ಎಂಬ ತುಂಡು ೮—೮ ಎಂಬ ಅಡ್ಡಪಟ್ಟಿಯ ಎಡಗೈಯನ್ನು ಏರಿಸುತ್ತದೆ; ಅಷ್ಟರೊಳಗೆ ಅಡ್ಡಪಟ್ಟಿಯ ಬಲಗೈಯು ಇಳಿಯುತ್ತ, ೧೦ ಎಂಬ ಚಕ್ರಗೋಲನ್ನು ಕೆಳಗೆ ಇಳಿಸುತ್ತ, ೧೧ ಎಂಬ ಚಕ್ರತುಂಡನ್ನು ಇಳಿಸುತ್ತ, ಇದರ ಸಂಗಡ ೯—೯—೯ ಎಂಬ ಚಕ್ರವನ್ನು—ಒಂದು ಬಾಣವು ತೋರಿಸುವಂತೆ—ಎಡಗಡೆಗೆ ಅರ್ಧಕ್ಕೆ ತಿರುಗಿಸುತ್ತದೆ. ೧೧ ಎಂಬ ಚಕ್ರತುಂಡು ಎಡಗಡೆಯಲ್ಲಿದ್ದರೆ ಆ ಪ್ರಕಾರ ಇಳಿಯುವದು; ಆದರೆ ಈಗ

ನಮ್ಮ I ಎಂಬ ಚಿತ್ರದ ಯಂತ್ರದ ಸ್ಥಿತಿಯನ್ನು ತಿಳುಕೊಳ್ಳುವ! ೪—೫ ಎಂಬ ಕೊಳವಿಯೊಳಗಣ ಗಂಟುಗೋಲು ಇಳಿಯುತ್ತ ಅದೆ, ಇದನ್ನು ಅದರ ಹತ್ತರ ಬರೆದಿರುವ ಬಾಣವು ತೋರಿಸುತ್ತದೆ; ಆದ್ದರಿಂದ ೮—೮ ಎಂಬ ಅಡ್ಡಪಟ್ಟಿಯ ಎಡಗೈಯೂ, ಇದಕ್ಕೆ ಹಚ್ಚಿ ಇದ್ದು ೧೨ ಎಂಬ ಕೊಳವಿಯೊಳಗೆ ಹೋಗಿರುವ ಒಂದು ಶೇದುಗೋಲೂ ಇಳಿಯುತ್ತ ಅವೆ. ಆದರೆ ಅಡ್ಡಪಟ್ಟಿಯ ಬಲಗೈಯೂ, ಅದಕ್ಕೆ ಹಚ್ಚಿ ಇದ್ದು ಬಾಣ ಮೇಲಕ್ಕೆ ಹಾರುವದು ತೋರುವ ಒಂದು ಕೋಲೂ, ೧೦ ಎಂಬ ಚಕ್ರಗೋಲೂ, ೧೧ ಎಂಬ ಚಕ್ರತುಂಡೂ ಏರುತ್ತ ಅವೆ. ತಿಳುಕೊಳ್ಳಿರಿ, ಅಡ್ಡಪಟ್ಟಿಯ ಬಲಗೈಯು ಇನ್ನು ಹೆಚ್ಚು ಏರಿ, ಅದರ ಎಡಗೈಯೂ ಬಲಗೈಯೂ ಸಮ ಉದ್ದವಾದರೆ ನಾಯಕಚಕ್ರವು ಪೂರಾಗಿ ತಿರುಗಿದ ಹಾಗಾಗುವದು.

ಅಡ್ಡಪಟ್ಟಿಯ ಎಡಗೈಯ ಈ ಇಳಿಯುವಿಕೆಯೂ ಬಲಗೈಯ ಏರುವಿಕೆಯೂ ಯಾತರಿಂದಾಗುತ್ತದೆಂದರೆ: ೪—೫ ಎಂಬ ಕೊಳವಿಯ ೫ ಎಂಬ ಭಾಗದೊಳಗೆ ಇದ್ದ ಆವಿಯು ಹೊರಟಾಗ ಬೇರೆ ಆವಿಯು ಬಂದು, ೪ ಎಂಬ ಕೊಳವಿಭಾಗದೊಳಗೆ ಶೇರಿ, ಗಂಟುಗೋಲಿನ ಮೇಲಿದ್ದು, ಇದನ್ನು ಕೆಳಯಕ್ಕೆ ಸರಿಸುತ್ತದೆ. ಆದರೆ ಆವಿಯು ೪ ಎಂಬ ಭಾಗದೊಳಗೆ ಹ್ಯಾಗೆ ಶೇರ ಬಹುದು? ಅದಕ್ಕೆ ಹೋಗುವ ದಾರಿ ಮುಚ್ಚಿ ಅದೆ ಎಂತ ಹೇಳೋಣವಾಯಿತಲ್ಲ? ಕೇಳಿರಿ, ಆವಿಯು ಮೊದಲು ಗಂಟುಗೋಲಿನ ಕೆಳಗೆ ೫ ಎಂಬಲ್ಲಿ ಶೇರಿ, ಅದನ್ನು ಏರಿಸುವಾಗ ನಾಯಕಚಕ್ರದ ನಡುಗಡೆಗೆ ಒಂದು ಪ್ರಕಾರವಾಗಿ ಹಚ್ಚಿರುವ ೨ ಎಂಬ ಸರಕುಗೋಲು (ಈ ಪ್ರಕಾರವನ್ನು ಚಿತ್ರಮುಖಾಂತ್ರ ತೋರಿಸ ಕೂಡದು) ಚಕ್ರದ ಆಟದಿಂದ ಇಳಿಯುತ್ತ ಇದ್ದದರಿಂದ ಆ ಸರಕುಗೋಲು ಮೇಲಗಡೆಯು ತನ್ನ ಮೂಗಿನ ಸಂಗಡ ಕೆಳಯಕ್ಕೆ ಸರಿಯುತ್ತ, ೪ ಎಂಬ ಕೊಳವಿಭಾಗಕ್ಕೆ ಹೋಗುವ ದಾರಿಯನ್ನು ಬಿಡುತ್ತ, ೫ ಎಂಬ ಕೊಳವಿಭಾಗಕ್ಕೆ ಹೋಗುವ ದಾರಿಯನ್ನು ತನ್ನ ಕೆಳಗಡೆಯ ಮೂಗಿನಿಂದ ಮುಚ್ಚುತ್ತ ಬಂತು. ಆದ್ದರಿಂದ ಬರುವ ಆವಿಯು ೫ ಎಂಬಲ್ಲಿ ಇನ್ನು ಶೇರಲಾರದೆ ಹೋಗಿ, ೪ ಎಂಬಲ್ಲಿ ಶೇರಿ, ತನ್ನ ಒತ್ತುವ ಬಲದಿಂದ ಗಂಟುಗೋಲನ್ನು ಇಳಿಸುವದು; ಮತ್ತು ಈ ರೀತಿಯಾಗಿ ಅಡ್ಡಪಟ್ಟಿಯ ಎಡಗಡೆಯನ್ನು ಇಳಿಸಿ, ಅದರ ಬಲಗಡೆಯನ್ನು ಏರಿಸುವದು. ಅದಲ್ಲದೆ ಗಂಟುಗೋಲು ಇಳಿಯುವಾಗ ೫ ಎಂಬ ಕೊಳವಿಭಾಗದೊಳಗೆ ಇದ್ದ ಆವಿಯು ಹೊರಡುವದು; ಈ ಆವಿಯ ಹೊರಡುವಿಕೆಯನ್ನು ಆ ಮೇಲೆ ಒಂದು ಚಿತ್ರದಿಂದ ತೋರಿಸುವ.

೨ ಎಂಬ ಸರಕುಗೋಲಿನ ಮುಖಾಂತರ ಆವಿಯು ಸರ್ತಿಸರ್ತಿಗೆ ಒಮ್ಮೆ ೩ ಎಂಬ ಗಂಟಿನ ಮೇಲೆ ಒಮ್ಮೆ ಅದರ ಕೆಳಗೆ ಬರುವದರಿಂದ ಗಂಟುಗೋಲು ಮೇಲಕ್ಕೂ ಕೆಳಯಕ್ಕೂ ಆಡುವ ಕಾರಣ ೮—೮ ಎಂಬ ಅಡ್ಡಪಟ್ಟಿಯ ಈ ಕಡೆಯೂ ಆ ಕಡೆಯೂ ಸರ್ತಿಸರ್ತಿಗೆ ಏರುತ್ತ ಇಳಿಯುತ್ತ ಅದೆ. ಈ ಪರಿಯಾಗಿ ೯—೯—೯ ಎಂಬ ನಾಯಕಚಕ್ರವು ನಿತ್ಯದಲ್ಲಿ ತಿರುಗುತ್ತಿರುವದು, ಮತ್ತು ಅದು ತಾನು ಹಚ್ಚಿರುವ ಬಂಡಿಯನ್ನು ನಡಿಸುತ್ತಿರುವದು.

ಬಂಡಿಗೆ ಹಚ್ಚಿರುವ ಒಂದು ಸನ್ನೆಗೋಲಿನ ಬಲದಿಂದ ನಾಯಕಚಕ್ರದ ತಿರುಗಾಟವನ್ನು ಒಂಮೆ ಬಲಗಡೆಯಿಂದ ಎಡಗಡೆಗೆ, ಒಂಮೆ ಎಡಗಡೆಯಿಂದ ಬಲಗಡೆಗೆ ನಡಿಸ ಬಹುದು; ಅದು ಕಾರಣ ಹಾಗೆಬಂಡಿಯು ಬೇಕಾದ ಹಾಗೆ ಒಂಮೆ ಹಿಂದಕ್ಕೆ, ಒಂಮೆ ಮುಂದಕ್ಕೆ ನಡೆಯುವದು.

II ಮೇಲ್ಗಡೆ



ಕೆಳಗಡೆ

ಆವಿಯು ೪ ಎಂಬ ಕೊಳವಿಭಾಗದೊಳಗಿಂದಲೂ ೫ ಎಂಬದರೊಳಗಿಂದಲೂ ಸರ್ತಿಸರ್ತಿಗೆ ಹೊರಡುವ ವಿಷಯವನ್ನು ಇನ್ನು ಸ್ವಲ್ಪದರಲ್ಲಿ ವಿವರಿಸುವ. ಅದರ ಸಲುವಾಗಿ ಇಲ್ಲಿ ಬೇರೊಂದು II ಎಂಬ ಚಿತ್ರವು ಬರೆದದೆ; ಇದರ ತಾತ್ಪರ್ಯವೇನಂದರೆ — ಆವಿಯು ೭ ಎಂಬ ಕೊಳವೀ ದಾರಿಯಾಗಿ ಬಂದು, ೪ ಎಂಬ ಕೊಳವಿಭಾಗದೊಳಗೆ ೩ ಎಂಬ ದಾರಿಯಾಗಿ — ಬಾಣಗಳು ತೋರಿಸುವಂತೆ — ಶೇರಿ, ೧ ಎಂಬ ಗಂಟುಗೋಲನ್ನು ಬಾಣವು ತೋರಿಸುವಂತೆ — ಏರಿಸುವಾಗ, ೫ ಎಂಬ ಕೊಳವಿಭಾಗದೊಳಗಿದ್ದ ಆವಿಯು ಹೊರಡುತ್ತ, ೬ ಎಂಬಲ್ಲಿ ಇರುವ ತೂತಿನೊಳಗೆ — ಒಂದು ಬಾಣವು ತೋರಿಸುವಂತೆ — ಶೇರಿ, ಮುಂಚಿನ I ಎಂಬ ಚಿತ್ರದ ೭ ಎಂಬ ಪಾತ್ರೆಯೊಳಗೆ ಒಂದು ಕೊಳವಿಯ ಮುಖಾಂತರವಾಗಿ ಪ್ರವೇಶಿಸುತ್ತದೆ. ಆ ಮೇಲೆ ಚಕ್ರದಾಟದಿಂದ ೨ ಎಂಬ ಸರಕುಗೋಲು (II ಎಂಬ ಚಿತ್ರವನ್ನು ನೋಡಬೇಕು, ಇದರಲ್ಲಿ ಅದರ ಪಟ್ಟಿಯು ಗೆರೆ ಹಾಕಿದ್ದಾಗಿದೆ) ಇಳಿದು, ೫ ಎಂಬ ಕೊಳವಿಭಾಗಕ್ಕೆ ಹೋಗುವ ದಾರಿ ಬಿಟ್ಟು, ೪ ಎಂಬ ಕೊಳವಿಭಾಗಕ್ಕೆ ಹೋಗುವ ದಾರಿ ಮುಚ್ಚುವಾಗ, ಮತ್ತು ೫ ಎಂಬ ಭಾಗದೊಳಗೆ ಆವಿಯು ಶೇರಿ, ಗಂಟುಗೋಲನ್ನು ಇಳಿಸುವಾಗ, ೪ ಎಂಬದರೊಳಗಣ ಆವಿಯು ೬ ಎಂಬ ತೂತಿಗೆ ಹೋಗಿ, ಒಳ ಶೇರಿ, ಬಳಿಕ ಸಹ I ಎಂಬ ಚಿತ್ರದ ೭ ಎಂಬ ಪಾತ್ರೆಯೊಳಗೆ ಪ್ರವೇಶಿಸುತ್ತದೆ.

ಈ ೭ ಎಂಬ ಪಾತ್ರೆಯ ನಾಲ್ಕು ಕಡೆಯಲ್ಲಿ ತಣ್ಣೀರು ಇರುವದರಿಂದ ಅದರೊಳಗೆ ಶೇರುವ ಆವಿಯು ತಕ್ಕಷ್ಟು ತಂಪಾಗಿ, ನೀರಾಗುತ್ತದೆ. ಅದರಿಂದ ೭ ಎಂಬ ಪಾತ್ರೆಯ ಹೆಸರು ತಂಪುಪಾತ್ರೆ ಎಂದು ಹೇಳುವ. ಆ ನೀರಾದ ಆವಿಯು ಆ ಮೇಲೆ ೧೨ ಎಂಬ ಕೊಳವಿಯೊಳಗೆ ಶೇರಿ, ಇದರಲ್ಲಿ ಕಾಣುವ, ಅಡ್ಡಪಟ್ಟಿಗೆ ಹಚ್ಚಿ ಇದ್ದು ಆಡುವ ಶೇದುಗೋಲಿನ ಮುಖಾಂತರದಿಂದ ಕೊಳವೀ ದಾರಿಯಾಗಿ ಮುಂದೆ ಹೋಗಿ, ೧೩ ಎಂಬ ಕೊಳವಿಯ ದಾರಿಯಾಗಿ ಎಡಗಡೆಗೆ (ಇದು ಚಿತ್ರದಲ್ಲಿ ಕಾಣುವದಿಲ್ಲ) ಆವಿಯನ್ನು ಹುಟ್ಟಿಸುವ ಪಾತ್ರೆಗೆ ಹೋಗಿ, ಒಳ ಶೇರುತ್ತದೆ. ಇದು ಪ್ರಯೋಗದ್ದು, ಯಾಕಂದರೆ ಆ ಆವಿನೀರು ಇನ್ನು ಸ್ವಲ್ಪ ಬೆಚ್ಚಗಾಗಿರುವದರಿಂದ ಅದನ್ನು ತಿರಿಗಿ ಆವಿ ಮಾಡುವದಕ್ಕೆ ಬಹಳ ಬೆಂಕಿ ಬೇಕಾಗುವದಿಲ್ಲ.



THE FIRST BRITISH STEAM BOAT ಮೊದಲನೇ ಉಗೆದೋಣೆ

ಮೇಲಿನ ಆವಿಯಂತ್ರವ ಬೇರೆ ಬೇರೆ ಕೆಲಸಕ್ಕೆ ಪ್ರಯೋಗಿಸುತ್ತಾರೆ; ಅದು ಹೊಗೆಬಂಡಿಯದ್ದಾಗಿದ್ದರೂ ಅದರ ಭಾಗಗಳು ಬಂಡಿಯಲ್ಲಿ ಒಂದು ತರವಾಗಿ ಇಟ್ಟವೆ; ಈ ತರವನ್ನು ಸ್ವಲ್ಪ ಮಾತಿನಲ್ಲಿ ಹೇಳುವ. ನೀವು ಹೊಗೆಬಂಡಿಯ ಹಿಂಗಡೆಯು ಎಡಗೈಯಲ್ಲಿ, ಮುಂಗಡೆಯು ಬಲಗೈಯಲ್ಲಿ ಅದೆ ಎಂತ ಭಾವಿಸಿ ಕೊಳ್ಳ ಬೇಕು. ಹೀಗಾದರೆ ಹಿಂಗಡೆಯಲ್ಲಿ ಬಂಡಿ ನಡಿಸುವವನು ಅದರಲ್ಲಿ ನಿಲ್ಲುತ್ತಾನೆ; ಆ ಮೇಲೆ ಬೆಂಕಿಯ ಸ್ಥಳವು ಬರುತ್ತದೆ; ಇದರಲ್ಲಿ ನಡಿಸುವವನ ಕಡೆಗೆ ಇದ್ದಲಿ ಹಾಕುವ ಬಾಗಿಲು ಅದೆ; ಬೆಂಕಿಸ್ಥಳದೊಳಗಿಂದ ಅನೇಕ ಕೊಳವಿಗಳು ಬಲಗಡೆಗೆ ಹೋಗಿ, ಹೊಗೆಯನ್ನೂ ಕಿಡಿಗಳನ್ನೂ ಹೊಗೆದಾರಿ ಎಂಬ ಉದ್ದವಾಗಿ ನಿಲ್ಲುವ ಕೊಳವಿಗೆ ವೈದು, ಹೊರಗೆ ಬಿಡುತ್ತವೆ. ಬೆಂಕಿಸ್ಥಳದ ಸುತ್ತಲು, ಮೇಲೆ ಹೇಳಿದ ಬಾಗಿಲೂ ಕೊಳವಿಗಳೂ ಇಲ್ಲದಲ್ಲಿ, ಆವಿ ಹುಟ್ಟಿಸುವ ಪಾತ್ರೆಯದೆ. ಇದರ ಮೇಲ್ಗಡೆಯಲ್ಲಿ ನಡಿಸುವವನ ಹತ್ತಿರ ಸೌಜ್ಞೆ ಕೊಡಲಿಕ್ಕೆ ಆವಿಯನ್ನು ಹೊರಗೆ ಬಿಡುವದರಿಂದ ಧ್ವನಿ ಮಾಡಿಸ ಬಹುದಾದ ಕೊಳಲುಯಂತ್ರ ಅದೆ; ಅದಲ್ಲದೆ ಬಂಡಿಯನ್ನು ಹಿಂದಕ್ಕೂ ಮುಂದಕ್ಕೂ ನಡಿಸ ಬಹುದಾದ ಸನ್ನೆಗೋಲಿನ ಹಿಡಿಯೂ ಈ ಎಡಗಡೆಯಲ್ಲಿ ನಡಿಸುವವನ ಕೈಗೆ ಹತ್ತರವಾಗಿ ಅದೆ.

ಹುಟ್ಟಿದ ಆವಿಯು ಹೊಗೆಕಿಡಿಗಳ ಕೊಳವಿಗಳ ಮೇಲಿರುವ ಒಂದು ಕೊಳವಿಯೊಳಗೆ ಬಲಗಡೆಗೆ ಹೋಗಿ, ಅಲ್ಲಿ ಕೆಳಗಡೆ ಅಡ್ಡವಾಗಿ (I ಎಂಬ ನಮ್ಮ ಚಿತ್ರದಲ್ಲಿ ನೆಟ್ಟಗಾಗಿ) ಇರುವ ಸರಕುಗೋಲಿನ ಕೊಳವಿಯೊಳಗೆ ಶೇರಿ, ಇಲ್ಲಿಂದ ಇದರಂತೆ ಅಡ್ಡವಾಗಿ ಇದರ ಕೆಳಗೆ ಇರುವ ಗಂಟುಗೋಲಿನ ಕೊಳವಿಯೊಳಗೆ ಪ್ರವೇಶಿಸಿ, ಅಡ್ಡವಾಗಿ ಇದರೊಳಗಿರುವ ಗಂಟುಗೋಲನ್ನು ಬಲಕ್ಕೂ ಎಡಕ್ಕೂ ಆಡಿಸುತ್ತ, ಇದರ ಬಲಗಡೆಯಲ್ಲಿರುವ ನಾಯಕಚಕ್ರವನ್ನು ತಿರಿಗಿಸುತ್ತ ಅದೆ. ಹೊಗೆಬಂಡಿಯಲ್ಲಿ ಗಂಟುಗೋಲಿನ ಕೊಳವಿಯೊಳಗಿಂದ ತಿರಿಗಿ ಹೊರಡುವ ಆವಿಯನ್ನು ಮತ್ತು ನೀರು ಮಾಡುವ ಪದ್ಧತಿ ಇಲ್ಲ; ಆ ಆವಿಯು ಹೊಗೆಕಿಡಿಗಳ ಉದ್ದ ಕೊಳವಿಯಿಂದ ಹೊರಗೆ ಹೋಗುತ್ತದೆ. ಹೊಗೆಬಂಡಿ ಹೊರಡುವ ಸ್ಥಳವೆಂಬ ಚಿತ್ರದಲ್ಲಿ ಹೊಗೆಬಂಡಿಯ ಹೊರಗಡೆಯು ಚಂದಾಗಿ ತೋರುತ್ತದೆ; ಕಾಣುವ ಮೂರು ಚಕ್ರಗಳಲ್ಲಿ ನಾಯಕ ಚಕ್ರವು ನಡುವೆಯದಾಗಿದೆ.

ಬಂಡಿಗೆ ಒಂದು ಅಥವಾ ಎರಡು ನಾಯಕಚಕ್ರವಲ್ಲದೆ ಬೇರೆ ಗಾಲಿಗಳು ಆಧಾರಕ್ಕಾಗಿ ಇರ ಬೇಕಾದ್ದು ತನ್ನಿಂದ ತಾನೇ ತಿಳಿಯುತ್ತದೆ; ಆದರೆ ಇವುಗಳ ತಿರಿಗ್ಯಾಟ ಆ ನಾಯಕಚಕ್ರದ್ದರಿಂದ ಹುಟ್ಟುತ್ತದೆ, ಅಷ್ಟೇ.

ಬಂಡಿಯು ಏನೂ ಅಡ್ಡಿ ಇಲ್ಲದೆ ನಡಿಯುವ ಹಾಗೆ ಅದು ಕಬ್ಬಿಣಪಟ್ಟಿಗಳ ಮಾರ್ಗದಲ್ಲಿ ನಡಿಯುತ್ತದೆ; ಇವು ಹಾಸಿದ ತೊಲೆಗಳಿಗೆ ಬಿಗಿದು ಅವೆ. ಬಂಡಿಯ ಚಕ್ರಗಳ ಪರಿಧಿಪಟ್ಟಿಗಳು ಆ ಕಬ್ಬಿಣಪಟ್ಟಿಗಳಲ್ಲಿದ್ದು, ನಡೆದು ಜಾರದ ಹಾಗೆ, ತಕ್ಕ ಪ್ರಕಾರವಾಗಿ ರೂಪಿಸಿ ಅವೆ. ಅಂಥ ಕಬ್ಬಿಣಪಟ್ಟಿಗಳ ಮಾರ್ಗ ಲೋಹಮಾರ್ಗವೆಂದು ಹೇಳುತ್ತಾರೆ. ಆ ಕೆಂಪು ಚಿತ್ರದಲ್ಲಿ ಲೋಹಮಾರ್ಗದ ಪಟ್ಟಿಗಳು ಕಾಣುತ್ತವೆ. ಹೊಗೆಬಂಡಿಗೆ ಬೇಕಾದಷ್ಟು ಬೇರೆ ಬಂಡಿಗಳನ್ನು ಕಟ್ಟಿ, ಅದರಿಂದ ಮುಂದಕ್ಕೆ ಎಳಿಸಬಹುದು.

ಹೊಗೆಬಂಡಿ ಬಹಳ ಶೀಘ್ರವಾಗಿ ನಡಿಯುತ್ತದೆ; ಬಹಳ ಭಾರ ಎಳದು ಕೊಂಡು ಹೋಗುತ್ತದೆ; ಇದಕ್ಕೆ ಒಂದು ದೃಷ್ಟಾಂತ ಕೇಳಿರಿ — ಇಂಗ್ಲಾಂಡಿನಲ್ಲಿ ಲಿವರ್ಪೂಲ್ ಎಂಬದೂ ಬರ್ಮಿಂಗ್ಹಮ್ ಎಂಬದೂ ಎರಡು ದೊಡ್ಡ ಪಟ್ಟಣಗಳು ಒಂದು ಮತ್ತೊಂದಕ್ಕೆ ೯೫ ಮೈಲು ದೂರವಾಗಿ ಅವೆ (ಮಂಗಳೂರಿನಿಂದ ಮಡಿಕೇರಿಗೆ ೮೫ ಮೈಲು ದೂರ). ಆ ಪಟ್ಟಣಗಳೊಂದರಿಂದ ಮತ್ತೊಂದಕ್ಕೆ ಲೋಹಮಾರ್ಗವು ಕಟ್ಟಿ ಅದೆ. ಒಂದು ದಿವಸದಲ್ಲಿ ಒಂದು ಹೊಗೆಬಂಡಿ ಒಂದು ಪಟ್ಟಣದಿಂದ ಮತ್ತೊಂದಕ್ಕೆ ಹೋಗುವಾಗ ಆ ಹೊಗೆಬಂಡಿಯು ೧೬೦೦೦೦ ಸೇರು ತೂಕದ ಬೇರೆ ಬಂಡಿಗಳನ್ನೂ ಇವುಗಳಲ್ಲಿ ತಮ್ಮ ಸಾಮಾನುಗಳ ಸಂಗಡ ಕೂತಿರುವ ೨೪೦ ಜನರನ್ನೂ ಎಳ ಕೊಂಡು ಹೋಗಿ, ನಿಲ್ಲ ತಕ್ಕ ಸ್ಥಳಗಳಲ್ಲಿ ತಕ್ಕ ಸಮಯ ನಿಂತು, ೪½ ತಾಸಿನೊಳಗೆ ಆ ಪಟ್ಟಣಕ್ಕೆ ಮುಟ್ಟಿತು. ಹಾಗಾದರೆ ಆ ಬಂಡಿಯು ೧ ತಾಸಿಗೆ ಸುಮಾರು ೨೧ ಮೈಲು ದೂರ ಹೋಯಿತು, ಅಥವಾ ೧ ತಾಸಿಗೆ ಮಂಗಳೂರಿಂದ ಕುಂಬಳೆಗಾಂತ ೧ ಮೈಲು ದೂರ ಹೋದ ಹಾಗಾಯಿತು. ಒಂದು ಪಟ್ಟಣದಿಂದ ಮತ್ತೊಂದಕ್ಕೆ ಹೋದ ಆ ಪಯಣಕ್ಕೆ ೪೪೮೦ ಸೇರು ತೂಕದ ಕಲ್ಲಿದ್ದಲಿ ಬೇಕಾಯಿತು; ಇದರ ಕ್ರಯವು ೨೬ ರೂಪಾಯಿ. ಆ ೨೪೦ ಜನರು ಟಪ್ಪಾಲ ಬಂಡೀ ಮೇಲೆ ಹೋಗಿದ್ದರೆ ೨೫ ಬಂಡಿಗಳು ಬೇಕಾಗುತ್ತಿದ್ದವು, ಒಂದೊಂದು ಬಂಡಿಗೆ ೪ ಕುದುರೆಗಳು=೧೦೦ ಕುದುರೆಗಳು, ಇವನ್ನು ಹತ್ತು ಹತ್ತು ಮೈಲಿಗೆ ಬದಲಿಸ ಬೇಕಾದ್ದರಿಂದ=೯೫೦ ಕುದುರೆಗಳು; ಮತ್ತು ಈ ೯೫೦ ಕುದುರೆಗಳು ಆ ಬಂಡಿಗಳನ್ನು ಎಳದು ಕೊಂಡು, ೧೨ ತಾಸಿಗೆ ಹೋಗಿ ಮುಟ್ಟುತ್ತಿದ್ದವು.

ಹೊಗೆಹಡಗಗಳಲ್ಲಿ ಸಾಧಾರಣವಾಗಿ ಎರಡು ಆವಿಯಂತ್ರಗಳು ಅವೆ; ಇವು ಹಡಗದ ಈ ಕಡೆಯಿಂದ ಆ ಕಡೆಗೆ ಪಾರಾಗಿ ಹೋಗುವದೊಂದು ಅಚ್ಚಿಗೆ ಬಿಗಿದ ಎರಡು ಚಕ್ರಗಳನ್ನು ಈಚೆಯಲ್ಲಿಯೂ ಆಚೆಯಲ್ಲಿಯೂ ನೀರೊಳಗೆ ತಿರಿಗಿಸುತ್ತವೆ. ಈ ನಾಯಕಚಕ್ರಗಳ ಪರಿಧಿಯು ಹೊಗೆಬಂಡಿಗಳದರ ಹಾಗೆ ಅಲ್ಲ, ಹೊಗೆಹಡಗಗಳ ಚ

ಕ್ರಗಳ ಒಂದೊಂದು ಹಲ್ಲಿಗೆ ಒಂದೊಂದು ಅಗಲವಾದ ಚೌಕದ ತುಂಡು ಹಚ್ಚಿ ಅದೆ. ಚಕ್ರಗಳು ತಿರುಗುವಾಗ ಆ ತುಂಡುಗಳು ನೀರಿಗೆ ಬಡಿದು, ಹಡಗವನ್ನು ಹುಟ್ಟುಕಟ್ಟಿಗೆಯಂತೆ ಮುಂನಡಿಸುತ್ತವೆ. ಅದಲ್ಲದೆ ಕೆಲವು ವರುಷಗಳ ಹಿಂದೆ ಚಕ್ರಗಳಿಗೆ ಬದಲಾಗಿ ಒಂದು ಮರಸುತ್ತುಮೊಳೆಯನ್ನು ಇಡುವ ಪದ್ಧತಿ ಹುಟ್ಟಿತು. ವೈನ್ ಎಂಬ ಪಾನದ ಶಿಸೆಗಳ ಬೇಂಡುಗಳನ್ನು ಒಂದು ಮರಸುತ್ತಿನಿಂದ ತೆಗೆಯುತ್ತಾರಲ್ಲ? ಇಂಥಾ ಮರಸುತ್ತಿನ ಒಂದು ತುಂಡನ್ನು ಮಾದರಿ ಮಾಡಿ ಕೊಂಡು, ಅದರಂತೆ ಒಂದನ್ನು ಬಹಳ ದೊಡ್ಡದು ರೂಪಿಸಿದರೆ ಇದು ಹಡಗಮರಸುತ್ತು ಆಯಿತು. ಇಲ್ಲಿರುವ ಚಿತ್ರದಲ್ಲಿ ಒಂದು ಕಾಣುತ್ತದೆ. ಈ ಮರಸುತ್ತು ಹಡಗದ ಹಿಂಭಾಗದಲ್ಲಿ ಕೆಳಗೆ ನೀರೊಳಗೆ ಹಚ್ಚಿ ಅದೆ. ಅದನ್ನು ತಿರಿಗಿಸುವ ಅಚ್ಚು ಅಡ್ಡವಾಗಿಯಲ್ಲ, ನೆಟ್ಟಗಾಗಿ ಬಂದು, ಅದಕ್ಕೆ ಜೋಡಿಸಿ ಅದೆ. ಆ ಅಚ್ಚಿನ ಸಂಗಡ ಆ ಮರಸುತ್ತು ತಿರುಗುತ್ತ, ಮರದಲ್ಲಿ ತಿರುಗಿಸುವ ಮರಸುತ್ತಿನಂತೆ ಮುಂದೆ ಹೋದ ಹಾಗಾಗುತ್ತ, ನೀರಿಗೆ ಒತ್ತಿ (ಅಥವಾ ಬಡೆದು) ಹಡಗವನ್ನು ಮುನ್ನಡಿಸುತ್ತಿರುವದು. ಅಂಥ ಮರಸುತ್ತು ೬೦ ನಿಮಿಷಕ್ಕೆ ೧೫೦ ಸರ್ತಿಗಿಂತ ಹೆಚ್ಚು ತಿರುಗ ಬಹುದು.



ಈ ಪುಸ್ತಕದ ೧೬೦ನೇ ಪಾನಿನಲ್ಲಿ ನಾಯಕಚಕ್ರದ ಒಂದು ಹೊಗೆಹಡಗು (ಉಬ್ಬೆ ಹಡಗು) ಕಾಣುತ್ತದೆ.

೧೦೦ ವರುಷಗಳ ಹಿಂದೆ ಮೊದಲನೇ ಆವಿಯಂತ್ರವು ಮಾಡೋಣವಾಯಿತು;

## ೨. ವಿದ್ಯುತ್ಶಕ್ತಿಯಂತ್ರಗಳು

### ಅ. ಘರ್ಷಾಕರ್ಷಕ್ಷೇಪಣಶಕ್ತಿಯು

ಕ್ರಿಸ್ತಶಕಕ್ಕೆ ಮುಂಚೆ ಯವನರಿಗೆ (ಗ್ರೇಕರಿಗೆ) ಗೊತ್ತಾದದ್ದೇನಂದರೆ — ರಾಳವನ್ನು ತಿಕ್ಕಿದರೆ ಅದು ಹಗುರಾದ ವಸ್ತುಗಳನ್ನು ತನ್ನ ಕಡೆಗೆ ಎಳ ಕೊಳ್ಳುತ್ತದೆ. ಕ್ರಿಸ್ತನು ಹುಟ್ಟಿ ೧೫೦೦ ವರುಷ ಕಳೆದ ಮೇಲೆ ಆ ಲಕ್ಷಣವು ರಾಳದಲ್ಲಿ ಅಲ್ಲದೆ ಅರಗು, ಗಂಧಕ, ಕಾಂಜು, ರೇಶ್ಮೆ, ಒಣಕಟ್ಟಿಗೆ, ಉಣ್ಣೆ ಮುಂತಾದ್ದರಲ್ಲಿ ಸಹ ಅದೆಂದು, ಗೊತ್ತಾಯಿತು. ಈ ಲಕ್ಷಣದ ಶಕ್ತಿಯು ಘರ್ಷಾಕರ್ಷಣಶಕ್ತಿ ಎನ್ನ ಬರುತ್ತದೆ. (ಘರ್ಷ = ತಿಕ್ಕುವದು, ಆಕರ್ಷ = ಎಳಕೊಳ್ಳುವದು; ಅಂದರೆ ತಿಕ್ಕಲ್ಪಟ್ಟದರಿಂದ ಎಳ ಕೊಳ್ಳುವಂಥ). ೧೬೩೩ನೇ ವರುಷದಲ್ಲಿ ಮೇಲೆ ಹೇಳಿದ ವಸ್ತುಗಳನ್ನು ತಿಕ್ಕುವದರಿಂದ ಘರ್ಷಾಕರ್ಷಣಶಕ್ತಿಯಲ್ಲದೆ ಘರ್ಷಕ್ಷೇಪಣಶಕ್ತಿ ಸಹ ಹುಟ್ಟುತ್ತದೆಂತ, ತಿಳಿಯ

ಬಂತು. (ಘರ್ಷ—ಕ್ಷೇಪಣ=ತಿಕ್ಕಲ್ಪಟ್ಟದರಿಂದ ತನ್ನ ಕಡೆಯಿಂದ ನೂಕಿಸಿ ಬಿಡುವದು). ಈ ಎರಡು ಶಕ್ತಿಗಳು ವಿದ್ಯುತ್ಶಕ್ತಿಗಳೇ (=ಮಿಂಚಿನ ಶಕ್ತಿಗಳು). ಒಟ್ಟಿಗೆ ಈ ಶಕ್ತಿಗಳ ಹೆಸರು ಘರ್ಷಾಕರ್ಷಕ್ಷೇಪಣಶಕ್ತಿ ಎಂತ ಹೇಳ ಬರುತ್ತದೆ.

ಪರೀಕ್ಷೆ ಮಾಡಲಿಕ್ಕೆ ತಕ್ಕ ಉದಾಹರಣೆಗಳು —

ನೀವು ಒಂದು ಚಿಕ್ಕ ಬೆಂಡುತುಂಡನ್ನಾಗಲಿ ಕಾಗದತುಂಡನ್ನಾಗಲಿ ರೇಶ್ಮೆಧಾರಕ್ಕೆ ಕಟ್ಟಿ, ತೂಗ ಬಿಟ್ಟು, ಕಂಬಳಿಯಿಂದ ಒಂದು ಕಾಂಚುಗಾಲೀಲನ್ನು ಚಂದಾಗಿ ತಿಕ್ಕಿ, ತಡೆಯದೆ ಆ ಬೆಂಡಿಗೆ ಮುಟ್ಟಿಸಿ ಬಿಟ್ಟು, ಹೀಗೆ ಕಾಂಚುಗಾಲೀಲಿನಲ್ಲಿ ಹುಟ್ಟಿದ ವಿದ್ಯುತ್ಶಕ್ತಿಯನ್ನು ಬೆಂಡಿನಲ್ಲಿ ಹಾಗಿಸಿದ ಮೇಲೆ, ತಿರಿಗಿ ಆ ಕಾಂಚುಗಾಲೀಲನ್ನು ಬೆಂಡಿಗೆ ಮುಟ್ಟಿಸದಲೇ ಅದರ ಹತ್ತರ ಹಿಡಿದರೆ, ಆ ಕಾಂಚುಗಾಲೀಲು ಬೆಂಡನ್ನು ತನ್ನ ಕಡೆಯಿಂದ ಆಚೆಗೆ ನೂಕಿಸಿ ಬಿಡುತ್ತದೆ. ಆ ಮೇಲೆ ಕಂಬಳಿಯಿಂದ ತಿಕ್ಕಿದ ಅರಗುಗಾಲೀಲನ್ನು, ತಡ ಮಾಡದೆ, ಬೆಂಡಿನ ಹತ್ತರ ಹಿಡಿದರೆ, ಈ ಅರಗುಗಾಲೀಲು ಬೆಂಡನ್ನು ತನ್ನ ಕಡೆಗೆ ಎಳಕೊಳ್ಳುತ್ತದೆ.

ನೀವು ತೂಗ ಬಿಟ್ಟ ಬೆಂಡಿಗೆ ಕಂಬಳಿಯಿಂದ ತಿಕ್ಕಿದ ಅರಗುಗಾಲೀಲನ್ನು ಮೊದಲು ಮುಟ್ಟಿಸಿ ಬಿಟ್ಟು, ಹೀಗೆ ಅದರಲ್ಲಿ ಅರಗುಗಾಲೀಲಿನಲ್ಲಿ ಹುಟ್ಟಿದ ವಿದ್ಯುತ್ಶಕ್ತಿಯನ್ನು ಹಾಗಿಸಿದ ಮೇಲೆ ತಿರಿಗಿ ಆ ಅರಗುಗಾಲೀಲನ್ನು ಅದರ ಹತ್ತರ ಹಿಡಿದರೆ, ಅರಗುಗಾಲೀಲು ಬೆಂಡನ್ನು ತನ್ನ ಕಡೆಯಿಂದ ಆಚೆಗೆ ನೂಕಿಸಿ ಬಿಡುತ್ತದೆ; ಆದರೆ ತಿಕ್ಕಿ, ಹತ್ತರ ಹಿಡಿದ ಕಾಂಚುಗಾಲೀಲು ಅದನ್ನು ಆಗ ತನ್ನ ಕಡೆಗೆ ಎಳ ಕೊಳ್ಳುತ್ತದೆ.

ನೀವು ರೇಶ್ಮೆಧಾರಕ್ಕೆ ಕಟ್ಟಿದ ಎರಡು ಬೆಂಡುತುಂಡುಗಳನ್ನು ಪ್ರತ್ಯೇಕವಾಗಿ ತೂಗ ಬಿಟ್ಟು, ಒಂದೊಂದನ್ನು ತಿಕ್ಕಿದ ಕಾಂಚುಗಾಲೀಲಿನಿಂದ ಮುಟ್ಟಿ ಬಿಟ್ಟರೆ, ಆ ಎರಡು ಬೆಂಡುತುಂಡುಗಳ ಒಂದು ಮತ್ತೊಂದನ್ನು ತನ್ನ ಕಡೆಯಿಂದ ಆಚೆಗೆ ನೂಕಿಸಿ ಬಿಡುತ್ತದೆ. ಕಾಂಚುಗಾಲೀಲಿನಿಂದಲ್ಲ, ತಿಕ್ಕಿದ ಅರಗುಗಾಲೀಲಿನಿಂದ ಅವನ್ನು ಮುಟ್ಟಿ ಬಿಟ್ಟರೆ ಅದೇ ಪ್ರಕಾರ ತೋರುತ್ತದೆ.

ನೀವು ತೂಗ ಬಿಟ್ಟ ಆ ಎರಡು ಬೆಂಡುತುಂಡುಗಳಲ್ಲಿ ಒಂದಕ್ಕೆ ಆ ತಿಕ್ಕಿದ ಕಾಂಚುಗಾಲೀಲನ್ನು, ಮತ್ತೊಂದಕ್ಕೆ ಆ ತಿಕ್ಕಿದ ಅರಗುಗಾಲೀಲನ್ನು ಮುಟ್ಟಿಸಿ ಬಿಟ್ಟ ಮೇಲೆ, ಆ ಎರಡು ಬೆಂಡುತುಂಡುಗಳ ಒಂದು ಮತ್ತೊಂದನ್ನು ತನ್ನ ಕಡೆಗೆ ಎಳ ಕೊಳ್ಳುತ್ತದೆ.

ಈ ಉದಾಹರಣೆಗಳಿಂದ ಗೊತ್ತಾಗುವದೇನಂದರೆ —

೧. ತಿಕ್ಕುವದರಿಂದ ಎರಡು ತರದ ವಿದ್ಯುತ್ಶಕ್ತಿಯು ಹುಟ್ಟುತ್ತದೆ, ಅಥವಾ ಘರ್ಷಾಕರ್ಷಕ್ಷೇಪಣಶಕ್ತಿ ಅದೆ.

೨. ಸಜಾತಿಯ (=ಅದೇ ಜಾತಿಯ) ವಿದ್ಯುತ್ಶಕ್ತಿ ಶೇರಿದ ವಸ್ತುಗಳು ತಮ್ಮ ತಮ್ಮನ್ನು ಆಚೆಗೆ ನೂಕಿಸಿ ಬಿಟ್ಟು, ಕೂಡುವದಿಲ್ಲ; ವಿಜಾತಿಯ

(=ಬೇರೆ ಬೇರೆ ಜಾತಿಯ) ವಿದ್ಯುತ್ಶಕ್ತಿ ಶೇರಿದ ವಸ್ತುಗಳು ತಮ್ಮ ತಮ್ಮನ್ನು ಎಳಕೊಳ್ಳುತ್ತವೆ, ಅಥವಾ ಕೂಡುತ್ತವೆ.

ಘರ್ಷದಿಂದ ಕಾಂಜಿನಲ್ಲಿ ಹುಟ್ಟುವ ವಿದ್ಯುತ್ಶಕ್ತಿಯ ಹೆಸರು ಸಜಾತಿಯದೆಂದು, ಅರಗಿನಲ್ಲಿ ಘರ್ಷದಿಂದ ಹುಟ್ಟುವಂಥಾದ್ದರದು ವಿಜಾತಿಯದೆಂದು, ಹೇಳುತ್ತಾರೆ.

ತಕ್ಕಷ್ಟು ಸಜಾತಿಯ ಮತ್ತು ವಿಜಾತಿಯ ವಿದ್ಯುತ್ಶಕ್ತಿಯು ಕೂಡಿದರೆ, ಬೆಂಕಿಯಿಂದ ಒಂದು ಕಿಡಿ ಹಾರಿ ಹೋಗುವಂಥ ಕಿಡಿಯೂ ಶಬ್ದವೂ ಆಗುತ್ತದೆ.

ಯಂತ್ರೋಪಾಯವಾಗಿ ಮಾಡಿದ ಘರ್ಷದಿಂದ ೨೨ ಅಂಗುಲ ಉದ್ದವಾದ ವಿದ್ಯುಕ್ಕಿಡಿಗಳನ್ನು ಹುಟ್ಟಿಸುತ್ತಾರೆ; ಅವುಗಳಿಂದ ಬೆಕ್ಕು ಮುಂತಾದ ಚಿಕ್ಕ ಪ್ರಾಣಿಗಳನ್ನು ಕೊಲ್ಲ ಬರುತ್ತದೆ. ಅಂಥಾದ್ದೊಂದು ಕಿಡಿಯನ್ನು ಮನುಷ್ಯನು ತನ್ನೊಳಗೆ ಶೇರಗೊಡ ಬಾರದು, ಆದರೆ ತಕ್ಕಂಥಾದ್ದನ್ನು ತನ್ನೊಳಗೆ ಶೇರಿಸಿ ಕೊಂಡರೆ ಕ್ಷಣಕ್ಕೆ ಅಂಗಗಳ ಸಂಧಿಗಳು ಹರಿದ ಹಾಗೆ ಆಗುತ್ತದೆ. ಕಬ್ಬಿಣತಂತಿಯಲ್ಲಿ ಶೇರಿದ ಅಂಥ ಕಿಡಿಗಳು ತಂತಿ ಇದ್ದಷ್ಟು ದೂರ ಕ್ಷಣಕ್ಕೆ ಹೋಗುತ್ತವೆ. ದೊಡ್ಡ ಕಿಡಿಗಳಿಂದ ಲೋಹದ ತಗಡಿನ ಚೂರುಗಳನ್ನು ಕರಗಿಸ ಬರುತ್ತದೆ. (ನಾವು ವರ್ಣಿಸುವ ಶಕ್ತಿಯು ವಿದ್ಯುತ್ಶಕ್ತಿಯೆಂದು, ಈ ಕಡೇ ಮಾತುಗಳಿಂದ ತಿಳುಕೊಳ್ಳ ಬಹುದು).

ಘರ್ಷದಿಂದ ವಿದ್ಯುತ್ಶಕ್ತಿಯನ್ನು ಹುಟ್ಟಿಸಿದ ವಸ್ತುವಿಗೆ ಲೋಹವನ್ನು ಮುಟ್ಟಿಸಿ ಬಿಟ್ಟರೆ, ಆ ವಿದ್ಯುತ್ಶಕ್ತಿಯು ಲೋಹದಲ್ಲಿ ಶೇರಿ ಮುನ್ನಡಿಯುವ ಹಾಗೆ, ಆ ಶಕ್ತಿಯು ನೀರಿನಲ್ಲಿಯೂ ಆವಿಯಲ್ಲಿಯೂ ಮನುಷ್ಯಾದಿ ಪ್ರಾಣಿಗಳ ದೇಹದಲ್ಲಿಯೂ ಉಗೆ ತುಂಬಿದ ಘಾಳಿಯಲ್ಲಿಯೂ ಶೇರಿ, ಮುನ್ನಡಿಯುತ್ತದೆ. ಆದ್ದರಿಂದ ಈ ವಸ್ತುಗಳು ವಿದ್ಯುತ್ಶಕ್ತೀ ಪ್ರೇರಕವಸ್ತುಗಳು ಎನ್ನಿಸುತ್ತವೆ. (ಪ್ರೇರಕ=ಮುನ್ನಡಿಸುವಂಥ).

ಕಾಂಜು, ಅರಗು, ರಾಳ, ಉಂಣೆ, ರೇಶ್ಮೆ, ಒಣಘಾಳಿಗಳಲ್ಲಿ ಪ್ರೇರಕಶಕ್ತಿ ಇಲ್ಲದ್ದರಿಂದ ಇವು ಅಪ್ರೇರಕ ವಸ್ತುಗಳು ಎನ್ನಿಸುತ್ತವೆ.

ಬೇಸಿಗೆಗಾಲದಲ್ಲಿ ಉಗೆಯಿಲ್ಲದ ಘಾಳಿ ಇರಲಾಗಿ ಕಾಂಜಿನ ತಗಡಿನಲ್ಲಾಗಲಿ ಅರಗಿನ ತಗಡಿನಲ್ಲಾಗಲಿ ಒಂದು ಲೋಹತುಂಡನ್ನಿಟ್ಟು, ತಂತಿ ಜೋಡಿಸಿ, ಇದರ ಮಾರ್ಗವಾಗಿ ಆ ಲೋಹದಲ್ಲಿ ವಿದ್ಯುತ್ಶಕ್ತಿಯನ್ನು ಶೇರಿಸಿದರೆ, ಪ್ರೇರಕ ವಸ್ತುವಿನಿಂದ ಆ ಲೋಹವನ್ನು ಮುಟ್ಟುವ ತನಕ ಆ ಶಕ್ತಿಯು ಅವರಲ್ಲಿ ಇರುವದು.

ಕಾಂಚುಗಾಲುಗಳು ಇರುವ ಒಣಗಟ್ಟಿಗೆಯ ಒಂದು ಮಣೆಯ ಮೇಲೆ ನಿಂತಿರುವ ಮನುಷ್ಯನಲ್ಲಿ ವಿದ್ಯುತ್ತಕ್ತಿಯನ್ನು ಶೇರಿಸಿ, ಅವನ ಮೈ ಮುಟ್ಟಿ ಬಿಟ್ಟರೆ, ಇದರಿಂದ ಕಿಡಿಗಳು ಹಾರಿ ಬರುತ್ತವೆ, ಅವನ ತಲೆಗೂದಲು ನಿಗರಿ ಕಾಳ್ಕುತ್ತವೆ, ಕತ್ತಲೆಗಾಲದಲ್ಲಿ ಆ ಕೂದಲು ಹೊಳೆಯುತ್ತವೆ.

### ಆ. ಸ್ಪರ್ಶಾಕರ್ಷಕ್ಷೇಪಣಶಕ್ತಿಯು

ಘರ್ಷದಿಂದಲ್ಲದೆ ಸ್ಪರ್ಶದಿಂದಲೂ (=ಮುಟ್ಟುವದರಿಂದಲೂ) ಆಕರ್ಷಕ್ಷೇಪಣವಿದ್ಯುತ್ತಕ್ತಿ ಹುಟ್ಟುತ್ತದೆಂದು, ಕ್ರಿಸ್ತಶಕದ ೧೮೦೦ನೇ ವರುಷದಲ್ಲಿ ಚಂದಾಗಿ ಗೊತ್ತಾಯಿತು. ವಿಜಾತಿಯ ಎರಡು ಲೋಹಗಳು ಒಂದಕ್ಕೊಂದು ಮುಟ್ಟಿದರೆ ಆಗಲಿ, ಅವೆರಡನ್ನು ಒಂದು ಕಬ್ಬಿಣತಂತಿಯಿಂದ ಕೂಡಿಸಿದರೆ ಆಗಲಿ, ಅವನ್ನು ಉಪ್ಪಿನ ಅಥವಾ ಹುಳಿಯ ರಸದಲ್ಲಿ ಮುಟ್ಟಿಸದೆ ನಿಲ್ಲಿಸಿದರೆ ಆಗಲಿ ಆ ಶಕ್ತಿ ಹುಟ್ಟುತ್ತದೆ. ಉಪ್ಪಿನ ಅಥವಾ ಹುಳಿಯ ರಸವು ತಗಲುವಲ್ಲಿ ಆ ಶಕ್ತಿಯು ಲೋಹಗಳಲ್ಲಿ ವಿಶೇಷವಾಗಿ ಉತ್ಪನ್ನವಾಗುತ್ತದೆ.



ಹಿಂದು ಹುಡುಗರು ಸಹಾ ಕಟ್ಟ ಬಹುದಾದ ಒಂದು ಚಿಕ್ಕ ಸ್ಥಂಬವು ಇಲ್ಲಿಯ ಚಿತ್ರದಲ್ಲಿ ಉದಾಹರಣೆಗಾಗಿ ಬರೆಯಲ್ಪಟ್ಟಾಗಿದೆ. ಅದನ್ನು ವೋಲ್ತನೆಂಬ ಇತಲಿ ದೇಶದ ಪಂಡಿತನು ಮೊದಲು ಕಟ್ಟಿದ್ದರಿಂದ ಅದರ ಹೆಸರು ವೋಲ್ತನಿ ಸ್ಥಂಬವೆಂತ ಆಯಿತು. ಅದು ಹ್ಯಾಗಂದರೆ—

ಮೊದಲು ಒಂದು ಹಂದರ ಬೇಕು; ಇದರ ಮೇಲ್ಗಡೆಯು ಒಂದು ಮರದ ತುಂಡು, ಕೆಳಗಡೆಯು ಒಂದು ಮರದ ತುಂಡು ಆಗಿದೆ; ಈ ತುಂಡುಗಳನ್ನು ೩ ಅಪ್ರೇರಕವಾದ ಕಾಂಚುಗಾಲುಗಳು ಕೂಡಿಸುತ್ತವೆ. ಇದನ್ನು ಕಟ್ಟಿದ ಮೇಲೆ ಕೆಳಗಿನ ಮರತುಂಡಿನಲ್ಲಿ ಅಪ್ರೇರಕವಾದ ಕಾಂಚಿನ ತಗಡು ಇಡಬೇಕು; ಇದರ ಮೇಲೆ ಒಂದು ತಾಂಬ್ರಬಿಲ್ಲನಿಟ್ಟು, ಇದರ ಮೇಲೆ ಒಂದು ಸತುಬಿಲ್ಲನಿಟ್ಟು, ಇದರ ಮೇಲೆ ಹುಳೀ ರಸದಲ್ಲಿ ಆಗಲಿ ಉಪ್ಪಿನ ರಸದಲ್ಲಿ ಆಗಲಿ ಅದ್ದಿ ಹಿಂಡಿದ ಒಂದು ಕಂಬಳಿಬಿಲ್ಲನ್ನಿಟ್ಟು, ಇದರ ಮೇಲೆ ಶಿರಿಗಿ ಒಂದು ತಾಂಬ್ರಬಿಲ್ಲನ್ನಿಟ್ಟು, ಇದರ ಮೇಲೆ ಒಂದು ಸತುಬಿಲ್ಲನ್ನಿಟ್ಟು—ಈ ಪ್ರಕಾ

ರವಾಗಿಯೇ ಬೇಕಾದಷ್ಟು ಉದ್ದ ಕಟ್ಟ ಬಹುದು; ಮೇಲ್ಗಡೆಯಲ್ಲಿ ಮಾತ್ರ ಆ ಕಂಭವು ಸತುಬಿಲ್ಲಿನಲ್ಲಿ ಮುಗಿದು ಹೋಗ ಬೇಕು.

ಈ ಪ್ರಕಾರವಾಗಿ ಕಟ್ಟಿದ ಬಳಿಕ ಕಂಭದ ಅಡಿಯಲ್ಲಿರುವ ತಾಂಬ್ರದ ಬಿಲ್ಲಿಗೆ ೨ ಎಂಬ ತಂತಿ ಜೋಡಿಸಿ (ಇದನ್ನು ಕಟ್ಟುವದಕ್ಕಿಂತ ಮುಂಚೆ ಜೋಡಿಸ ಬಹುದು), ಮೇಲೆ ಇರುವ ಸತುವಿನ ಬಿಲ್ಲಿಗೆ ೧ ಎಂಬ ತಂತಿ ಜೋಡಿಸಿದರೆ, ತಾಂಬ್ರಕ್ಕೆ ಹಚ್ಚಿದ ಆ ತಂತಿಯ ತುದಿಯು ವಿಜಾತಿವಿದ್ಯುತ್ಶಕ್ತಿತುದಿಯೆಂದು, ಸತುವಿಗೆ ಹಚ್ಚಿದ ಅದರ ತುದಿಯು ಸಜಾತಿವಿದ್ಯುತ್ಶಕ್ತಿತುದಿಯೆಂದು ಹೇಳುತ್ತಾರೆ.

ಆ ಎರಡು ತಂತಿಗಳ ತುದಿಗಳು ಕೂಡಿದರೆ, ಕಂಭದಿಂದ ತಂತಿಗೆ, ತಂತಿಯಿಂದ ಕಂಭಕ್ಕೆ ಸುತ್ತಲೂ ಎಡೆಬಿಡದೆ ವಿದ್ಯುತ್ಶಕ್ತಿಯು ತಿರುಗಾಡುತ್ತದೆ.

ಈ ತಿರುಗ್ಯಾಟವ ನೋಡ ಬೇಕಾದರೆ ಆ ತಂತಿಗಳ ತುದಿಗಳನ್ನು ಒಂದಕ್ಕೊಂದು ಸ್ವಲ್ಪ ದೂರ ವಿಂಗಡಿಸ ಬೇಕು; ಆಗ ಆ ತುದಿಗಳ ನಡುವೆ ಎಡೆಬಿಡದೆ ಒಂದು ಚಿಕ್ಕಿಡಿ ತೋರುತ್ತಿರುವದು. ಒಂದು ತುದಿಯನ್ನು ಎರಡು ಬೆರಲಿನಿಂದ, ಮತ್ತೊಂದು ತುದಿಯನ್ನು ಎರಡು ಬೆರಲಿನಿಂದ ಒಂದೇ ಹೊತ್ತಿಗೆ ಮುಟ್ಟಿದರೆ, ಬೆರಲಿನಲ್ಲಿ ಒಂದು ತರವಾಗುತ್ತದೆ.

ಆ ವೋಲ್ಟನಿ ಸ್ಥಂಭವನ್ನು ಕಟ್ಟಿ ಕೆಲವು ಕಾಲವಾದ ಮೇಲೆ, ಅದರ ವಿದ್ಯುತ್ಶಕ್ತಿಯು ಕುಂದಿ ಹೋಗುತ್ತದೆ; ಹೆಚ್ಚು ಶಕ್ತಿಯನ್ನು ತಿರಿಗಿ ಹೊಂದುವದಕ್ಕಾಗಿ ಅದನು ಬಿಚ್ಚಿ, ಬಿಲ್ಲೆಗಳನ್ನು ಚಂದಾಗಿ ಶುದ್ಧ ಮಾಡಿ, ಮತ್ತು ಹಾಗೆಯೇ ಕಟ್ಟ ಬೇಕು.

ವಿದ್ಯುತ್ಶಕ್ತಿಯನ್ನು ಹುಟ್ಟಿಸುವದಕ್ಕಾಗಿ, ಮತ್ತೊಂದು ಮಾಡ ಬಹುದು. ಒಂದು ಕಾಂಜಿನ ಪಾತ್ರೆಯಲ್ಲಿ ಹುಳೀ ರಸ ಹೊಯಿದು, ಒಂದು ಕಡೆಯಲ್ಲಿ ಒಂದು ತಾಂಬ್ರತಗಡನ್ನು, ಮತ್ತೊಂದು ಕಡೆಯಲ್ಲಿ ಒಂದು ಸತುತಗಡನ್ನು, ಒಂದನ್ನು ಮತ್ತೊಂದಕ್ಕೆ ಮುಟ್ಟಿಸದೆ, ಅದರೊಳಗೆ ನಿಲ್ಲಿಸಿ, ಆ ಎರಡು ತಗಡುಗಳ ಮೇಲ್ಗಡೆಯನ್ನು ಒಂದು ತಂತೀ ಮುಖಾಂತ್ರದಿಂದ ಕೂಡಿಸಿದರೆ, ವಿದ್ಯುತ್ಶಕ್ತಿಯು ಹುಟ್ಟಿ, ಸುತ್ತ್ಯಾಡಲಿಕ್ಕೆ ಹತ್ತುತ್ತದೆ. ತಾಂಬ್ರದ ಕಡೆಯಿಂದ ಆ ತಂತಿ ದಾಟಿ ಸತುವಿನ ಕಡೆಗೆ, ಸತುವಿನಿಂದ ಆ ರಸ ದಾಟಿ ತಾಂಬ್ರದ ಕಡೆಗೆ, ಅದು ಸುತ್ತ್ಯಾಡುತ್ತಾ ಇರುವದು. ಈ ವಿಷಯದಲ್ಲಿ ಸಜಾತೀ ಶಕ್ತಿಯು ತಾಂಬ್ರದಲ್ಲಿ ಇರುವದು.

ಅದಲ್ಲದೆ ಕಾಂಜಿನ ಪಾತ್ರೆಯೊಳಗಿನ ಹುಳೀ ರಸದೊಳಗೆ ತಾಂಬ್ರದ ಮತ್ತು ಸತುವಿನ ಆ ಎರಡು ತಗಡುಗಳನ್ನು ಹಾಗೆಯೇ ನಿಲ್ಲಿಸಿ, ಸತುತಗಡಿನ ಮೇಲ್ಗಡೆಗೆ

ಜೋಡಿಸಿರುವ ಒಂದು ತಂತಿಯ ಮತ್ತೊಂದು ತುದಿಗೆ ಜೋಡಿಸಿರುವ ಕಬ್ಬಿಣತಗಡನ್ನು ಭೂಮಿಯೊಳಗೆ ಬಿಟ್ಟು, ತಾಂಬ್ರತಗಡಿನ ಮೇಲ್ಗಡೆಗೆ ಜೋಡಿಸಿರುವ ತಂತಿಯನ್ನು ಬಹಳ ಉದ್ದ ಮಾಡಿ, ಭೂಮಿಯಲ್ಲಿ ನಟ್ಟ ಕಂಭಗಳ ಮೇಲೆ ಹೇರಿಸುತ್ತ ೧೦೬ ಮೈಲು ದೂರ ಹೋಗಿಸಿ, ಅಲ್ಲಿ ಅದರ ತುದಿಗೆ ಒಂದು ಕಬ್ಬಿಣತಗಡನ್ನು ಹಚ್ಚಿ, ಭೂಮಿಯೊಳಗೆ ಬಿಟ್ಟರೆ, ಏನಾಗುವದೆಂದರೆ — ಹುಟ್ಟಿದ ವಿದ್ಯುತ್ಶಕ್ತಿಯು ಪಾತ್ರೆಯೊಳಗಿನ ತಾಂಬ್ರತಗಡಿಂದ ಹೊರಟು, ೧೦೬ ಮೈಲು ದೂರ ಕಂಭಗಳ ಮೇಲೆ ಹೇರಿಸಿದ ಆ ತಂತಿಯ ಮಾರ್ಗವಾಗಿ ಹೋಗಿ, ಬಳಿಕ ಆಚೆ ಭೂಮಿಯೊಳಗೆ ಬಿಟ್ಟ ಕಬ್ಬಿಣತಗಡಿನಲ್ಲಿ ಶೇರಿ, ಇದರಿಂದ ಭೂಮಾರ್ಗವಾಗಿ ನೆಟ್ಟಗೆ ಈಚೆ ಭೂಮಿಯೊಳಗೆ ಇರುವ ಕಬ್ಬಿಣತಗಡಿಗೆ ಬಂದು, ಇದರಿಂದ ಪಾತ್ರೆಯೊಳಗಿನ ಸತುತಗಡಿಗೆ ಬಂದು, ಇದರಿಂದ ಹೊರಟ ತಾಂಬ್ರತಗಡಿಗೆ ತಿರಿಗಿ ಹೋಗುವದು. ವಿದ್ಯುತ್ಶಕ್ತಿಯ ಈ ತಿರುಗ್ಯಾಟವನ್ನು ಚಂದಾಗಿ ತಿಳುಕೊಳ್ಳಿರಿ! ಈ ಪರೀಕ್ಷೆಯನ್ನು ಉದ್ದ ತಂತಿಯಿಂದ ಮಾಡ ಬೇಕಾದರೆ ಒಂದೇ ಕಾಂಜಿನ ಪಾತ್ರೆಯೂ ಒಂದೇ ಸತುತಗಡೂ ಒಂದೇ ತಾಂಬ್ರತಗಡೂ ಸಾಲುವದಿಲ್ಲ, ಅನೇಕ ಕೂಡಿಸಿಡ ಬೇಕು; ಇವುಗಳ ಸಂಗವು ಬತೇರಿ ಎಂತ ಹೇಳುತ್ತಾರೆ.

ಈ ತಿರುಗ್ಯಾಟದ ಹೊರ್ತಾಗಿ ಆ ವಿದ್ಯುತ್ಶಕ್ತಿಯಲ್ಲಿ ಆಕರ್ಷಕ್ಷೇಪಣಲಕ್ಷಣವು ಅದೆ. ಇದನ್ನು ಈಗ ಒಂದು ಚಿತ್ರದ ಮೇಲೆ ಸ್ವಲ್ಪ ತೋರಿಸುವ —



ಈ ಚಿತ್ರದಲ್ಲಿ ೪ ಎಂಬದು ಬತೇರಿಯ ಎಡಗಡೆಯ ಕಡೇ ಸತುತಗಡಿನಿಂದ ಬಂದ ಒಂದು ತಂತಿಯ ಭಾಗವು; ಬತೇರಿಯ ಈ ಎಡಗಡೆಯ ಕಡೇ ಸತುತಗಡು ಬತೇರೀ ವಿಜಾತಿಯ ತುದಿ ಎಂದು, ಇನ್ನು ಮುಂದೆ ಹೇಳುವ. ೩ ಎಂಬದು ಬತೇರಿಯ ಬಲಗಡೆಯ ಕಡೇ ತಾಂಬ್ರತಗಡಿನಿಂದ ಬಂದ ಒಂದು ತಂತಿಯ ಭಾಗವು; ಈ ತಾಂಬ್ರತಗಡಿನ ಹೆಸರು ಸಜಾತಿಯ ತುದಿ ಎಂದು, ಹೇಳುತ್ತಾ ಹೋಗುವ.

೪ ಎಂಬ ಆ ತಂತಿಯು ೬ ಎಂಬ ಒಂದು ಕಬ್ಬಿಣಗಾಲಿಗೆ ಹಚ್ಚಿ ಅದೆ; ಅದರಂತೆ ೩ ಎಂಬದು ೫ ಎಂಬ ಮತ್ತೊಂದು ಕಬ್ಬಿಣಗಾ

ಲಿಗೆ ಹಚ್ಚಿ ಅದೆ. ಆ ಎರಡು ಕಬ್ಬಿಣಗೋಲುಗಳು ೨ ಎಂಬ ತಂತೀ ಮುಖಾಂತ್ರದಿಂದ ಕೂಡುತ್ತವೆ. ಈ ನಡುತಂತಿಯ ಕೆಳಗೆ ೧ ಎಂಬ ದಿಕ್ಕು ತೋರಿಸುವ ಸೂಜಿಗಲ್ಲಿನ ಕಡ್ಡಿ ಕಾಣುತ್ತದೆ. ೩ ಎಂಬ ತಂತಿಯಲ್ಲಿ ವಿದ್ಯುತ್ಶಕ್ತಿಯನ್ನು ಸಜಾತೀ ತುದಿಯಿಂದ ಹೋಗ ಬಿಟ್ಟರೆ ಶಕ್ತಿಯು ೫ ಎಂಬ ಕೋಲಿನಲ್ಲಿ ಶೇರಿ, ೨ ಎಂಬ ತಂತಿ ದಾಟಿ, ೬ ಎಂಬ ಕೋಲಿನಲ್ಲಿ ಶೇರಿ, ೪ ಎಂಬ ತಂತಿಯಲ್ಲಿ ಪ್ರವೇಶಿಸಿ, ಬತೇರಿಗೆ ತಿರುಗುತ್ತದೆ. ಆದರೆ ಅಷ್ಟರೊಳಗೆ ಏನಾಯಿತು ಅಂದರೆ — ಆ ಸೂಜಿಗಲ್ಲಿನ ಕಡ್ಡಿಯು ಬಂದ ಶಕ್ತಿಗಾಗಿ ತನ್ನ ದಿಕ್ಕು ಬಿಟ್ಟು, ತನ್ನ ಬಲದ ತುದಿಯನ್ನು ಎಡಗಡೆಗೆ ತಿರುಗಿಸಿ, ತೋರಿಸಿತು. ಆ ಮೇಲೆ ೩ ಎಂಬ ತಂತಿಯ ಭಾಗವನ್ನು ತೆಗೆದು ಕೊಂಡು, ೬ ಎಂಬ ಕೋಲಿಗೆ ಹಚ್ಚಿ, ೪ ಎಂಬ ತಂತಿಯ ಭಾಗವನ್ನು ತಕ್ಕೊಂಡು, ೫ ಎಂಬ ಕೋಲಿಗೆ ಹಚ್ಚಿ, ಹೀಗೆ ಸಜಾತಿಯ ಮತ್ತು ವಿಚಾತಿಯ ತುದಿಗಳನ್ನು ಬದಲಾಯಿಸಿ, ಮತ್ತು ವಿದ್ಯುತ್ಶಕ್ತಿಯನ್ನು ಸುತ್ತಾಡ ಬಿಟ್ಟರೆ ಏನಾಗುತ್ತದಂದರೆ — ತನ್ನ ದಿಕ್ಕು ತಿರಿಗಿ ಹಿಡುಕೊಂಡ ಆ ಸೂಜಿಗಲ್ಲಿನ ಕಡ್ಡಿಯು ತನ್ನ ಎಡದ ತುದಿಯನ್ನು ಬಲಗಡೆಗೆ ತಿರುಗಿಸಿ, ತೋರಿಸಿ, ಶಕ್ತಿಯು ಬಿಟ್ಟು ಹೋದ ಮೇಲೆ, ಮುಂಚಿನಂತೆ ನಿಲ್ಲುತ್ತದೆ. ಈ ಪ್ರಕಾರವಾಗಿ ಆ ಸೂಜಿಯನ್ನು ಎಡಕ್ಕೂ ಬಲಕ್ಕೂ ಬೇಕಾದ ಹಾಗೆ ಆಡಿಸ ಬಹುದು. ಈ ಗೊತ್ತು ಮಿಂಚುಟಪ್ಪಾಲಿನ ಮೂಲವಾಗಿದೆ.

ಮಿಂಚುಟಪ್ಪಾಲಿನ ರೀತಿಯನ್ನು ಈಗ ಒಂದು ಚಿತ್ರದಿಂದ ವರ್ಣಿಸುವ. ವಿದ್ಯುತ್ಶಕ್ತಿಯಿಂದ ಸೂಜಿಗಲ್ಲಿನ ಕಡ್ಡಿಗಳನ್ನು (ಇನ್ನು ಮುಂದೆ ದಿಕ್ಕುಸೂಜಿ ಎಂದು ಹೇಳಿ ಬಿಡುವ) ಇತ್ತೂ ಅತ್ತೂ ಆಡಿಸುವದೇ ಅದರ ಮೂಲವೆಂದು, ಹೇಳಿ ಆಯಿತು. ಚನ್ನಪಟ್ಟಣದಲ್ಲಿ ಅಂಥ ಸೂಜಿ ಇದ್ದರೆ, ಮತ್ತು ಮಡಿಕೇರಿಯಿಂದ ಅದರ ಹತ್ತರ, ಮುಂಚೆ ವರ್ಣಿಸಿದ ರೀತಿಯಾಗಿ, ಒಂದು ತಂತಿಯು ಕಂಬಗಳ ಮೇಲೆ ಹೋಗಿದ್ದರೆ, ಮತ್ತು ಮಡಿಕೇರಿಯಲ್ಲಿಯ ಬತೇರಿಯಿಂದ ಆ ತಂತೀ ಮುಖವಾಗಿ ಆ ಸೂಜಿಗೆ ವಿದ್ಯುತ್ಶಕ್ತಿಯನ್ನು ಹೋಗಿಸಿದರೆ, ಆ ಸೂಜಿಯನ್ನು ಎಡಕ್ಕೂ ಬಲಕ್ಕೂ ಆಡಿಸ ಬಹುದು. ಇದರ ವಿವರವನ್ನು III ಎಂಬ ಚಿತ್ರದಲ್ಲಿ ನೋಡಿರಿ! —

III




ಆ ಎಂತ ಬರೆದ ಕಡೆಯಲ್ಲಿ ಮಡಿಕೇರಿ ಇರಲಿ, ಓ ಎಂತ ಬರೆದ ಕಡೆಯಲ್ಲಿ ಚನ್ನಪಟ್ಟಣ ಇರಲಿ. ೧—೧ ಎಂತ ಬರೆದ್ದು ಮಡಿಕೇರಿಯ ಬತೇರಿಯ ಪಾತ್ರೆ; ತ ಎಂಬದು ಇದರ ವಿಜಾತೀ ತುದಿಯ ಸತುತಗಡು, ತಾ ಎಂಬದು ಅದರ ಸಜಾತೀ ತುದಿಯ ತಾಂಬ್ರತಗಡು; ಅ ಎಂಬದು ಸಜಾತೀ ತುದಿ, ಇ ಎಂಬದು ವಿಜಾತೀ ತುದಿ; ಅ ಎಂಬ ತುದಿಯಿಂದ ಒಂದು ತಂತಿಯು ೨—೨ ಎಂಬ ತೆರೆದಿರುವ ಪೆಟ್ಟಿಯ ಲ ಎಂಬ ಲೋಹಕುಂಡಿಗೆ ಹೋಗುತ್ತದೆ; ೧೧ ಎಂಬದು ಇತ್ತಲೂ ಅತ್ತಲೂ ಚಿಸ ಬಹುದಾದ ಲೋಹದಿಂದ ಮಾಡಿದ ಒಂದು ಕೈ, ಇದು ಈ ಚಿತ್ರದಲ್ಲಿ ಲ

ಎಂಬ ಲೋಹದ ತುಂಡಿಗೆ ಮುಟ್ಟಿಸಿ ಇದೆ; ಮೇಲಗಡೆ ೧೧ ಎಂಬ ಕೈಗೆ ೧೨ ಎಂಬ ತಂತಿಯು ಹಚ್ಚಿ ಅದೆ; ಹಾಗಾದರೆ ಅ ಎಂಬ ಸಜಾತೀ ತುದಿಗೂ ೧೨ ಎಂಬ ತಂತಿಗೂ ವಿದ್ಯುಚ್ಛಕ್ತಿಯು ಹೋಗ ಬಹುದಾದ ಪ್ರೇರಕ ವಸ್ತುಗಳ ದಾರಿಯು ಅದೆ, ಅಥವಾ ಆ ತಂತಿಯು ಅ ಎಂಬ ತುದಿಗೆ ಮುಟ್ಟಿದ ಹಾಗಾಯಿತು.

೧೨ ಎಂಬ ತಂತಿಯು ಚನ್ನಪಟ್ಟಣದ ಕಡೆಗೆ ಕಂಬಗಳ ಮೇಲೆ ಹೇರಿಸಿ ಇದ್ದು ಹೋಗಿ, ೪ ಎಂಬಲ್ಲಿ ೩ ಎಂದು ಬಲಗಡೆ ಬರೆದಿರುವ ಪೆಟ್ಟಿಗೆಯೊಳಗೆ ಶೇರಿ, ಮತ್ತು ಎಲ್ಲಿಗೆ ಹೋಗುತ್ತದಂದರೆ — ಅದು (ಇಲ್ಲಿಯ ಚಿಕ್ಕ IV ಎಂಬ ಚಿತ್ರದಲ್ಲಿ ಕಾಣುವ ಪ್ರಕಾರ) ಕ ಎಂಬಲ್ಲಿ — ಆ ಬಾಣವು ತೋರಿಸುವಂತೆ — ಬಂದು, ಮೇಲ್ಗಡೆ ೧ ಎಂದೂ ಕೆಳಗಡೆ ೨ ಎಂದೂ ಬರೆದಿರುವ ದಿಕ್ಸೂಚಿಯನ್ನು ಮುಟ್ಟದಲೇ ಸುತ್ತುತ್ತಾ ಸುತ್ತುತ್ತಾ ಹೋಗಿ, ಬಳಿಕ — ಮತ್ತೊಂದು ಬಾಣವು ತೋರಿಸುವಂತೆ — ಕಾ ಎಂಬ ಹೆಸರಾಗಿ ಮುನ್ನಡೆದು, ಕೆಳಯಕ್ಕೆ ತಿರುಗಿ ಕೊಂಡು, ೨ — ೨ ಎಂಬ (ದೊಡ್ಡ ಚಿತ್ರದ) ಪೆಟ್ಟಿಗೆ ದಾಟಿ, ಭೂಮಿಯೊಳಗೆ ಹೋಗಿ ಶೇರುತ್ತದೆ. ಭೂಮಿಯೊಳಗೆ ಅದಕ್ಕೆ

IV




೭ ಎಂಬ ಕಬ್ಬಿಣದ (ಅಥವಾ ಬೆರೆ ಲೋಹದ) ತಗಡು ಹಚ್ಚಿ ಅದೆ. ನೀವು ಇಲ್ಲಿಯ ಚಿಕ್ಕ ಚಿತ್ರವನ್ನು ತಿರಿಗಿ ನೋಡಿದರೆ, ಅದರಲ್ಲಿ ಮೇಲ್ಗಡೆ ೧ ಎಂದೂ ಕೆಳಗಡೆ ೨ ಎಂದೂ ಬರೆದಿರುವ ದಿಕ್ಸೂಚಿಯು ತಂತೀ ಸುತ್ತುಗಳೊಳಗೆ ಇರುವದಲ್ಲದೆ, ಹೊರಗೆ ಎಡಗಡೆಯಲ್ಲಿ ಮೇಲೆ ೨ ಎಂದೂ ಕೆಳಗೆ ೧ ಎಂದೂ ಬರೆದಿರುವ ಮತ್ತೊಂದು ಅದೆ. ಈ ಎರಡು ದಿಕ್ಸೂಚಿಗಳಿಗೆ ಒಂದೇ ಅಚ್ಚು ಉಂಟು, ಮತ್ತು ಒಳಗಿನದು ಆಡುವಂತೆ ಹೊರಗಿನದು ಸಹಾ ಆ ಅಚ್ಚಿನ ಮುಖಾಂತ್ರವಾಗಿ ಆಡುವದು. ಮೇಲೆ ೧ ಎಂದೂ ಕೆಳಗೆ ೨ ಎಂದೂ ಬರೆದಿರುವ ದಿಕ್ಸೂಚಿಯು ತಂತೀ ಸುತ್ತುಗಳ ಸಂಗಡ ೩ ಎಂಬ (ದೊಡ್ಡ ಚಿತ್ರದ) ಪೆಟ್ಟಿಗೆಯೊಳಗೆ ಅದೆ, ಆ ಮತ್ತೊಂದು ದಿಕ್ಸೂಚಿಯು ಪೆಟ್ಟಿಗೆಯ ಹೊರಗೆ ಅದೆ; ೩ ಎಂಬ ಪೆಟ್ಟಿಗೇ ಹೊರಗೆ ೫ ಎಂದು ಬರೆದಿರುವ ಸೂಚಿಯು ಇದೇ.

ಮಡಿಕೇರಿಯಲ್ಲಿಯ ಅ ಎಂಬ ಸಜಾತೀ ತುದಿಯಿಂದ ತಂತಿಯು ಚನ್ನಪಟ್ಟಣಕ್ಕೆ ಹೋಗಿ, ಅಲ್ಲಿ, ದಿಕ್ಸೂಚಿಯನ್ನು ಸುತ್ತಿದ ಮೇಲೆ, ಭೂಮಿಯೊಳಗೆ ಹೋ

ದದ್ದು ಗೊತ್ತಾಯಿತು. ಈಗ ಬತೇರಿಯ ಇ ಎಂಬ ವಿಜಾತೀ ತುದಿಯಿಂದ ತಂತಿಯು ಮುಂದಕ್ಕೆ ಹೋಗುವದನ್ನು ನೋಡುವ—

ಈ ತಂತಿಯು ಇ ಎಂಬ ವಿಜಾತೀ ತುದಿಯಿಂದ ಹೊರಟು, ೨—೨ ಎಂಬ ತೆರೆದಿರುವ ಪೆಟ್ಟಿಗೆಯ ೧೦ ಎಂಬ ಲೋಹತುಂಡಿಗೆ ಹೋಗಿ, ಹಚ್ಚಿ ಅದೆ; ಈ ತುಂಡಿಗೆ ೯ ಎಂಬ ಇತ್ತೂ ಅತ್ತೂ ಆಡುವ ಲೋಹಹಗ್ಗೈಯು ಮುಟ್ಟಿಸಿ ಅದೆ; ಈ ಲೋಹಹಗ್ಗೈಯಿಂದ ಒಂದು ತಂತಿಯು ಇಳಿದು, ಭೂಮಿಯೊಳಗೆ ಹೋಗಿ ಅದೆ; ಇದರೊಳಗೆ ಅದಕ್ಕೆ ೭ ಎಂಬ ಕಬ್ಬಿಣದ (ಅಥವಾ ಬೇರೆ ಲೋಹದ) ತಗಡು ಜೋಡಿಸಿ ಅದೆ. ಹಾಗಾದರೆ ಇ ಎಂಬ ವಿಜಾತೀ ತುದಿಗೆ ಹಚ್ಚಿದ ತಂತಿಯು ಪ್ರೇರಕ ವಸ್ತುಗಳ ಮುಖಾಂತರ ಭೂಮಿಯೊಳಗೆ ಶೇರಿದ ಹಾಗಾಯಿತು.

ಈಗ ಮಡಿಕೇರಿಯಲ್ಲಿರುವ ೨—೨ ಎಂಬ ತೆರೆದಿರುವ ಪೆಟ್ಟಿಗೆಯನ್ನು ನೋಡಿರಿ; ಇದರೊಳಗಿನ ಯಂತ್ರದ ಹೆಸರು ಪರಿಣಾಮಕಯಂತ್ರ (=ಬದಲಾಯಿಸುವ ಯಂತ್ರ) ಎಂತ ಅದೆ. ೧೧ ಎಂಬ ದೊಡ್ಡ ಕೈಯು ಚಿತ್ರದಲ್ಲಿ ೮ ಎಂಬ ಲೋಹತುಂಡಿಗೆ ಮುಟ್ಟಿಸಿ ಅದೆ, ಅದರಂತೆ ೯ ಎಂಬ ಚಿಕ್ಕ ಕೈಯು ೧೦ ಎಂಬ ಲೋಹತುಂಡಿಗೆ ಮುಟ್ಟಿಸಿ ಅದೆ; ಒಂದೊಂದು ಕೈಯನ್ನು ಒಂದೊಂದು ತುಂಡಿನಿಂದ ತಪ್ಪಿಸಿದರೆ ಬತೇರಿಯಿಂದ ವಿದ್ಯುಚ್ಛಕ್ತಿಯು ಹೊರಟು ಹೋಗುವದಿಲ್ಲ. ಆದರೆ ನಮ್ಮ ಚಿತ್ರದಲ್ಲಿ ಹ್ಯಾಗದೆ ಎಂದರೆ: ಅ ಎಂಬ ಸಜಾತೀ ತುದಿಯಿಂದ ಶಕ್ತಿಯು—ಬಾಣವು ತೋರಿಸುವಂತೆ—ಹೊರಟು, ೮ ಮತ್ತು ೧೧ ಎಂಬ ಪ್ರೇರಕ ವಸ್ತುಗಳು ಒಂದಕ್ಕೊಂದು ಮುಟ್ಟಿರುವ ಪರಿಣಾಮಕಯಂತ್ರವ ದಾಟಿ,—ಬಾಣಗಳು ತೋರಿಸುವಂತೆ—೧೨ ಎಂಬ ತಂತಿಯಲ್ಲಿ ಮುನ್ನಡೆದು, ೪ ಎಂಬ ಯುಗದಿಕ್ಕುಸೂಜಿಯನ್ನು (ಯುಗ=ಜೋಡು) ಎಡಕ್ಕೆ ತಿರುಗಿಸಿ, ಭೂಮಿಗೆ ಹೋಗಿ, ೭ ಎಂಬ ತಗಡಿನಿಂದ ೭ ಎಂಬ ತಗಡಿಗೆ ಭೂಮಾರ್ಗವಾಗಿ ಬಂದು, ೯ ಮತ್ತು ೧೦ ಎಂಬ ಪ್ರೇರಕ ವಸ್ತುಗಳು ಒಂದಕ್ಕೊಂದು ಮುಟ್ಟಿರುವ ಪರಿಣಾಮಕಯಂತ್ರವ ದಾಟಿ, ಇ ಎಂಬ ವಿಜಾತೀ ತುದಿಗೆ ತಿರಿಗಿ ಬಂದ ಹಾಗಾಯಿತು. ಶಕ್ತಿಯ ಈ ತಿರಿಗ್ಯಾಟದಿಂದ ಚನ್ನಪಟ್ಟಣದಲ್ಲಿಯ ದಿಕ್ಕುಸೂಜಿಯು ಅಲ್ಲಿಯವರಿಗೆ ಒಮ್ಮೆ ಎಡಗಡೆಗೆ ತಿರುಗಿದ್ದು ಕಂಡಿತಲ್ಲವೋ?

ಆದರೆ ಆ ಸೂಜಿಯು ಬಲಗಡೆಗೆ ತಿರುಗುವದು ಸಹ ಅವಶ್ಯವಾಗಿದೆ; ಇದು ಹ್ಯಾಗಾಗುತ್ತದಂದರೆ—ಪರಿಣಾಮಕಯಂತ್ರದ ೧೧ ಎಂಬ ಕೈಯನ್ನು ಎಡಕ್ಕೆ ಸರಿಸಿ, ೧೦ ಎಂಬ ತುಂಡಿಗೆ ಮುಟ್ಟಿಸಿ, ಮತ್ತು ೯ ಎಂಬ ಕೈಯನ್ನು ಬಲಕ್ಕೆ ಸರಿಸಿ, ೮ ಎಂಬ ತುಂಡಿಗೆ ಮುಟ್ಟಿಸಿದರೆ, ಶಕ್ತಿಯು ಸಜಾತೀ ತುದಿಯಾದ ಅ ಎಂಬಲ್ಲಿಂ

ದ ಹಾರಟು, ೮ ಎಂಬ ತುಂಡಿನಲ್ಲಿ ಶೇರಿ, ಇದಕ್ಕೆ ಮುಟ್ಟಿಸಿರುವ ೯ ಎಂಬ ಕೈಯಲ್ಲಿ ಬಂದು, ಇದಕ್ಕೆ ಹಚ್ಚಿರುವ ತಂತಿಯಲ್ಲಿ ಶೇರಿ, ಭೂಮಿಯೊಳಗೆ ಇಳಿದು, ೭ ಎಂಬ ತಗಡಿನಲ್ಲಿ ಪ್ರವೇಶಿಸಿ, ಇದರಿಂದ ಭೂಮಾರ್ಗವಾಗಿ ಎಡಗಡೆಯ ೬ ಎಂಬ ತಗಡಿಗೆ ಹೋಗಿ, ಇದರಿಂದ ಏರಿ, ೩ ಎಂಬ ಪೆಟ್ಟಿಗೆಯೊಳಗೆ ಹೋಗಿ, ತಂತೀ ಸುತ್ತುಗಳನ್ನು ದಾಟುತ್ತಾ ದಿಕ್ಕು ಸೂಜಿಯನ್ನು ಬಲಗಡೆಗೆ ತಿರುಗಿಸಿ, ೪ ಎಂಬಲ್ಲಿ ಪೆಟ್ಟಿಗೆಯೊಳಗಿಂದ ಹಾರಟು, ೧೨ ಎಂಬ ತಂತಿಯಲ್ಲಿ ೧೧ ಎಂಬ ದಾಂಡ್ಗ ಕೈಗೆ ಬಂದು, ಇದು ಮುಟ್ಟಿಸಿರುವ ೧೦ ಎಂಬ ತುಂಡಿಗೆ ಬಂದು, ಇದರಿಂದ ಬತೇರಿಯ ಇ ಎಂಬ ವಿಜಾತೀ ತುದಿಗೆ ಶೇರುತ್ತದೆ. ಈ ಪ್ರಕಾರವಾಗಿ ಸೂಜಿಯನ್ನು ಬಲಗಡೆಗೆ ತಿರುಗಿಸುವ ವಿದ್ಯುತ್ಶಕ್ತಿಯು ಸುತ್ತಾಡುತ್ತದೆ.

ಶಕ್ತಿಯನ್ನು ಒಮ್ಮೆ ಹೀಗೆ, ಒಮ್ಮೆ ಹಾಗೆ ನಡಿಸುವದಕ್ಕಾಗಿ ಪರಿಣಾಮಕಯಂತ್ರದ ಪೆಟ್ಟಿಗೆಯ ಹಾರಗಡೆಯಲ್ಲಿ ಒಂದು ಹಿಡಿಯು ಅದೆ. ಇದು ಚನ್ನಪಟ್ಟಣವಿರುವಲ್ಲಿ ೨—೨ ಎಂಬ ಪೆಟ್ಟಿಗೆಯಲ್ಲಿ ೬ ಎಂಬ ಹೆಸರಾಗಿ ಕಾಣುತ್ತದೆ. ಈ ಹಿಡಿಯು ಪರಿಣಾಮಕಯಂತ್ರದ ವಸ್ತುಗಳಿಗೆ ತಕ್ಕ ಹಾಗೆ ಹಚ್ಚಿ ಅದೆ, ಮತ್ತು ಅದನ್ನು ತಿರುಗಿಸುವ ಪ್ರಕಾರ ವಿದ್ಯುತ್ಶಕ್ತಿಯು ವಿವರಿಸಿದ ದಾರಿಗಳಲ್ಲಿ ಒಂದನ್ನು ಹಿಡು ಕೊಳ್ಳುತ್ತದೆ.

ಆದರೆ ಟಪ್ಪಾಲು ಯಂತ್ರವೆಲ್ಲಿ? ಎಂತ ಒಬ್ಬನು ಕೇಳ್ಯಾನು. ಅದೇ ವರ್ಣಿಸಿ ಆಯಿತು ಎಂತ ಉತ್ತರ ಕೊಡ ಬೇಕು. ಹ್ಯಾಗಂದರೆ — ಮಡಿಕೇರಿಯ ಯಂತ್ರಗಾರನು ಚನ್ನಪಟ್ಟಣದ ದಿಕ್ಕುಸೂಜಿಯನ್ನು ಒಮ್ಮೆ ಹೀಗೆ ಒಮ್ಮೆ ಹಾಗೆ ತಿರುಗಿಸುವದು ಒಂದು ನೇಮಕದ ಮೇಲೆ ಆಗುತ್ತದೆ; ಮತ್ತು ಈ ನೇಮಕದ ಮೇಲೆ ಆ ಸೂಜಿಯ ತಿರುಗ್ಯಾಟವು ಅರ್ಥದ್ದಾಗುತ್ತದೆ. ಹ್ಯಾಗಂದರೆ — ಆ ಸೂಜಿಯು ಒಮ್ಮೆ ಎಡಕ್ಕೆ ತಿರುಗಿದರೆ ಒಂದು ಅಕ್ಷರವಾಯಿತು, ಎರಡು ಸಾರಿ ಎಡಕ್ಕೆ ತಿರುಗಿದರೆ ಮತ್ತೊಂದು ಅಕ್ಷರವಾಯಿತು, ಒಂದು ಸಾರಿ ಎಡಕ್ಕೆ ಒಂದು ಸಾರಿ ಬಲಕ್ಕೆ ತಿರುಗಿದರೆ ಬೇರೊಂದು ಅಕ್ಷರವಾಯಿತು; ಈ ಪ್ರಕಾರದಿಂದ ಸೂಜೀ ಬೇರೆ ಬೇರೆ ಆಟದ ಮೇಲೆ ಸಕಲ ಅಕ್ಷರಗಳನ್ನು ನೇಮಿಸಿದ್ದಾರೆ. ಈ ಅಕ್ಷರಗಳು ಯಂತ್ರಗಾರರಿಗೆ ಚಂದಾಗಿ ಗೊತ್ತವೆ. ಮಡಿಕೇರಿಯ ಯಂತ್ರಗಾರನಿಗೆ ತಿಳಿಸುವ ಮಾತುಗಳನ್ನೆಲ್ಲ ಇವನು ವಿವರಿಸಿದ ತರವಾಗಿ ಚನ್ನಪಟ್ಟಣದ ಯಂತ್ರಗಾರನಿಗೆ ಒಂದು ಕ್ಷಣದಲ್ಲಿ ತಿಳಿಸಿದ ಮೇಲೆ ಇವನು ಸಾಧಾರಣ ಅಕ್ಷರದಿಂದ ಕಾಗದದಲ್ಲಿ ಬರೆದು, ಚನ್ನಪಟ್ಟಣದಲ್ಲಿ ಬೇಕಾದವನಿಗೆ ಮುಟ್ಟಿಸುತ್ತಾನೆ.

ಹೀಗೆ ಮಿಂಚಿನ ಟಪ್ಪಾಲಿನ ಮಾತುಗಳನ್ನು ಹೇಳಿ ಕಳುಹಿಸುವದು ಕ್ಷಣದ್ದೇ. ಹ್ಯಾಗಂದರೆ ಆ ವಿದ್ಯುಚ್ಛಕ್ತಿಯು ಚಂದಾಗಿ ಹೇಳಲಾರದಷ್ಟು ಬೇಗ ಹೋಗಿ, ಸೂಜಿಯನ್ನು ಆಡಿಸಿ, ತಿರುಗಿ ಬರುತ್ತದೆ. ಅದಲ್ಲದೆ ಆ ಶಕ್ತಿಯು ಒಂದು ಹರದಾರಿಯಾಗಲಿ ಸಾವಿರಾರು ಹರದಾರಿಯಾಗಲಿ ನಡೆಯ ಬೇಕಾದರೆ ಒಂದೇ ಹಾತ್ತಿಗೆ ಹೋಗಿ ಬರುತ್ತದೆ. ಆ ಶಕ್ತಿಯು ಭೂಮಿಯ ಸುತ್ತಲು ನಡೆಯುವದಕ್ಕೆ, ೧ ನಿಮಿಷದ ೧೦ನೇ ಪಾಲು ಬೇಕಾಗುವದಿಲ್ಲ, ಇಷ್ಟು ಬೇಗ ನಡೆಯುತ್ತದೆ. ಆ ಶಕ್ತಿಯು ಭೂಮಿಯಿಂದ ಚಂದ್ರಕ್ಕೆ ಹೋಗುವದಕ್ಕೆ ಸಹ, ಒಂದು ನಿಮಿಷ ಬೇಕಾಗುವದು. ಹಾಗಾದರೆ ಈ ಮಿಂಚುಟಪ್ಪಾಲು ಹಾಗೆಬಂಟಿಗಿಂತ ಅತ್ಯಂತ ಬೇಗ ನಡಿಯುತ್ತದೆ.

ಮೇಲೆ ಮಡಿಕೇರಿಯಿಂದ ಚನ್ನಪಟ್ಟಣಕ್ಕೆ ಮಿಂಚುಟಪ್ಪಾಲಿನ ಮೇಲೆ ಸುದ್ದಿ ಹೋಗುವದನ್ನು ವರ್ಣಿಸಿದೆವು; ಚನ್ನಪಟ್ಟಣದಿಂದ ಮಡಿಕೇರಿಗೆ ಸುದ್ದಿ ಬರ ಬೇಕಾದರೆ ಚನ್ನಪಟ್ಟಣದಲ್ಲಿ ಸಹಾ ಒಂದು ಬತೇರಿಯೂ ಒಂದು ಪರಿಣಾಮಕಯಂತ್ರವೂ, ಮತ್ತು ಮಡಿಕೇರಿಯಲ್ಲಿ ಸಹಾ ಒಂದು ದಿಕ್ಕುಸೂಜಿಯು ಇರ ಬೇಕು.

ಮಿಂಚುಟಪ್ಪಾಲಿನ ತಂತಿಯನ್ನು ಸಮುದ್ರದೊಳಗೆ ಇಟ್ಟು, ಅದರಲ್ಲಿ ವಿದ್ಯುಚ್ಛಕ್ತಿಯನ್ನು ಈ ತೀರದಿಂದ ಆ ತೀರಕ್ಕೆ ನಡಿಸ ಬಹುದು. ಹಿಂದು ದೇಶದಿಂದ ವಿಲಾಯತಿಗೆ ಸಮುದ್ರಮಿಂಚುಟಪ್ಪಾಲನ್ನು ನಿರ್ಮಿಸಲಿಕ್ಕಾಗಿ, ಈಗ ಪ್ರಯತ್ನ ಪಡುತ್ತಿದ್ದಾರೆ.

ಮೇಲೆ ಬಣ್ಣಿಸಿದ ಮಿಂಚುಟಪ್ಪಾಲಿನ ವಿಷಯವಾಗಿ ಮತ್ತೊಂದು ಚಿತ್ರದ ವಿವರವನ್ನು ಕೂಡಿಸ ಬೇಕು; ಹ್ಯಾಗಂದರೆ ಕೆಲವು ವರುಷದಿಂದ ದಿಕ್ಕುಸೂಜೀ ತಿರುಗ್ಯಾಟದ ಯಂತ್ರಕ್ಕೆ ಬದಲಾಗಿ ಒಂದು ಬರೆಯುವ ಯಂತ್ರವನ್ನು ಇಡುತ್ತಾ ಬರುತ್ತಾರೆ; ಇದನ್ನು ಇಟ್ಟರೆ ಪರಿಣಾಮಕಯಂತ್ರವೂ ಬೇಡ, ಇದಕ್ಕೆ ಬದಲಾಗಿಯೂ ಮತ್ತೊಂದನ್ನು ಇಡ ಬೇಕು.

ಇಲ್ಲಿ ಕಾಣುವ ಯಂತ್ರವು ಬೆಂಗಳೂರಿನಲ್ಲಿರಲಿ. ಬಲಗಡೆಯಲ್ಲಿ ನಿಮಗೆ ಗೊತ್ತಾಗಿರುವ ಬತೇರಿ ಅದೆ; ೬—೭ ಎಂತ ಬರೆದದ್ದು ಪರಿಣಾಮಕಯಂತ್ರಕ್ಕೆ ಬದಲಿಗೆ ಬಂದ ಬೀಗಗೈಯು ಎಂಬ ಯಂತ್ರವು; ಎಡಗಡೆ ಇರುವಂಥಾದ್ದು ಲೇಖನ ಯಂತ್ರವು (ಲೇಖನ=ಬರೆಯುವ). ಆ ಬೀಗಗೈಗೆ ೧ ಎಂಬ ಸಜಾತೀ ತುದಿಯಿಂದ ಮತ್ತು ೨ ಎಂಬ ವಿಜಾತೀ ತುದಿಯಿಂದ ತಂತಿಗಳು ಹೋಗುತ್ತವೆ; ೩ ಎಂಬದು ಸಜಾತಿಯದು; ೭ ಎಂಬದಕ್ಕೆ ಹಚ್ಚಿರುವ ೪ ಎಂಬದು ವಿಜಾತಿಯದು; ಆ ಬೀಗಗೈಯ ಕೆಳಗಿನ ಪಟ್ಟಿಯ ಮೇಲೆ ಕಾಣುವ ಎಡದ ಮತ್ತು ಬಲದ ಚಿಕ್ಕ ಲೋಹ ತುಂಡುಗಳಲ್ಲಿ ಆ ಎರಡು ತಂತಿಗಳ ತುದಿಯು ಬಂದು ಕೂಡ್ರಿಸಿ ಅದೆ; ಆ ಪಟ್ಟಿ



ಯು ತಾನೇ ಮರದ್ದು; ಇದರಲ್ಲಿ ಬಿಗಿದಿರುವ ಒಂದು ಕೋಲಿನ ಅಚ್ಚಿನಲ್ಲಿ ೬ ಎಂಬ ಆ ಲೋಹಬೀಗಗೈಯು ತೂಗ ಹಾಕಿ ಅದೆ; ಇದರ ಹಿಡಿಯು ಅಪ್ರೇರಕ ವಸ್ತುವಾದ ಕಾಂಜಿನದು.—ನಮ್ಮ ಚಿತ್ರದಲ್ಲಿ ಸಜಾತೀ ತಂತಿಯ ತುದಿಗೆ ಆ ಬೀಗಗೈಯ ಬಲಗಡೆಯು ಒತ್ತಿ ಅದೆ; ಅದು ಕಾರಣ ವಿದ್ಯುತ್ತಕ್ತಿಯು ಸುತ್ತ್ಯಾಡಲಿಕ್ಕೆ ಹೊರಟು, ೩ ಎಂಬ ತಂತೀ ಮುಖಾಂತರ ಏರಿ, ಬೀಗಗೈಯೊಳಗೆ ಶೇರಿ, ಇದನ್ನು ದಾಟಿ, ೮ ಎಂಬ ಚನ್ನಪಟ್ಟಣಕ್ಕೆ ಹೋಗುವ ತಂತಿಯಲ್ಲಿ ಮುನ್ನಡೆದು, ಅಲ್ಲಿರುವ ಯಂತ್ರಗಳನ್ನು ದಾಟಿ, ಭೂಮಿಗಿಳಿದು, ಅಲ್ಲಿಯ ತಗಡಿನಿಂದ ೯ ಎಂಬ (ನಮ್ಮ ಚಿತ್ರದಲ್ಲಿ ಕಾಣುವ) ತಗಡಿಗೆ ಬಂದು, ಏರಿ, ಲೇಖನಯಂತ್ರ ದಾಟಿ, ೫ ಎಂಬಲ್ಲಿ ಇದರಿಂದ ಹೊರಟು, ೨ ಎಂಬ ವಿಜಾತೀ ತುದಿಗೆ ಬರುತ್ತದೆ. (ಈ ಸುತ್ತ್ಯಾಟವು ಬಾಣಗಳಿಂದ ತೋರಿಸಿದೆ). ೧ ಎಂಬ ಸಜಾತೀ ತುದಿಯ ತಂತಿಗೆ ಒತ್ತಿದ ಬೀಗಗೈಯ ಬಲಗಡೆಯನ್ನು ಎತ್ತಿದರೆ ಶಕ್ತಿಯ ಸುತ್ತ್ಯಾಟ ನಿಲ್ಲುತ್ತದೆ. ಚನ್ನಪಟ್ಟಣದಿಂದ ಬೆಂಗಳೂರಿನಲ್ಲಿರುವ ನಮ್ಮ ಚಿತ್ರದ ಲೇಖನಯಂತ್ರದೊಳಗೆ ವಿದ್ಯುತ್ತಕ್ತಿಯು ಬಂದು ಬರೆಯುವ ತರವನ್ನು ಈಗ ತಿಳುಕೊಳ್ಳುವ!

ಇದಕ್ಕಾಗಿ ವಿದ್ಯುತ್ತಕ್ತಿಯ ಒಂದು ಪ್ರಕಾರವನ್ನು ಮೊದಲು ತಿಳಿಸ ಬೇಕು. ಆ ಶಕ್ತಿಯು ಒಂದು ಕಬ್ಬಿಣಗೋಲಿನಲ್ಲಿ ಬಂದು ಇರುವ ತನಕ, ಆ ಕೋಲಿಗೆ ಸೂಜಿಗಲ್ಲಿ

ನ ಸ್ವಭಾವ ಬಂದಿರುವದು; ಸೂಜಿಗಲ್ಲಿನ ಸ್ವಭಾವವು ಎರಡು ತರದ್ದು—ಲೋಹಗಳ ಆಕರ್ಷಣ ಮತ್ತು ಕ್ಷೇಪಣ; ನಾವು ಈಗ ನೆನಸುವಂಥಾದ್ದು ಆಕರ್ಷಣದ್ದು. ಹಾಗಾದರೆ ವಿದ್ಯುತ್ಶಕ್ತಿಯು ಬಂದಿರುವ ಕಬ್ಬಿಣಗೋಲು ತನ್ನ ಹತ್ತರ ಬಂದ ಲೋಹವನ್ನು ತನಗೆ ಹುಟ್ಟಿದ ಸೂಜಿಗಲ್ಲಿನ ತ್ರಾಣದ ಮೇಲೆ ಆಕರ್ಷಿಸುವದು; ಆದರೆ ವಿದುತ್ಶಕ್ತಿಯು ಕೋಲನ್ನು ಬಿಟ್ಟು ಹೋಗುವಾಗಲೇ ಆ ತ್ರಾಣವೂ ಹೋಗುತ್ತದೆ, ಮತ್ತು ಆ ಕೋಲು ತಾನು ಆಕರ್ಷಿಸಿದ ಲೋಹವನ್ನು ತಿರಿಗಿ ಬಿಡುತ್ತದೆ.

ಈ ಗೊತ್ತಿನ ಪ್ರಕಾರ ಲೇಖನಯಂತ್ರವನ್ನು ಬೇಗ ತಿಳಕೊಳ್ಳ ಬಹುದು. ೧೦ ಎಂಬದು ೫ ಎಂಬ ತಂತಿಯನ್ನು ಸುತ್ತಿ ಸುತ್ತಿ ಮಾಡಿದ ಒಂದು ಕೊಳವಿಯಾಗಿದೆ; ಕಡೇ ಸುತ್ತಿರುವಲ್ಲಿ ಆ ತಂತಿ ಹೊರಟು, ಭೂಮಿಗೆ ಇಳಿಯುತ್ತದೆ. ಆ ಕೊಳವಿಯೊಳಗೆ—ಕೊಳವಿಯ ಮೇಲೆ ಸ್ವಲ್ಪ ಕಾಣುವ—ಒಂದು ಕಬ್ಬಿಣಗೋಲು ನಿಲ್ಲಿಸಿ ಅದೆ; ೧೧ ಎಂಬದು ನಡುವೆಯಲ್ಲಿ ತ್ರಾಸುಗಂಭದಂತೆ ತೂಗ ಇಟ್ಟ ಕಟ್ಟಿಗೆಯ ತ್ರಾಸುಗೋಲು; ಇದರ ಬಲಗಡೆಯಲ್ಲಿ—ಕೊಳವಿಯೊಳಗಿನ ಕಬ್ಬಿಣಗೋಲಿನ ಮೇಲೆಯೇ—ಒಂದು ಲೋಹತುಂಡು ಹಚ್ಚಿ ಅದೆ; ಮತ್ತು ಎಡಗಡೆಯಲ್ಲಿ, ಅದರ ಬಾಗಿವ ತುಂಡಿರುವಲ್ಲಿ, ತ್ರಾಸುಗೋಲಿನಲ್ಲಿ ೧೨ ಎಂಬ ಒಂದು ಲೋಹಲೇಖಣಿ ಶಿಕ್ಕಿಸಿ ಅದೆ; ಇದಕ್ಕೆ ಸ್ವಲ್ಪ ಬಲಗಡೆ, ತ್ರಾಸುಗೋಲಿನ ಎಡಗಡೆಯು ಒಂದು ತಂತಿಸುತ್ತಿಗೆ ಹಚ್ಚಿ ಅದೆ; ಈ ತಂತಿಸುತ್ತು ಅದನ್ನು ಸ್ವಲ್ಪ ಕೆಳಯಕ್ಕೆ ಜಗ್ಗುತ್ತದೆ. ೧೪ ಎಂಬದು ತಮ ಅಚ್ಚಿನಲ್ಲಿ ತಿರುಗುವ ಎರಡು ಚಕ್ರಗಳನ್ನು ಹೊರುವ ಯಂತ್ರವು; ೧೩ ಎಂಬದು ತನ್ನ ಅಚ್ಚಿನಲ್ಲಿ ತಿರುಗುವ ಒಂದೇ ಚಕ್ರವನ್ನು ಹೊರುವ ಯಂತ್ರವು; ಈ ಚಕ್ರದ ಸುತ್ತಲು ಕಾಗದದ ಪಟ್ಟಿಯು ಸುತ್ತಿ ಸುತ್ತಿ ಅದೆ; ಈ ಕಾಗದ ಪಟ್ಟಿಯ ೧೬ ಎಂಬ ಒಂದು ಕಡೆಯು ೧೪ ಎಂಬ ಯಂತ್ರಕ್ಕೆ ಹೋಗಿ, ಈ ಯಂತ್ರದ ಚಕ್ರಗಳ ಪರಿಧಿಯು ಕೂಡುವಲ್ಲಿ ಶಿಕ್ಕಿಸಿ ಇದ್ದು, ೧೫ ಎಂಬ ಹೆಸರಾಗಿ ಹೊರಡುತ್ತದೆ; ೧೪ ಎಂಬ ಈ ಯಂತ್ರದ ಎರಡು ಚಕ್ರಗಳು (ನಮ್ಮ ಚಿತ್ರದಲ್ಲಿ ಕಾಣದ) ಒಂದು ಗಡಿಯಾರದಿಂದ ತಿರುಗಾಡ ಬಹುದು, ಅಂಥಾ ಸಮಯದಲ್ಲಿ ೧೩ ಎಂಬ ಚಕ್ರದಿಂದ ಉಚ್ಚುವ ಕಾಗದ ಪಟ್ಟಿಯು ೧೫ ಎಂಬಲ್ಲಿ ಎಡಕ್ಕೆ ಮುನ್ನಡಿಯುತ್ತಿರುವದು.

ಈ ವಿವರದಿಂದ ಬರೆಯುವ ತರವು ತಿಳಿಯುತ್ತದೆ; ಹ್ಯಾಗಂದರೆ—ಚನ್ನಪಟ್ಟಣದಲ್ಲಿಯ ಯಂತ್ರಗಾರನು ವಿದ್ಯುತ್ಶಕ್ತಿಯನ್ನು ಕಳುಹಿಸಿದರೆ, ಇದು ೮ ಎಂಬ ತಂತಿಯಲ್ಲಿ ಬಂದು,—(ನಮ್ಮ ಚಿತ್ರದಲ್ಲಿ ಈಗ ಬೀಗಗೈಯ ಎಡಗಡೆಯು ೭ ಎಂಬ ತಂತಿಯ ತುದಿಗೆ ಒತ್ತಿರ ಬೇಕು)—ಬೀಗಗೈಯನ್ನು ದಾಟಿ, ೭ ಎಂಬ ತಂತೀ ಮಾರ್ಗವಾಗಿ ೫ ಎಂಬಲ್ಲಿಗೆ ಹೋಗಿ, ೧೦ ಎಂಬ ಕೊಳವಿಗೆ ಹೋಗಿ, ಇದರೊಳಗಿನ

ಕಬ್ಬಿಣಗಾಲಿಗೆ ಆಕರ್ಷಣಶಕ್ತಿ ಣವ ಕೊಟ್ಟ ಮೇಲೆ, ಈ ಕೋಲು ೧೧ ಎಂಬ ತ್ರಾಸು ಗಾಲಿನ ತನ್ನ ಮೇಲ್ಗಡೆ ಇರುವ ಲೋಹತುಂಡಿನ ಸಂಗಡ ತ್ರಾಸುಗಾಲಿನ ಬಲ ಗಡೆಯನ್ನು ತನ್ನ ಕಡೆಗೆ ಎಳ ಕೊಳ್ಳುತ್ತದೆ. ಇದರಿಂದ ತ್ರಾಸುಗಾಲಿನ ಎಡಗಡೆ ಯು ಏರಿ, ೧೨ ಎಂಬ ಲೇಖಣಿಯನ್ನು ತನ್ನ ಮೇಲಿನ ಕಾಗದಪಟ್ಟಿಗೆ ಒತ್ತಿ, ಇದರ ಲ್ಲಿ ಒಂದು ಗುರುತು ಮಾಡುತ್ತದೆ. ಚನ್ನಪಟ್ಟಣದ ಯಂತ್ರಗಾರನು ವಿದ್ಯುಚ್ಛಕ್ತಿಯ ನ್ನು ಬಿಡದೆ ಕಳುಹಿಸುತ್ತಾ ಇದ್ದರೆ, ಅದು ಮಾಡುವ ಗುರುತು ಒಂದು ಗೆರೆಯು ಆಗುತ್ತದೆ; ಆದರೆ ಅವನು ಅದನ್ನು ಕ್ಷಣಕ್ಕೆ ನಡಿಸಿ ನಿಲ್ಲಿಸಿ ಬಿಟ್ಟರೆ, ಸೊನ್ನೆಯ ಗುರು ತು ಆಗುತ್ತದೆ. ಈ ಸೊನ್ನೆಗಳ ಮತ್ತು ಗೆರೆಗಳ ಮೇಲೆ ಒಂದು ಅಕ್ಷರಮಾಲೆಯ ನ್ನು ನೇಮಿಸಿದ್ದಾರೆ, ಇದನ್ನು ಇಲ್ಲಿ ಛಾಪಿಸಿ ಬಿಡುವ—

| | | | | |
|---|---|---|---|---|
| A .— | J .——— | S ... | | |
| B —... | K —.— | T — | Numerals | |
| C —.—. | L .—.. | U ..— | 1 .———— | 6 —.... |
| D —.. | M —— | V ...— | 2 ..——— | 7 ——... |
| E . | N —. | W .—— | 3 ...—— | 8 ———.. |
| F ..—. | O ——— | X —..— | 4 ....— | 9 ————. |
| G ——. | P .——. | Y —.—— | 5 ..... | 10 ————— |
| H .... | Q ——.— | Z ——.. | | |
| I .. | R .—. | &c.... | | |

ಈ ಅಕ್ಷರಮಾಲೆಯನ್ನು ನೇಮಿಸಿ, ಬೇಕಾದ ಸುದ್ದಿಯನ್ನು ಆ ಕಾಗದಪಟ್ಟಿ ಗೆ ಯಂತ್ರಮುಖಾಂತರವಾಗಿ ಬರಿಸ ಬಹುದು; ಆ ಮೇಲೆ ಆ ಅಕ್ಷರಗಳನ್ನು ಬಲ್ಲ ವನೊಬ್ಬನು ಸಾಧಾರಣ ಅಕ್ಷರಗಳಿಂದ ಆ ಸುದ್ದಿಯನ್ನು ಪತ್ರಿಕೆಯಲ್ಲಿ ಬರೆದು, ಬೇ ಕಾದವನಿಗೆ ತಲ್ಪಿಸುತ್ತಾನೆ.

ಇನ್ನು ಅನೇಕ ವಿಶೇಷಗಳನ್ನು ಆ ವಿದ್ಯುಚ್ಛಕ್ತಿಯನ್ನು ಕುರಿತು ಹೇಳ ಬಹುದು; ಆದರೆ ಹೇಳಿದ್ದು ಈಗ ಸಾಕು.

ದೇವರು ಮನುಷ್ಯರಿಗೆ ಆವೀ ಶಕ್ತಿಯನ್ನೂ ಮಿಂಚಿನ ಶಕ್ತಿಯನ್ನೂ ಲೋಕದ ಹಿತಕ್ಕಾಗಿ ಪ್ರಯೋಗಿಸಲಿಕ್ಕೆ ಬುದ್ಧಿ ಕೊಟ್ಟದರಿಂದಲೂ ಇತರ ಅನೇಕಾನೇಕ ಹಿತಕರ ವಾದ ಬುದ್ಧಿ ಕೊಟ್ಟದರಿಂದಲೂ ಆತನನ್ನು ಕೊಂಡಾಡುತ್ತ, ಆ ಆ ಬುದ್ಧಿಯನ್ನು ಆ ತನ ಸೇವೆಯಲ್ಲಿ ನಡಿಸುತ್ತ, ಇರ ಬೇಕು.

# THE ROOTS AND ORIGINAL MEANINGS

## OF SEVERAL SANSCRIT WORDS OCCURING IN THIS BOOK

---

ಈ ಪುಸ್ತಕದಲ್ಲಿರುವ ಹಲವು ಸಂಸ್ಕೃತ ಶಬ್ದಗಳ

# ಮೂಲವೂ ಮೂಲಾರ್ಥವೂ



WITH SOME REFERENCE TO No. 23, ON PAGE 51

೫೧ನೇ ಪಾನಿನ ೨೩ನೇ ಪಾಠವನ್ನು ಸರಿ ನೋಡ ತಕ್ಕದ್ದಾಗಿದೆ



ಇಂಗ್ಲಿಷ, ಜರ್ಮನಿ, ಸಂಸ್ಕೃತ, (ಗ್ರೀಕ, ಲತೀನ) ಭಾಷೆಗಳು ಒಂದೇ ಮೂಲದವುಗಳು. ಈ ನಿಘಂಟಿನಲ್ಲಿ ಅಲ್ಲಲ್ಲಿ ಅವವುಗಳನ್ನು ಸರಿ ನೋಡಲಿಕ್ಕೆ ಎತ್ತೈಸಿದ್ದಾಯಿತು; ಆಗಿಂದಾಗ್ಯೆ ಅದೇ ಶಬ್ದವು ಆಯಾ ಭಾಷೆಗಳಲ್ಲಿ ಹೆಚ್ಚು ಕಡಿಮೆಯಾಗಿರುವದನ್ನು ಸ್ವಲ್ಪ ತೋರಿಸುವದಕ್ಕೆ ೧೦ ಅಂಕೆಗಳ ಹೆಸರುಗಳು ಆಯಾ ಭಾಷೆಗಳಲ್ಲಿ ಇಲ್ಲಿ ಹೇಳಿ ಅವೆ—

| ಸಂಸ್ಕೃತ | ಇಂಗ್ಲಿಷು | ಒಂದು ತರದ ಜರ್ಮನಿ (high) | ಮತ್ತೊಂದು ತರದ ಜರ್ಮನಿ (low) |
|---|---|---|---|
| ಏಕ | ವನ್ (one) | ಐನ್ | ಏನ್ |
| ದ್ವಿ | ತೂ (two) | ಚ್ವೈ | ತ್ವೇ |
| ತ್ರಿ | ಥ್ರೀ (three) | ದ್ರೈ | ದ್ರೇ |
| ಚತುರ್ | ಫೋರ್ (four, quatuor, quarter) | ವೀರ್ (ವೀರ್ತೆಲ್ = quarter) | ವೇರ್ (ಕತೇರ್ = quarter) |
| ಪಂಚನ್ | ಫೈವ್ (five) | ಫುಯ್ನ್ಫ್ | ಫೀವ್ |
| ಷಷ್ | ಸಿಕ್ಸ್ (six) | ಸೆಖ್ಸ್ | ಸೆಸ್ |
| ಸಪ್ತನ್ | ಸೆವ್ನ್ (seven) | ಸೀಬೆನ್ | ಸೋಯ್ವೆನ್ |
| ಅಷ್ಟನ್ | ಏತ್ (eight) | ಅಖ್ತ್ | ಅಗ್ತ್ |
| ನವನ್ | ನೈನ್ (nine) | ನೈನ್ | ನೇಗೆನ್ |
| ದಶನ್ | ತೆನ್ (ten) | ಚೇಹ್ನ್ | ತೈನ್ |

ಅಂಡ (ಅಮ್ ಅಥವಾ ಅಂತ್=ಹೋಗುವದು) ಹಾರಗೆ ಅಥವಾ ನಿಲ್ಲದೆ ಹೋಗುವಂಥಾದ್ದು?=ತತ್ತಿ.

ಅಂತರಿಕ್ಷ (ಅಥವಾ ಅಂತರೀಕ್ಷ; ಅಂತರ್=ಒಳಗೆ, intro, in, comp. to enter; ಈಕ್ಷ್=ನೋಡುವದು, comp. The Latin "oculus," eye, ಜರ್ಮನಿಯಲ್ಲಿ: ಔಗೆ=ಕಣ್ಣು) ಒಳಗೆ ನೋಡ ಬಹುದಾದದ್ದು=ಆಕಾಶ (ಆ=ಸುತ್ತಲೂ, ಕಾಶ್=ಹೊಳೆಯುವದು), sky.

ಅಂಶ (ಅಂಶ್=ಪಾಲು ಮಾಡುವದು; comp. ವಿಚ್ ಅಥವಾ ವಿಚ್=ಪಾಲು ಮಾಡುವದು, ವಿಂಗಡಿಸುವದು, to di-vide) ಪಾಲು.

ಅಜಿತ (ಅ=ಇಲ್ಲ, un; ಜೀ=ಗೆಲ್ಲುವದು, ಜರ್ಮನಿಯಲ್ಲಿ: ಸೀಗ್—ಎನ್) ಅಪಜಯ ಹೊಂದದ್ದು.

ಅಣು (ಮೂಲ ಸಂಶಯದ್ದು) ಚಿಕ್ಕದು.

ಅತುಲ (ಅ=ಇಲ್ಲ, un; ತುಲ=ತ್ರಾಸಿಗೆ ಹಾಕಿ ನೋಡಿದ್ದು, ಸಮಾನ) ತನ್ನ ಸರಿಯಾದದ್ದು ಶಿಕ್ಕದಂಥಾದ್ದು. ತುಲ್=ಏರಿಸುವದು, to ex-toll.

ಅಥವಾ (ಅಥ=ಹಾಗೆ, thus, ita; ವಾ=ಸಹಾ; comp. ಜರ್ಮನಿಯಲ್ಲಿ: ಎಂತ್ವೇದೆರ್=ಅಥವಾ) ಹಾಗೂ.

ಅಧ್ಯಯನ (ಅಧಿ—ಇ; ರೂಮಿ ಭಾಷೆಯಲ್ಲಿ: eo=ಇ; ಅಧಿ=ಮೇಲೆ ಅಥವಾ ಪಾರಾಗಿ, ಇ=ಹೋಗುವದು; comp. he went) ಪಾರಾಗಿ ಹೋಗುವದು, ಎಲ್ಲಾ ಓದುವದು.

ಅನುಕೂಲ (ಅನು=ಹತ್ತಿದ್ದು, ಜರ್ಮನಿಯಲ್ಲಿ: ಅನ್; ಕೂಲ=ಸಮುದ್ರತೀರ) ಸಮುದ್ರತೀರ ಹತ್ತಿ ಕೊಂಡು ಹೋಗೋಣ=ಒಂದಕ್ಕೆ ಸಮವಾಗಿರೋಣ. ಕೂಲ್=ಕಾಪಾಡುವದು, ಕಾವಲಿಯಾಗಿರುವದು.

ಅನುನಯ (ಅನು=ಹತ್ತಿದ್ದು, ನೀ=ನಡಿಸುವದು) ತನ್ನ ಬೆನ್ನು ಹತ್ತಿ ಬರುವ ಹಾಗೆ ಮಾಡುವದು=ಮೆಚ್ಚಿಸುವಿಕೆ. ನೀ ಎಂಬ ಮೂಲವನ್ನು nomo — (canon ಎಂಬದರಲ್ಲಿ ನೋಡು.

ಅನುಭವ (ಅನು=ಹತ್ತಿ, ಭೂ=ಇರುವದು, ಆಗುವದು, to be, to become) ಮನಕ್ಕೆ ಹತ್ತರ ಆಗುವದು=ತಿಳಿಯುವದು; physic ಎಂಬದಕ್ಕೆ ಭೂ ಎಂಬದು ಮೂಲ.

ಅನುಸಾರ (ಅನು=ಹತ್ತಿ, ಸೃ=ನಡೆಯುವದು, ಹರಿಯುವದು=ಋ=to run; comp. ಜರ್ಮನಿಯಲ್ಲಿ: ಶ್ರೈತ್—ಎನ್=ನಡೆಯುವದು) ಒಂದಕ್ಕೆ ಸಮವಾದ ನಡೆಯುವಿಕೆ.

ಅನ್ನ (ಅದ್=ಉಣ್ಣುವದು, to eat, ಜರ್ಮನಿಯಲ್ಲಿ: ಎಸ್ಸ್—ಎನ್) ಉಣ್ಣುವಂಥಾದ್ದು.

ಅಪರಾಧ (ರಾಧ್=ತೀರಿಸುವದು, to make ready; ಅಪ=ವಿಂಗಡವಾಗಿ, off) ಸತ್ಯ ತಪ್ಪಿ ಮಾಡಿದ್ದು.

ಅಪ್ರವೇಶ್ಯ (ಅ=ಇಲ್ಲ, un; ಪ್ರ=ಮುಂದೆ, pro, ಜರ್ಮನಿಯಲ್ಲಿ: ಫೋರ್; ವಿಶ್=ಶೇರುವದು) ಒಳಶೇರ ಕೂಡದ್ದು. ವೇಶ=ಮನೆ, comp. oeco—nomy.

ಅರಣ್ಯ (ಋ=ನಡೆಯುವದು, to run) ಆಶ್ರಯ ಬೀಳ ತಕ್ಕದು=ವನ, ಕಾಡು.

ಅವಯವ (ಅವ=ವಿಂಗಡವಾಗಿ, off, ಜರ್ಮನಿಯಲ್ಲಿ: ಅಬ್; ಯು=ಕೂಡಿಸುವದು, to join) ಪ್ರತ್ಯೇಕವಾಗಿ ಕೂಡಿಸಿದ್ದು=ಕೈ, ಕಾಲು ಎಂಬ ಅಂಗಗಳು.

ಅವಸ್ಥೆ (ಅವ=ವಿಂಗಡವಾಗಿ, ಒಂದರಿಂದ ನೆಲಕ್ಕೆ ಇಳಿಸಿ ಇದ್ದು; ಸ್ಥಾ=ನಿಲ್ಲುವದು, to stand, ಜರ್ಮನಿಯಲ್ಲಿ: ಸ್ಥೇಹ್—ಎನ್) ನಿಲ್ಲುವಿಕೆ, ಸ್ಥಿತಿ.

ಅಸ್ತಮಯ (ಅಸ್ತಮ್=ಹೋದದ್ದು, ಕೆಳಗೆ; ಇ=ಹೋಗುವದು, eo) ಕೆಳಗೆ ಹೋಗುವಿಕೆ. ಅಸ್=ಇರುವದು, ಹೋಗುವದು, ಎಸೆಯುವದು, ಹೊಳೆಯುವದು.

ಅಸ್ಥಿ (ಮೂಲ ಸಂಶಯದ್ದು) ಎಲುಬು; comp. osteo-logy.

ಅಹಂಕಾರ (ಅಹಮ್=ನಾನು, ಜರ್ಮನಿಯಲ್ಲಿ: ಇಖ್, I; ಕೃ=ಮಾಡುವದು, to do) ತನ್ನನ್ನು ತಾನೇ ದೊಡ್ಡವನಾಗ ಮಾಡುವದು.

ಆಕರ್ಷಣ (ಆ=ಹತ್ತರ, ad; ಕೃಷ್=ಎಳೆಯುವದು) ತನ್ನ ಕಡೆಗೆ ಎಳೆಯುವದು, at-traction.

ಆಕಸ್ಮಿಕ (ಅ=ಇಲ್ಲ, ಕಸ್ಮಾತ್=ಯಾತರಿಂದ) ಯಾವದರಿಂದ ಹುಟ್ಟುತ್ತದೆಂತ ತಿಳಿಯದಂಥಾದ್ದು.

ಆಕಾಶ (ಕಾಶ್=ಹೊಳೆಯುವದು, to shine) ಬಾನು, sky.

ಆಗ್ನೇಯ (ಅಗ್ನಿ=ಬೆಂಕಿ, ignis, comp. igni-fy) ಅಗ್ನಿ ಎಂಬ ದಿಕ್ಪಾಲಕನನ್ನು ಕುರಿತ ದಿಕ್ಕು.

ಆಘ್ರಾಣ (ಆ=ಸುತ್ತಲೂ, ಘ್ರಾ=ಮೂಸಿ ನೋಡುವದು, ಜರ್ಮನಿಯಲ್ಲಿ: ರೀಷ್—ಎನ್) ಮೂಸಿ ನೋಡುವಿಕೆ.

ಆತುರ (ಆ=ಸುತ್ತಲೂ; ತುರ್=ನಡುಗುವದು, ಹಾರುವದು, to tremble) ನಡುಗುವಿಕೆ (ಆಶೆಯಿಂದ), ಅತ್ಯಾಶೆ.

ಆಧಾರ (ಆ=ಸುತ್ತಲೂ, ಧೃ=ಹಿಡಿಯುವದು) ಕೆರೆ, ಆಶ್ರಯ ಇತ್ಯಾದಿ.

ಆಮೂಲ (ಆ=ಸುತ್ತಲೂ, ಮೂಲ=ಬೇರು) ಬೇರ ಸುತ್ತಲು,—ಹಿಡಿದು. ಮೂಲ=ಮಹಿಲ=ದೊಡ್ಡದಾದದ್ದು, massi-ness (moles).

ಆರಾಮ (ರಮ್=ಶಾಂತಿಯಾಗಿರುವದು, to rest, ಜರ್ಮನಿಯಲ್ಲಿ: ರಸ್ತ್—ಎನ್, ಸುಖಕರವಾಗಿರುವದು) ವನ, ತೋಟ.

ಆರೋಗ್ಯ (ಅ=ಇಲ್ಲ, ರೋಗ=ನೋವು; ರೋಗವೆಂಬದಕ್ಕೆ ಮೂಲವಿರುವದೇನಂದರೆ—ರುಜ್=ಒಡೆಯುವದು, ಮುರಿಯುವದು, to break, ಜರ್ಮನಿಯಲ್ಲಿ comp. ರೈಸ್ಸ್—ಎನ್=ಹರಿಯುವದು) ಅರೋಗದ ಸ್ಥಿತಿಯದ್ದು.

ಆಸಕ್ತಿ (ಆ=ಹತ್ತರ, ad; ಸಂಜ್=ಜೋತಾಡುವದು, to hang) ಒಂದಕ್ಕೆ ಹತ್ತಿಕೊಂಡು ಜೋತಾಡುವದು, (ಮಗು ತಾಯಿಯ ಹಿಡುಕೊಂಡು ಜೋತಾಡುವದು), ಪ್ರೀತಿ ಮಾಡುವಿಕೆ.

ಆಸ್ಪದ (ಆ=ಹತ್ತರ, ad; ಪದ್=ಹೋಗುವದು, to foot=to put the feet) ಸೇರುವಿಕೆ, ಕೆಲಸ, ಕಾರಣ.

ಇಂದ್ರಿಯ (ನದ್=ದೊಡ್ಡ ಶಬ್ದ ಮಾಡುವದು; ಇಂದ್ರ=ದೊಡ್ಡ ಧ್ವನಿಯವನು=thunderer, ಅರಸನು, ಅಧಿಪತ್ಯದಲ್ಲಿರುವವನು) ಮನುಷ್ಯನಲ್ಲಿ ಮುಖ್ಯವಾದದ್ದು.

ಇಷ್ಟ (ಇಷ್=ಆಶಿಸುವದು, to wish) ಮೆಚ್ಚ ತಕ್ಕಂಥಾದ್ದು, ಕಬ್ಬು.

ಈಶಾನ್ಯ (ಈಶ್=ಆಳುವದು, ಗ್ರೀಕ ಭಾಷೆಯಲ್ಲಿ: ishu-o) ಈಶನೆಂಬ ದಿಕ್ಪಾಲಕನ ಕುರಿತ ದಿಕ್ಕು.

ಉತ್ಕೃಷ್ಟ (ಉದ್=ಮೇಲಕ್ಕೆ, ಕೃಷ್=ಎಳೆಯುವದು, to drag, ಎತ್ತುವದು) ಬೇರೆ ಅದರೊಳಗಿಂದ ಎತ್ತಿ ಕೊಂಡದ್ದು=ಶ್ರೇಷ್ಠ. (ಆಕರ್ಷಣವೆಂತ ನೋಡು).

ಉತ್ತರ (ಉದ್=ಮೇಲಕ್ಕೆ, ತೃ=ನಡೆಯುವದು, ದಾಟುವದು, ಜರ್ಮನಿಯಲ್ಲಿ: ತ್ರೇತ್—ಎನ್=ನಡೆಯುವದು) ಒಂದಕ್ಕಿಂತ ಮೇಲಿನ ಮಾತು, ಪ್ರತಿನುಡಿ, utterance.

ಉತ್ಪತ್ತಿ (ಉದ್=ಮೇಲಕ್ಕೆ, ಪದ್—ಹೋಗುವದು, to foot) ಭೂಮಿಯೊಳಗಿಂದ ಹೋದದ್ದು=ಫಲ.

ಉದರ (ಋ=ಹೋಗುವದು, to run) ಮುಂದೆ ದಪ್ಪವಾಗಿ ಹೋದದ್ದು=ಹೊಟ್ಟೆ, udder.

ಉದ್ಭಿಜ್ಜ (ಉದ್=ಮೇಲಕ್ಕೆ, ಭಿದ್=ಶೀಳುವದು, to di-vide; ಜನ್=ಹುಟ್ಟುವದು) ಮೇಲಕ್ಕೆ ಶೀಳಿ ಅಥವಾ ಮೊಳೆತು ಹುಟ್ಟಿದ್ದು, ಮೊಳೆತು ಹುಟ್ಟಿದ್ದು. ಜನ್ ಎಂಬದು ಜರ್ಮನಿಯಲ್ಲಿ ಚೆಯುಗ್-ಎನ್=ಹುಟ್ಟಿಸುವದು ಎಂಬದಕ್ಕೆ ಮೂಲ; comp. gen-us.

ಉಪಕರಣ (ಉಪ=ಮೇಲಕ್ಕೆ, up; ಕೃ=ಮಾಡುವದು, to do) ಮೇಲೆ ಅಥವಾ ಸಂಗಡ ಮಾಡೋಣ, ಸಹಾಯ ಮಾಡುವಂಥಾದ್ದು.

ಉಪದೇಶ (ಉಪ=ಮೇಲೆ, up, upon, ಕುರಿತು; ದಿಶ್=ತೋರಿಸುವದು; ಜರ್ಮನಿಯಲ್ಲಿ: ದಿಶ್=ದೆಯುತ್-ಎನ್) ಬುದ್ಧಿ ಹೇಳುವಿಕೆ.

ಉಲ್ಕಾಭೂತ (=ಜ್ವಾಲಾ-ಭೂತ; ಜ್ವಾಲೆ=ಉರಿ; comp. vulcan; ಭೂತ=ಹುಟ್ಟಿದ್ದು; ಭೂ=to be-come) ಕೊಳ್ಳಿ.

ಋಗ್ವೇದ (ಋಚ್=ಕೊಂಡಾಡುವದು, comp. to praise; ವಿದ್=ತಿಳಿಯುವದು, to wit; ಜರ್ಮನಿಯಲ್ಲಿ: ವಿದ್=ವಿಸ್ಸ್-ಎನ್) ಕೊಂಡಾಟದ ತಿಳುವಳಿಕೆ.

ಕಚ್ಛ (ಕಚ್=ಕಟ್ಟುವದು, ಅಂಚಾಗಿರುವದು) ವಸ್ತ್ರದ ಅಂಚು, ನೆಲದ ಅಂಚು=ಸಮುದ್ರತೀರ, coast, ಜರ್ಮನಿಯಲ್ಲಿ: ಕುಸ್ತೆ.

ಕನಕ (ಕನ್=ಹೊಳೆಯುವದು, to shine) ಭಂಗಾರ.

ಕಪಾಲ (ಕಂಪ್=ಬಾಗಿಸುವದು) ಒಳ ಬಾಗಿರುವಂಥಾದ್ದು=ಪಾತ್ರೆ (pot), ತಲೇ ಬುರುಡೆ, skull (cephalae in Greek).

ಕಪಿ (ಕಪ್=ನಡುಗುವದು, to quiver, ನಡೆಯುವದು, ಜರ್ಮನಿಯಲ್ಲಿ: ಹುಪ್ಫ್-ಎನ್) ಕೋತಿ.

ಕಪಿಶ (ಕಪಿ=ಕೋತಿ) ಕೋತೀ ಬಣ್ಣದ್ದು.

ಕರಿ (ಕರ=ಕೈ, ಸೊಂಡಿಲು; ಕೃ=ಮಾಡುವದು, to do; ಕರ=ಕೆಲಸ ಮಾಡುವಂಥಾದ್ದು) ಸೊಂಡಿಲುಳ್ಳದ್ದು=ಆನೆ.

ಕರ್ತ (ಕೃ=ಮಾಡುವದು) ಮಾಡುವವನು, doer, creator.

ಕಾಯ (ಮೂಲ ಸಂಶಯದ್ದು) ಮೈ.

ಕಾರ್ಪಣ್ಯ (ಕೃಪ್=ಬಲಹೀನವಾಗಿರುವದು, ಜರ್ಮನಿಯಲ್ಲಿ: to be ಸ್ಲಪ್ಪ್) ಹ ಣಕ್ಕೆ ಸೋತ ಮನಸ್ಸು.

ಕಾಲಕ್ಷೇಪ (ಕ್ಷಿಪ್=ಹಾಕುವದು, ಜರ್ಮನಿಯಲ್ಲಿ: ಷುಪ್ಪ್—ಎನ್) ಹೊತ್ತು ಹಾಕುವದು, —ಕಳೆಯುವದು.

ಕೀಟ (ಕೀಟ್=ನಡೆಯುವದು, ಹೆದರುವದು, ಬಣ್ಣ ಹಾಕುವದು) ಹುಳ.

ಕುಲ (ಕುಲ್=ಒಟ್ಟಿರುವದು, ಒಂದಕ್ಕೊಂದು ಹತ್ತಿರುವದು, to be close) ಸಮೂಹ, ಕುಟುಂಬ, ವಂಶ, class.

ಕುಸುಮ (ಕುಸ್=ಹೊಳೆಯುವದು, comp. ಕಸ್, ಕಾಶ್=ಹೊಳೆಯುವದು, to shine) ಹೂವು.

ಕುಹಕ (ಕುಹ್=ಬೆರಗಾಗುವದು) ಬೆರಗು ಪಡಿಸುವವನು, ಆಟಗಾರನು, ಮೋಸಗಾರನು, comp. juggler?

ಕೃತಜ್ಞತೆ (ಕೃ=ಮಾಡುವದು, to do; ಜ್ಞಾ=ತಿಳಿಯುವದು, to know) ಮಾಡಿದ್ದನ್ನು ತಿಳಿಯುವದು, ಉಪಕಾರದ ನೆನಪು.

ಕೃಷ್ಣ ( ಕೃಷ್=ಎಳೆಯುವದು, to drag, ಉಳುವದು) ಉತ್ತದ್ದು, ಉತ್ತ ಹೊಲದ ಬಣ್ಣ=ಕಪ್ಪು. (comp. ಆಕರ್ಷಣ).

ಕೇತಕಿ (ಕೇತಕ=ಒಂದು ಜಾತೀ ಪುಷ್ಪವೃಕ್ಷ) ಕೇತಕವೃಕ್ಷದ ಹೂವು.

ಕೋಶ (ಕುಶ್=ಸುತ್ತೂ ಹಿಡಿಯುವದು, to sheathe) ಒರೆ, ಚೀಲ, sheath, coat; ಜರ್ಮನಿಯಲ್ಲಿ: ಕಿಸ್ತೆ=ಪೆಟ್ಟಿಗೆ.

ಕೌಶಲ್ಯ (ಶಲ್, ಚಲ್=ನಡೆಯುವದು) ನಡೆಯುವ ಅಥವಾ ಚುರುಕಾದ ಬುದ್ಧಿ, comp. celerity.

ಖಗ (ಖ=ಆಕಾಶ, ಗಮ್=to go) ಆಕಾಶದಲ್ಲಿ ಹೋಗುವಂಥಾದ್ದು, ಪಕ್ಷಿ.

ಖಚರ (ಖ=ಆಕಾಶ; ಚರ್ ಅಥವಾ ಶ್ಚರ್=ನಡೆಯುವದು, ಜರ್ಮನಿಯಲ್ಲಿ=ಶ್ರೈತ್—ಎನ್, comp. ಚಲ್, ಸೃ=ನಡೆಯುವದು) ಪಕ್ಷಿ.

ಖಡ್ಗ (ಖಡ್=ಭಾಗ ಮಾಡುವದು, to cut) ಕತ್ತಿ.

ಖುರ (ಖುರ್=ಕೆದರುವದು, to scratch, ಜರ್ಮನಿಯಲ್ಲಿ: ಕ್ರತ್ಸ್—ಎನ್) ಕುದುರೇ ಕಾಲಿನದು.

ಗಂಭೀರ (ಗರ್ಜ=ಗಂಭ?) ಹೊಟ್ಟೆಯೊಳಗೆ ಹೋಗುವ ಸ್ವರ? ಮಾನದ ಧ್ವನಿ, ಮಾನ. (Is the Greek "semnos" from "sebo" to be compared?)

ಗಾಧ (ಗಾಹ್=ತೆರೆದ್ದರೊಳಗೆ ಮುಳುಗುವದು) ಡೊಂಗರದ ಸ್ಥಳ (ಪರ್ವತದಲ್ಲಿ), ಕೆಳಯಕ್ಕೆ ಉದ್ದವಾಗಿ ಹೋಗುವ ಸ್ಥಳ, ಶೋಧನೆಯಿಲ್ಲದ್ದು=ಬಹಳ. comp. to gape, ಜರ್ಮನಿಯಲ್ಲಿ=ಗೇಹ್ನ್—ಎನ್.

ಗುಣ ಅಥವಾ ಗುರ್ಹನ (ಗ್ರಹ್=ತಕ್ಕಾಳ್ಳುವದು, ಜರ್ಮನಿಯಲ್ಲಿ=ಗ್ರೈಪ್—ಎನ್, ಗ್ರಪ್ಪ್—ಎನ್) ಪಡಕೊಂಡದ್ದು=ಲಕ್ಷಣ.

ಗುರು (ಗುರ್=ತನ್ನ ಚಾರದಿಂದ ಬೀಳುವದು, ಜರ್ಮನಿಯಲ್ಲಿ=to be ಸ್ವೆರ್) ಚಾರದ್ದು, ಮಾನದ್ದು; comp, gravi-ty=ಗುರುತ್ವ.

ಗುಲ್ಮ (ಗುಡ್=ಸುತ್ತುವದು, ಕಾಯುವದು) ಬೇಲಿ? ಪಾದೆ.

ಗೃಹ (ಗ್ರಹ್=ಹಿಡಿಯುವದು, ಜರ್ಮನಿಯಲ್ಲಿ=ಗ್ರೈಪ್—ಎನ್, ಗ್ರಪ್ಪ್—ಎನ್) ಜನರನ್ನು ಹಿಡಿಯುವಂಥಾದ್ದು=ಮನೆ, ಕ್ರೈಯನ್ನು ಮದುವೆಗೆ ಹಿಡಿಯುವಂಥಾದ್ದು= The grateful person=ಸ್ತ್ರೀ. gratus=grah-tus.

ಗೋ (ಗಮ್=ಹೋಗುವದು, to go,) ಜನರು ಹೋಗುವಂಥಾದ್ದು=ಭೂಮಿ, comp. geo-graphy; ಅಡಿವೆಯಲ್ಲಿ ಹೋಗುವಂಥಾದ್ದು=ಆಕುಳು, cow; ದೀಪದಿಂದ ಹೋಗುವಂಥಾದ್ದು=ಕಿರಣ (ಕಾಶ); ಕಾಶ ಅಥವಾ ಕಿರಣವುಳ್ಳದ್ದು=ಕಣ್ಣು.

ಗೋಚರ (ಗೋ=ಕಣ್ಣು, ಚರ್=ಶೇರುವದು) ಕಣ್ಣೊಳಗೆ ಶೇರುವಂಥಾದ್ದು, ವಿಷಯ, ಪ್ರತ್ಯೇಕ್ಷ. To ಚರ್ comp. ಚಲ್, which is the Greek "kello„; the Latin "cello„; comp. celer-ity.

ಗೋತ್ರ (ಗೋ=ಆಕುಳು, cow, ಜರ್ಮನಿಯಲ್ಲಿ: ಕೋ; ತ್ರೈ=ಕಾಯುವದು) ಆಕಳ ಹಿಂಡು ಕಾಯುವ ಜನ; ಆ ಜಾತೀ ಜನಕ್ಕೆ ಸಂಬಂಧ ಪಟ್ಟವರು=ಅದೇ ವಂಶದವರು; ಪರ್ವತ—(ಜರ್ಮನಿಯಲ್ಲಿ ತ್ರೈ=ತ್ರೈಬ್—ಎನ್).

ಗೋಪುರ (ಗೋ=ಆಕುಳು, cow; ಪುರ=ಬಾಗಿಲು, ಮನೆ, ಪಟ್ಟಣ; comp. politic = relating to ಪುರ) ಆಕಳಮನೆ = ಊರಬಾಗಿಲು. comp. the greeke "pulae„=door.

ಗೋಳ (ಗುಡ್=ದುಂಡಾಗಿರುವದು) ಉರುಟಾದದ್ದು, globe. comp. ಗುಲ್ಮ.

ಗೌರವ (ಗುರು ಎಂತ ನೋಡು) ಮಾನದ್ದು.

ಗ್ರಹ (ಗ್ರಹ್=ಹಿಡಿಯುವದು; ಜರ್ಮನಿಯಲ್ಲಿ=ಗ್ರೈಪ್—ಎನ್) ಸೂರ್ಯ ಚಂದ್ರರನ್ನು ಹಿಡಿಯುವ ರಾಹು ಕೇತುಗಳು, ಎಲ್ಲಾ ಸಚರನಕ್ಷತ್ರಗಳು (೫೩ ಗೃಹ ಎಂತ ೧೭೦ನೇ ಪಾನಿನಲ್ಲಿ ಛಾಪಿಸಿದ್ದು ೫೩ ಗ್ರಹ ಎಂತ ಇರ ಬೇಕು). comp. ಗೃಹ.

ಗ್ರಹಣ (ಗ್ರಹ ಎಂತ ನೋಡು) ಹಿಡಿಯುವಿಕೆ.

ಗ್ರೀಷ್ಮ (ಗ್ರಸ್=ನುಂಗುವದು, ಜರ್ಮನಿಯಲ್ಲಿ= ಸ್ಲಿಂಗ್—ಎನ್) ನೀರ ನುಂಗುವಂಥಾದ್ದು=ಬಿಸಿಲು.

ಘಟ (ಘಟ್=ಹೊಡೆಯುವದು) ಹೊಡೆದು ಮಾಡಿದ್ದು=ಪಾತ್ರೆ.

ಘಾತ (ಹನ್=ಹೊಡೆಯುವದು, ಜರ್ಮನಿಯಲ್ಲಿ=ಹೌ—ಎನ್, to hit) ಕೊಲೆ, comp. the Greek "than„=ಕೊಲ್ಲುವದು.

ಚಂದ್ರ (ಚಂದ್=ಹೊಳೆಯುವದು, to be candid) ತಿಂಗಳು.

ಚರಾಚರ (ಚರ—ಅ—ಚರ, ಚರ್ ಅಥವಾ ಚಲ್=ನಡೆಯುವದು, comp. celerity) ನಡೆಯುವಂಥಾದ್ದೂ ನಡೆಯದಂಥಾದ್ದೂ.

ಚಕ್ಷು (ಚಕ್ಷ್ ಅಥವಾ ಅಚಕ್ಷ್=ನೋಡುವದು) ಕಣ್ಣು.

ಚಾತಕ (ಚತ್=ಹುಡುಕುವದು, ಬೇಡುವದು, to seek?, ಜರ್ಮನಿಯಲ್ಲಿ=ಸೂಖ್—ಎನ್?) ಕೋಗಿಲೆ; ಅದು ಮೇಘಗಳ ನೀರು ಬೇಡುತ್ತದಂತೆ.

ಚಾತುರ್ಯ (ಚತುರ್=ನಾಲ್ಕು, four; ಚತುರ=ನಾಲ್ಕು ಕಡೆ ಸಮವಾದದ್ದು, to be square) ಸಮವಾದ ಬುದ್ಧಿಯದು.

ಚೇಷ್ಟೆ (ಚೇಷ್=ಮಿಸಿಕ್ಯಾಡುವದು, to gest-ure, ಗೈಯುವದು) ಚಲನೆ, ಕೆಲಸ, ನಕ್ಕಲೀ ಕೆಲಸ.

ಛಲ (ಛದ್=ಘಟ್ಟಿಯಾಗಿರುವದು, to be hard; ಮರೆ ಮಾಡುವದು) ಘಟ್ಟಿಗತನ, ಮೋಸ ಇತ್ಯಾದಿ. ಛಾಯೆ ಎಂತ ನೋಡು.

ಛಾಯೆ (ಛದ್=ಮರೆ ಮಾಡುವದು, to shade, ಜರ್ಮನಿಯಲ್ಲಿ: ಬೆ—ಶತ್ತೆನ್) ನೆರಳು, ನೆರಳು ಬೀಳಿಸುವಂಥಾದ್ದು=ಬೆಳಕು.

ಜಂತು (ಜನ್=ಹುಟ್ಟುವದು, comp. genus, kind=sort) ಹುಟ್ಟಿದ್ದು, ಜರ್ಮನಿಯಲ್ಲಿ=ಕಿಂದ್; ಜೀವಿ.

ಜರಾಯು (ತೄ=ಹೋಗುವದು, ದಾಟುವದು, comp. trans; ಜರ್ಮನಿಯಲ್ಲಿ: ತ್ರೇತ್—ಎನ್=ಕಾಲಿಡುವದು; comp. terra =ಜನರು ಹೋಗುವಂಥಾದ್ದು =ಭೂಮಿ.) ಜೀವಿಗಳ ಹೊಟ್ಟೆ.

ಜೀರ್ಣ (ಜೄ=ಶಿಕ್ಕಿ ಸಣ್ಣದು ಮಾಡುವದು; ಜರ್ಮನಿಯಲ್ಲಿ: ಚೆರ್=ವಿಂಗಡವಾಗಿ, ಪುಡಿಯಾಗಿ) ಅನ್ನಕೋಶದಲ್ಲಿ ಪಕ್ವವಾಗುವದು, ಪುಡಿಯಾಗೋಣ, ಹಳೇ.

ಜುಗ (ಯುಜ್=ಕೂಡಿಸುವದು, to join, to yoke) ಕೂಡಿಸಿದ್ದು, ಎರಡು, ಜರ್ಮನಿಯಲ್ಲಿ=ಯಾಖ್.

ತಂತ್ರ (ತನ್=ಉದ್ದಕ್ಕೆ ಎಳೆಯುವದು, to ex-tend, ಜರ್ಮನಿಯಲ್ಲಿ=ದೇಹ್ನ್—ಎನ್) ತಂತಿ, ನೂಲಿನ ಧಾರ, ನೇಯಿಕಾರನು, ಹಂಚಿಗೆ.

ತತಿ (ತಂತ್ರ ಎಂತ ನೋಡು) ವಿಶಾಲವಾಗಿರುವಂಥಾದ್ದು, ಗುಂಪು.

ತದನು (ತತ್=ಅದು, that; ಅನು=ಹತ್ತರ, ಮೇಲೆ, ಜರ್ಮನಿಯಲ್ಲಿ=ಅನ್) ಅದರ ಬಳಿಕ.

ತಪಸು (ತಪ್=ಉರಿಯುವದು, to be tepid=to be ತಪ್ತ) ವೈದಂಡಿಸುವಿಕೆ.

ತರಂಗ (ತೃ=ನಡೆಯುವದು, ಜರ್ಮನಿಯಲ್ಲಿ: ತ್ರೇತ್—ಎನ್, ದಾಟುವದು; ಗಮ್=ಹೋಗುವದು, to go; ತರಂ—ಗ=) ಒಂದನ್ನು ದಾಟಿ ಒಂದು ಹೋಗುವಂಥಾದ್ದು=ಸಮುದ್ರದ ತೆರೆ.

ತರು (ತೃ=ಮೇಲೆ ಹೋಗುವದು, ಮೊಳೆಯುವದು) ಮರ, tree.

ತಾಮಸ (ತಮ್=ತ್ರಾಣವಿಲ್ಲದಿರುವದು, ಗಲಿಬಿಲಿಯಾಗಿರುವದು, ಆಶೆಯುಳ್ಳ ಸ್ಥಿತಿಯಲ್ಲಿರುವದು. The root is somewhat connected with the Greek "temno"=to cut, as ತಮಾಲ is=knife) ನಿತ್ರಾಣ, ಆತ್ಮದ ನಿತ್ರಾಣ=ಮರುಳು, ಅಜ್ಞಾನ, ಕತ್ತಲೆ; comp. ಜರ್ಮನಿಯಲ್ಲಿ: ದೆಮ್ಮೆರ್—ಉಂಗ್=ಕತ್ತಲಾಗುವ ವೇಳೆ, dawn.

ತಿಮಿಂಗಿಲ (ತಿಮಿ—ಗಿಲ=ನೀರು ನುಂಗುವಂಥಾದ್ದು ಅಥವಾ ನೀರು ಮಾಡುವಂಥಾದ್ದು) ಒಂದು ಜಾತೀ ಮೀನು; ಲೋನೇ ಪಾನಿನಲ್ಲಿ ಅದು ನೀರನ್ನು ಮೂಗಿನಿಂದ ಹೊರಗೆ ಹಾಕುವಂಥಾದ್ದು ಕಾಣುತ್ತದೆ. ತಿಮ್=ನೀರಾಗಿರುವದು; ಗೃ=ನುಂಗುವದು, to en-gulf.

ತುರಗ (ತ್ವರ—ಗ=ತ್ವರೆಯಾಗಿ ನಡೆಯುವಂಥಾದ್ದು) ಕುದುರೆ.

ತೃಷೆ (ತೃಷ್=ನೀರಡಿಕೆಯಾಗಿರುವದು) ನೀರಡಿಕೆ, thirst, ಜರ್ಮನಿಯಲ್ಲಿ: ದುರ್ಸ್ತ್.

ತ್ವಕ್ (ತ್ವಚ್=ಮುಚ್ಚುವದು, to thatch, ಜರ್ಮನಿಯಲ್ಲಿ=ದೆಕ್—ಎನ್) ಮುಚ್ಚುವಂಥಾದ್ದು=ತೊಗಲು.

ದರಿದ್ರ (ದೃ=ಹರಿಯುವದು, to tear) ಹರಕುಬಟ್ಟೆಯವನು, ಬಡವನು.

ದಕ್ಷಿಣ (ದಕ್ಷ್=ಬಲವಾಗಿರುವದು) ಬಲಗೈಯದಿಕ್ಕು, dexter=ತೆಂಕಣ (ಪ್ರಾರ್ಥನೆ ಮಾಡುವ ಸಮಯದಲ್ಲಿ ಪೂರ್ವ ದಿಕ್ಕು ನೋಡುವ ಪದ್ಧತಿ ಇತ್ತು, ಅಂಥ ಪಕ್ಷದಲ್ಲಿ ತೆಂಕಣವು ಬಲಗೈಯಲ್ಲಿರುವದು).

ದುಃಖ (ದುಸ್—ಖ=ಕೆಟ್ಟ ಆಕಾಶ) ಕೆಟ್ಟ ಸ್ಥಿತಿ.

ದುಃಖಾಕುಲತ್ವ (ದುಃಖ—ಆ—ಕುಲತ್ವ; ಆ=ಸುತ್ತೂ, ಕುಲ್=ಒಟ್ಟಿರುವದು, to be close) ದುಃಖದ ಮುಚ್ಚುವಿಕೆ.

ದೃಕ್ (ದೃಶ್=ನೋಡುವದು, the Greak "derko") ಕಣ್ಣು.

ದೇವಾಧೀನ (ದೇವ—ಅಧಿ—ಈನ=ದೇವರು—ಮೇಲೆ—ಹೋದದ್ದು) ದೇವರ ಆಳುವಿಕೆಯದು. ದೇವ (ದಿವ್=ಹೊಳೆಯುವದು) deus, Zeus.

ದೇಹ (ದಿಹ್=ದೊಡ್ಡದಾಗುವದು, to become thick, ಜರ್ಮನಿಯಲ್ಲಿ: to become ದಿಕ್ಕ್=ಗೆ—ದೈಹ್—ಎನ್) ದೊಡ್ಡದಾದದ್ದು, ವೈ. comp. dough, in low German=ದೇಗ್.

ಧಾತು (ಧಾ=ಇಡುವದು) ಪಾಯವಾಗಿಟ್ಟದ್ದು, thesis, ಮೂಲ.

ಧಾರಣ (ಧೃ=ಹಿಡಿದಿರುವದು, to hold, ಜರ್ಮನಿಯಲ್ಲಿ: ಹಾಲ್ಟ್=ಎನ್, ಹಲ್ತ್—ಎನ್) ಆತ್ಮದಿಂದ ಏನೂ ಹಿಡಿದಿರುವಿಕೆ=ಘಟ್ಟಿಗತನ ಇತ್ಯಾದಿ.

ಧೃತಿ (ಧಾರಣ ಎಂತ ನೋಡು) ತನಗಿರುವದರಲ್ಲಿ ಆತ್ಮ ಹಿಡುಕೊಳ್ಳೋಣ, ಸಂತೋಷ.

ಧ್ರುವ (ಧ್ರು=ಘಟ್ಟಿಯಾಗಿರುವದು, to be true, ಜರ್ಮನಿಯಲ್ಲಿ: to be ತ್ರೆವ್) ಘಟ್ಟಿಯಾದದ್ದು, ಸತ್ಯವಾದದ್ದು.

ನರಕ (=ಅನರಕ; ಅನರ=the Greek "enoros"=ಸತ್ತವರ ಆತ್ಮ) ಸತ್ತವರ ಸ್ಥಳ.

ನವೀನ (ನವ=ಹೊಸ, new) ಹೊಸ.

ನಾಡಿ (ನಡ್=ಬೀಳುವದು) ಶರೀರದಲ್ಲಿ ರಕ್ತದ ಬೀಳುವಿಕೆ, ಹೊಡೆಯುವಿಕೆ.

ನಾವೆ (ಸ್ನಾ ಅಥವಾ ನಾ=ನೀರಲ್ಲಿ ಆಡುವದು; ಜರ್ಮನಿಯಲ್ಲಿ: to be ನಸ್=ನೀರಾಗಿರುವದು; ನಾತ=ಮಿಂದ=ನಸ್) ಹಡಗು, nave.

ನಾಸ್ತಿಕ (ನ=ಇಲ್ಲ, ಅಸ್ತಿ=ಇರುತ್ತಾನೆ, not is) ದೇವರು ಇರುವದಿಲ್ಲವೆಂತ ಹೇಳುವವನು.

ನಿರ್ಧಾರ (ನಿರ್=ಹೊರಗೆ, ಘಟ್ಟಿಯಾಗಿ; ಧೃ=ಹಿಡಿದಿರುವದು) ಒಡಂಬಡಿಕೆ.

ನಿರ್ಮಾಣ (ನಿರ್=ಹೊರಗೆ; ಮಾ=ಅಳತೆ ಮಾಡುವದು, ಅಳತೇ ಮೇಲೆ ಇಡುವದು, to measure) ಅಳತೇ ಮೇಲೆ ಉಂಟು ಮಾಡುವಿಕೆ.

ನಿರ್ಮುಕುತ, ನಿರ್ಮುಕ್ತ (ನಿರ್=ಹೊರಗೆ, ಮುಚ್=ಬಿಡಿಸುವದು, comp. to demit) ಬಿಡಿಸಿದ್ದು.

ನಿದ್ರೆ (ದ್ರೈ=ಓಡುವದು, ನಿ=ಒಳಗೆ, ಮೇಲೆ, in) ತನ್ನೊಳಗೆ ಶೇರಿ ಕೊಂಡು ಇರೋಣ. comp. the Greek: dromos, the Latin dormio.

ನಿರೋಧ (ನಿ=ಒಳಗೆ, in; ರುಧ್=ಮುಚ್ಚುವದು, ಹಿಡುಕೊಳ್ಳುವದು) ಮುಚ್ಚುವಿಕೆ. (Is the Latin rete=net to be compared?)

ನಿರ್ಜೀವಾಚರ (ನಿರ್ — ಜೀವ — ಅ — ಚರ) ಜೀವವಿಲ್ಲದೆ ಚರಿಸದೆ ಇರುವಂಥಾದ್ದು.

ನೀಲ (ನಿಶ್ಲ=ಕಪ್ಪು, negro) ಕಪ್ಪು ಛಾಯೆಯದ್ದು.

ನುತಿ (ನು=ಕೊಂಡಾಡುವದು; comp. nuncio in Latin=ಸುದ್ದಿ ಹೇಳುವದು?) ಸ್ತೋತ್ರ.

ನೇತ್ರ (ನೀ=ನಡಿಸುವದು, comp. nomo-grapher) ನಡಿಸುವಂಥಾದ್ದು, ಕಣ್ಣು.

ನೈರುತ್ಯ (ನಿರುತಿ=ಒಬ್ಬ ರಾಕ್ಷಸ) ನಿರುತಿಯನ್ನು ಕುರಿತ ದಿಕ್ಕು.

ಪಂಚ (ಪಂಚ್=ಕೈಬೆರಲುಗಳನ್ನು ಅಗಲಿಸುವದು) ಐದು, five.

ಪತ, ಪಥ (ಪದ್, ಪಥ್=ನಡೆಯುವದು, to foot) ದಾರಿ, path.

ಪತಂಗ (ಪತ — ಗ; ಪತ್=ಬೀಳುವದು, comp. to be impetu-ous, to petition, to have appetite, ಹಾರುವದು; ಗಮ್=ಹೋಗುವದು, to go) ಹಾರಿ ಹೋಗುವಂಥಾದ್ದು=ಪಕ್ಷಿ, ಒಂದು ಜಾತೀ ಹುಳ.

ಪತನ (ಪತ್=ಬೀಳುವದು, comp. the Greek pipto=to fall) ಬೀಳುವಿಕೆ; ಪತಂಗ ಎಂತ ನೋಡು.

ಪತ್ತನ, ಪಟ್ಟಣ (ಪದ್=ಹೋಗುವದು, to foot, to put the feet; ಅಥವಾ ಪತ್=ಆಳುವದು) ಜನರು ಹೋದದ್ದು ಅಥವಾ ರಾಜನಾಳಿದ್ದು=ನಗರ.

To ಪತ್ comp. ಪತಿ, ಪ, which appears in "Satrap"=ಛತ್ರ — ಪ.

ಪಥ್ಯ (ಪಥ್, ಪದ್=ಹೋಗುವದು) ನಡೆಯ ತಕ್ಕ ದಾರಿ, — ರೀತಿ, path.

ಪದ್ಮ (ಪದ=ಕಾಲು, foot, ದಂಟು; ಮತ್=ಉಳ್ಳದ್ದು, ಜರ್ಮನಿಯಲ್ಲಿ: ಮಿತ್) ತಾವರೆಹೂವು.

ಪದಾರ್ಥ (ಪದ=ಮಾತು; ಅರ್ಥ=ಬೇಡಿದ್ದು, ಬೇಕೆಂದದ್ದು=ಸೂಚಿಸಿದ್ದು; vid. ಪ್ರಾರ್ಥನೆ) ಒಂದು ಮಾತಿನಲ್ಲಿ ನಿಜವಾಗಿರುವ ಅರ್ಥ, ಇರುವಿಕೆಯದ್ದು, ವಸ್ತು.

ಪರಸ್ಪರ (ಪರಸ್—ಪರ=ಮತ್ತೊಬ್ಬ—ಮತ್ತೊಬ್ಬ; vid. ಪಾರಂಪರ್ಯ) ಒಬ್ಬನ ಸಂಗಡ ಒಬ್ಬನು.

ಪರಾಸಂಯೋಗ (ಪರ—ಅ—ಸಮ್—ಯೋಗ, foreign-un-con-joining) ಮತ್ತೊಂದಕ್ಕೆ ಕೂಡದ್ದು. ಯುಜ್=ಕೂಡಿಸುವದು, to join, ಹೂಡುವದು, to yoke.

ಪರಿಣಾಮ (ಪರಿ=ಸುತ್ತೂ, peri—; ನಮ್=ಬಾಗುವದು, to nod; a participle of ನಮ್ is ನತ; ಪರಿನಮ್=ತಿರುಗುವದು) ಬದಲುಗಡೆ ತೋರಿಸುವದು, ಬದಲಾಗುವದು, ಕ್ಷೇಮ.

ಪರಿಧಿ (ಪರಿ=ಸುತ್ತು, peri; ಧಾ=ಇಡುವದು, comp. the Greek "tithaemi") ಸುತ್ತಲೂ ಇಟ್ಟದ್ದು, ಗಾಲಿಯ ಅಥವಾ ಮಂಡಲದ ಸುತ್ತು.

ಪರೀಕ್ಷೆ (ಪರಿ=ಸುತ್ತೂ, peri—; ಈಕ್ಷ್=ನೋಡುವದು, ಜರ್ಮನಿಯಲ್ಲಿ=ಅಯಿಗ್—ಲೆನ್) ಶೋಧನೆ.

ಪರ್ಣ (=ಪ್ತರ್ಣ=ಪತ್ರ; ಪತ್=ಬೀಳುವದು, ಹಾರುವದು; comp. the Greek pipto and peto; to fall, to fly) ಎಲೆ, blade, ರೆಕ್ಕೆ, pen, feather; ಜರ್ಮನಿಯಲ್ಲಿ: ಪತ್ರ=ಬ್ಲತ್ತ್. (There is an affinite root ಪಲ್=ಹೋಗುವದು.)

ಪರ್ವತ (ಪರ್ವನ್=ಗಂಟು, ದಿಣ್ಣೆ, comp. rough, ಜರ್ಮನಿಯಲ್ಲಿ=ರವಹ್) ಬೆಟ್ಟ.

ಪಶು (ಪಶ್=ಕಟ್ಟುವದು, to fasten) ಕಟ್ಟತಕ್ಕ ಜೀವಿಗಳು, beasts, ಜರ್ಮನಿಯಲ್ಲಿ=ಫೀಹ್.

ಪಶ್ಚಿಮ (ಪಶ್ಚಾತ್=ಬೆನ್ನುಗಡೆ, west) ಪ್ರಾರ್ಥನೆಯಲ್ಲಿ ಪೂರ್ವಕ್ಕೆ ಮುಖ ಮಾಡಿ ಕೊಳ್ಳುವಾಗ ಬೆನ್ನುಗಡೆಯಲ್ಲಿರುವ ದಿಕ್ಕು, ಪಡುವಲು.

ಪಕ್ಷಿ (ಪಕ್ಷ=ಎದೇ ಸಂಬಂಧದ್ದು, comp. pecto-ral, ಪಕ್ಕ, ರೆಕ್ಕೆ) ರೆಕ್ಕೆಯುಳ್ಳದ್ದು.

ಪಾತಕ (ಪತ್=ಬೀಳುವದು) ಬೀಳುವಿಕೆ, a falling, ಪಾಪ.

ಪಾಪ (ಅಪ=ವಿಂಗಡವಾಗಿ, off; ಆಪ್=ಹೋಗಿಸುವದು, ಮಾಡುವದು) ಸತ್ಯ ತಪ್ಪಿ ಮಾಡುವದು=ಅಪ—ಕಾರ, ದೋಷ. (ಆಪ್ is connected with ಈ, eo.)

ಪಾರಂಪರ್ಯ (ಪರಂ — ಪರ = ಮತ್ತಾಂಪಕ್ಕೆ — ಮತ್ತಾಂದು; ಪರ = foreign, ಜರ್ಮನಿಯಲ್ಲಿ: ಫ್ರೆಮ್ದ್) ಹಿಂಬಾಲಿಸುವಿಕೆಯದು, ಪೂರ್ವದಿಂದ ಬಂದದ್ದು.

ಪಾಶ (ಪಶ್ = ಕಟ್ಟುವದು, to fasten) ಬಂಧ (band).

ಪಾಷಾಣ (ಪಿಶ್ = ನಾನಾ ಬಣ್ಣವಾಗಿರುವದು, comp. to paint) ಕಲ್ಲು.

ಪುರಾಣ (ಪುರ್ = ಹಳೇದಾಗಿರುವದು, ಜರ್ಮನಿಯಲ್ಲಿ: to be ಫ್ರುಹ್) ಹಳೇದು. ಪೂರ್ವ ಎಂತ ನೋಡು.

ಪುರುಷ (ಪುರುಸ್ — ಜ) ಪುರು ಎಂಬವನಿಂದ ಹುಟ್ಟಿದವನು = ಮನು — ಜ. ಪ್ರಜೆ ಎಂತ ನೋಡು.

ಪುಷ್ಪ (ಪುಷ್ = ಬೆಳೆಯುವದು, comp. to wax) ಹೂವು.

ಪುಸ್ತಕ (ಪುಸ್ತ್ = ಕಟ್ಟುವದು, to fasten; comp. ಪಶ್ under ಪಶು) ಕಟ್ಟಿದ್ದು.

ಪೂರ್ಣ (ಪೂರ್ = ತುಂಬಿರುವದು, to be full) ತುಂಬಿದ್ದು.

ಪೂರ್ವ (= ಮುಂಚಿನದು, ಮುಂದಿನದು, fore, be-fore; ಜರ್ಮನಿಯಲ್ಲಿ: ವೋರ್, ವೋರ್ಹೆರ್) ಪ್ರಾರ್ಥನೆಯಲ್ಲಿ ತನ್ನೆದುರಿನ ದಿಕ್ಕು; ಹಿಂದು ಜನರೊಳಗೆ ಅಂಥ ಸಮಯದಲ್ಲಿ ಮೂಡಲ ನೋಡುವ ಪದ್ಧತಿ ಇತ್ತು.

ಪೃಥ್ವಿ (ಪೃಥು = ವಿಶಾಲ, broad, ಜರ್ಮನಿಯಲ್ಲಿ: ಬ್ರೈತ್) ಭೂಮಿ.

ಪ್ರಕೃತ (ಪ್ರ = ಮುಂದಕ್ಕೆ, pro; ಕೃ = ಮಾಡುವದು, to do) ಪೂರ್ವದಿಂದ ಮುಂದಕ್ಕೆ ಮಾಡಿದ್ದು, ಈಗಿನದು.

ಪ್ರಖ್ಯಾತಿ (ಪ್ರ = ಮುಂದೆ, ಹೆಚ್ಚು, pro; ಖ್ಯಾ = ಕೂಗುವದು, ನುಡಿಯುವದು, to cry, to call) ಕೀರ್ತಿ; comp. pro-clamation.

ಪ್ರಜೆ (ಪ್ರ = ಮುಂದೆ, ಹೊರಗೆ, pro, forth; ಜರ್ಮನಿಯಲ್ಲಿ: ಪುರ್; ಜನ್ = ಹುಟ್ಟುವದು) ಹೊರಗೆ ಹುಟ್ಟಿದ್ದು, ಮಕ್ಕಳು, pro-geny.

ಪ್ರದೇಶ (ಪ್ರ = ಮುಂದೆ, ಹೊರಗೆ, pro, forth; ದಿಶ್ = ತೋರಿಸುವದು, ಜರ್ಮನಿಯಲ್ಲಿ: ದೈತ್ — ಎನ್, to show) ಹೊರಗೆ ತೋರಿಸಿದ = ಮೇರೆ ಹಾಕಿದ ಒಂದು ಭೂಭಾಗ. comp. the Greek "deiknumi", the Latin "dico", both originally = to show; ಜರ್ಮನಿಯಲ್ಲಿ = ದೈತ್ — ಎನ್, ಜ್ಶೈಗ್ — ಎನ್.

ಪ್ರಭು (ಪ್ರ = ಮುಂದೆ, fore, before; ಭೂ = ಆಗುವದು, to be-come) ಮುಂದೆ ಆದವನು, ಶ್ರೇಷ್ಠ.

ಪ್ರಯಾಣ (ಪ್ರ = ಮುಂದಕ್ಕೆ, fore-wards; ಯಾ = ಹೋಗುವದು, eo) ಮುಂದೆ ಹೋಗೋಣ.

ಪ್ರಯೋಗ (ಪ್ರ=ಮುಂದೆ, pro; ಯುಜ್=ಕಟ್ಟುವದು, to join; ಮುಂದಕ್ಕೆ ನಡಿಸುವದು) ಕೆಲಸ.

ಪ್ರವೃತ್ತಿ (ಪ್ರ=ಮುಂದಕ್ಕೆ, ವೃತ್=ತಿರುಗುವದು, comp. per-vert, vertex; ಮುಂದಕ್ಕೆ ನಡೆಯುವದು) ಕೆಲಸ.

ಪ್ರಸಾದ (ಪ್ರ=ಮುಂದೆ, ಸದ್=ಕುಳಿತು ಕೊಳ್ಳುವದು, to sit; ಹತ್ತಿರ ಕುಂತು ಕೊಂಡು ಮಾತಾಡುವದರಿಂದ ದಯೆ ಮಾಡುವದು) ದಯೆ.

ಪ್ರಾಣ (ಪ್ರ=ಮುಂದಕ್ಕೆ, ಹೊರಗೆ, forth; ಅನ್=ಉಸುರು ಬಿಡುವದು) ಜೀವ, comp. animal.

ಪ್ರಾರ್ಥನೆ (ಪ್ರ=ಮುಂದೆ, ಹೆಚ್ಚು; ಅರ್ಥ್=ಕೇಳುವದು, to ask) ಬಹಳ ಕೇಳುವಿಕೆ, forth-asking.

ಬಾಲ್ಯ (ಬಲ್=ಪ್ರಾಣವಾಗಿರುವದು, to be valid, ಬದುಕುವದು) ಚಿಕ್ಕ ಪ್ರಾಯ. comp. foal=ಕುದುರೆಯ ಮರಿ, ಜರ್ಮನಿಯಲ್ಲಿ: ಪುಲ್ಲೆನ್.

ಬೀಜ (ಬೀಜ್=ಹೋಗುವದು) ಬಿತ್ತು; comp. ಜರ್ಮನಿಯಲ್ಲಿ: ಬೆ—ವೇಗ್—ಎನ್=ಮಿಸಿಕ್ಯಾಡುವದು, ವೇಗ್=ಮಾರ್ಗ; comp. the Latin "via"=way.

ಬ್ರಾಹ್ಮಣ (ಬೃಹ್=ಕೂಗುವದು, to mur-mur, ಜರ್ಮನಿಯಲ್ಲಿ: ಬ್ರುಮ್ಮ್—ಎನ್) ಕೂಗುವವನು, ಪ್ರಾರ್ಥಿಸುವವನು.

ಭಾವ (ಭೂ=ಇರುವದು, to be) ಇರುವಿಕೆ, physis.

ಭಾಗ್ಯ (ಭಜ್=ಪಾಲು ಮಾಡುವದು, to di-vide) ಪಾಲುಳ್ಳದ್ದು.

ಭಾವ (ಭೂ=ಆಗುವದು, ಇರುವದು, to be, to be-come) ಆಗುವಿಕೆಯುದ್ದು, ಇರುವಿಕೆಯುದ್ದು, physical state.

ಭುಜಂಗ (ಭುಜ=ಗ; ಭುಜ್=ಬಾಗುವದು, ಜರ್ಮನಿಯಲ್ಲಿ: ಬೀಗ್—ಎನ್, to bend; ಗಮ್=to go) ಸೊಟ್ಟ ಹೋಗುವಂಥಾದ್ದು=ಹಾವು.

ಭೂಮಿ (ಭೂ=ಆಗುವದು, to be-come) ಹುಟ್ಟಿದ್ದು.

ಭೋಜನ (ಭುಜ್=ಉಣ್ಣುವದು,) ಊಟ; comp. the Greek "brosko"=to eat.

ಭೌತಿಕ (ಭೂ=ಆಗುವದು, to be-come) ಹುಟ್ಟಿರುವದನ್ನು ಕುರಿತದ್ದು, physical.

ಮಂತ್ರಿ (ಮನ್=ಯೋಚಿಸುವದು, to mean, to mind) ಯೋಚನೆ ಹೇಳುವವನು.

ಮಂಡೂರ (ಮಂಡ್=ಸುತ್ತುವದು) ಸುತ್ತುವಂಥಾದ್ದು=ನಾರೆ, ತುಕ್ಕು.

ಮಕ್ಷಿಕ (ಮಕ್ಷ್=ಬಹಳವಾಗಿರುವದು, to be much; ಅಥವಾ ಶೀಘ್ರವಾಗಿರುವದು, ಅಥವಾ ಒಂದು ತರವಾಗಿ ನುಡಿಯುವದು) ಒಂದು ಜಾತೀ ಹುಳ, ಜರ್ಮನಿಯಲ್ಲಿ: ಮುಕ್ಕೆ, musca, mosquito.

ಮಗ್ನ (ಮಜ್ಜ್=ಮುಳುಗುವದು) ಮುಳುಗಿದ್ದು.

ಮಜ್ಜ (ಮಜ್ಜ್=ಮುಳುಗುವದು) ಎಲುಬಿನೊಳಗೆ ಮುಳುಗಿದ್ದು, marrow, ಜರ್ಮನಿಯಲ್ಲಿ: ಮರ್ಕ್.

ಮತ್ಸ್ಯ (ಮದ್=ಅಮಲಾಗಿರುವದು, to be mad, ಸಂತೋಷ ಪಡುವದು) ನೀರಿನಲ್ಲಿ ಸಂತೋಷ ಪಡುವಂಥಾದ್ದು=ಮೀನು.

ಮದ್ಯ (ಮತ್ಸ್ಯ ಎಂತ ನೋಡು) ಅಮಲು ಪಡಿಸುವಂಥಾದ್ದು, ಸರಾಯಿ ಇತ್ಯಾದಿ.

ಮಧುರ (ಮಧು=ಸವಿ, ಜೇನುತುಪ್ಪ; comp. mead= a drink made of honey, ಜರ್ಮನಿಯಲ್ಲಿ=ಮೇಥ್) ಸವಿ.

ಮರ್ಕಟ (ಮರ್ಕ್=ಹೋಗುವದು) ಹೋಗುವಂಥಾದ್ದು=ಮುಗಿಲು, ಜಾಡಹುಳ, ಕೋತಿ.

ಮರೀಚಿಕೆ (ಮರೀಚಿ=ಬಿಸಲಿನ ಕಿರಣ) ಕಿರಣಗಳ ಆಟ, mirage.

ಮರ್ಯಾದೆ (ಮೃ=ಸುತ್ತಲಿರುವದು; ಮರ್ಯಾ=ಮೇರೆ, ರೀತಿ; in Latin murus=ಗೋಡೆ; ದಾ=ಕೊಡುವದು, comp. donation) ನಡೆಯ ಬೇಕಾದ ರೀತಿ ಕೊಡುವಂಥಾದ್ದು=ಪದ್ಧತಿ.

ಮಾತೃಕೆ (ಮಾ=ಅಳತೆ ಮಾಡುವದು, ರೂಪ ಕೊಡುವದು, to measure) ರೂಪ ಕೊಡುವವಳು=ತಾಯಿ, ಪುಸ್ತಕದ ಮೂಲಪ್ರತಿ, ಅಕ್ಷರ, matrice.

ಮಾತ್ರ (ಮಾ=ಅಳತೆ ಮಾಡುವದು, to measure, ಜರ್ಮನಿಯಲ್ಲಿ to make ಮಾಸ್) ಅಳತೆ, ತಕ್ಕದಾದ ಮೇರೆ ಅಥವಾ ಸಂಖ್ಯೆ, metre.

ಮಾನವ (ಮನು=ಒಬ್ಬ ಋಷಿ) ಮನುವಿನಿಂದ ಬಂದವನು.

ಮಾಯೆ (ಮಾ=ಅಳತೆ ಮಾಡುವದು, to measure, ರೂಪಿಸುವದು) ರೂಪವಾದದ್ದು=ವಿಶ್ವ; ಬರೇ ರೂಪದ್ದು, ಸತ್ಯವಲ್ಲದ್ದು=ಮೋಸ; ರೂಪ ಪಟ್ಟದ್ದು=ರೂಪ ಪಟ್ಟ ದೇವಶಕ್ತಿ; ಈ ಶಕ್ತಿಗೆ ಸ್ತ್ರೀ ಭಾವ ಕಲ್ಪಿಸಿ ಕೊಂಡರೆ ತಾಯಿ ಎಂದಾಗುತ್ತದೆ; comp. the name of the month May, taken from the Greek Maia.

ಮಾಯಾವರಣ (ಮಾಯಾ=ಮೋಸ; ಆ=ಸುತ್ತೂ; ವೃ=ಮುಚ್ಚುವದು, ವರಂಡ ವಾಗಿರುವದು, to be-ware, ಜರ್ಮನಿಯಲ್ಲಿ: ವಾಹ್ರ್—ಎನ್) ಮಾಯೆ ಸುತ್ತೂ ಮುಚ್ಚಿದ ಸ್ಥಿತಿ.

ಮುನಿ (ಮನ್=ಯೋಚಿಸುವದು, to mean, to mind) ಯೋಚಿಸುವವನು, ಬುದ್ಧಿಶಾಲಿ.

ಮೆದಲು (ಒಳ್ಳೇ ಸಂಸ್ಕೃತದಲ್ಲಿ=ಮೇದಸ್; ಮಿದ್=ಎಣ್ಣೆಯಾಗಿರುವದು) ತಲೆಯೊಳಗೂ ಎಲುಬೊಳಗೂ ಇರುವ ಒಂದು ವಸ್ತು; comp. the Latin "medulla"=ಮೆದಲು.

ಯಜಮಾನ (ಯಜ್=ಯಜ್ಞ ಮಾಡುವದು, ಸನ್ಮಾನಿಸುವದು, comp. the greek "hátso"=to venerate, hagios=holy, and the Latin "sacer") ಯಜ್ಞ ಮಾಡಿಸುವವನು, ಒಳ್ಳೇ ಸ್ಥಿತಿಯ ಗೃಹಸ್ಥನು.

ಯಜುರ್ವೇದ (ಯಜ್=ಯಜ್ಞ ಮಾಡುವದು, ಸನ್ಮಾನಿಸುವದು, comp. hagiographa; ವಿದ್=ತಿಳಿಯುವದು, to wit, ಜರ್ಮನಿಯಲ್ಲಿ: ವೆಸ್ಸ್—ಎನ್) ಯಜ್ಞದ ತಿಳುವಿಕೆ.

ಯಾಗ=ಯಜ್ಞ.

ಯುಗ (ಯುಜ್=ಕೂಡಿಸುವದು, ಹೂಡುವದು, to join, to yoke) ಕಾಲದ ಕೂಡುವಿಕೆ.

ರಕ್ತ (ರಂಜ್=ಬಣ್ಣ ಹಾಕುವದು, to redden, ಜರ್ಮನಿಯಲ್ಲಿ: to ರೋಯ್ಥ್—ಎನ್) ನೆತ್ತರ.

ರಜ್ಜು (=ಸ್ರಜ್ಜು; ಸೃಜ್=ತಿರುವುವದು, to turn, ಜರ್ಮನಿಯಲ್ಲಿ: ಡ್ರೇಹ್—ಎನ್) ತಿರುವಿದ್ದು, ಹುರಿ, ಹಗ್ಗ, ಜರ್ಮನಿಯಲ್ಲಿ: ಸ್ಟ್ರಿಕ್.

ರಕ್ಷಣೆ (ರಕ್ಷ್=ಕಾಪಾಡುವದು, ಜರ್ಮನಿಯಲ್ಲಿ: ರೆತ್ತ್—ಎನ್) ಕಾಪಾಡುವಿಕೆ.

ರಾಗ (ರಂಜ್=ಬಣ್ಣ ಹಾಕುವದು, ಹಚ್ಚಿರುವದು, ಹತ್ತುವದು) ಬಣ್ಣ, redness, ಜರ್ಮನಿಯಲ್ಲಿ: ರೋಯ್ಥೆ, ಪ್ರೀತಿ, ಆಶೆ; ಸ್ವರದ ವರ್ಣನೆ=ವಾದ್ಯದ ತರ, (ಜರ್ಮನಿಯಲ್ಲಿ: ಎರ್—ರೇಗ್—ಉಂಗ್=ಮನದ ಚಲನೆ.)

ರಾತ್ರಿ (ರಮ್=ಶಾಂತಿಯಾಗಿರುವದು) ಶಾಂತೀ ಸಮಯ. comp. ಜರ್ಮನಿಯಲ್ಲಿ: ರಸ್ತ್, rest=ಶಾಂತಿ.

ಋತು (ಋ=ನಡೆಯುವದು, to run, ಜರ್ಮನಿಯಲ್ಲಿ: ರಿನ್—ಎನ್, ರೆನ್—ಎನ್) ನಡೆಯುವ ಕ್ರಮ.

ರೇಖೆ ಅಥವಾ ಲೇಖೆ (ಲಿಖ್=ಬರೆಯುವದು) ಗೆರೆ; comp. letter, line.

ಲಘು (ಲಂಘ್=ಹಾರಿ ದಾಟುವದು) ಹಗುರ, light (particip.).

ಲತೆ (ಲತ್=ಸುತ್ತುವದು) ಬಳ್ಳಿ.

ಲಾಭ (ಲಭ್=ಪಡಕೊಳ್ಳುವದು) comp. the Greek "labo," "lambano;" ಜರ್ಮನಿಯಲ್ಲಿ: ರಫ್ಫ—ಎನ್=ಹಿಡುಕೊಳ್ಳುವದು) ಪಡಕೊಳ್ಳುವಂಥಾದ್ದು.

ಲೋಕ (ಲೋಕ್=ನೋಡುವದು, to look, ಜರ್ಮನಿಯಲ್ಲಿ: ಲೂಗ್—ಎನ್) ನೋಡುವಂಥಾದ್ದು, ಜಗತ್.

ಲೋಹ ಅಥವಾ ರೋಹ (ರಂಜ್=ಬಣ್ಣ ಹಾಕುವದು) ಕೆಂಪು, red, ಜರ್ಮನಿಯಲ್ಲಿ: ರೋಥ್, ಕಬ್ಬಿಣ ಇತ್ಯಾದಿ.

ವಚನ (ವಚ್=ನುಡಿಯುವದು) ನುಡಿ, voice.

ವರುಷ (ವೃಷ್=ಮಳೇ ಶಬ್ದವಾಗುವದು, ಜರ್ಮನಿಯಲ್ಲಿ: ಪ್ರಸ್ಸ್—ಎಲ್ನ್, ಪ್ಲೆತ್ಷ್—ಎರ್ನ್, ಮಳೆಯಾಗುವದು) ಮಳೆ, ಸಂವತ್ಸರ.

ವನಾಂತರ (ವನ್=ಶಬ್ದವಾಗುವದು, ಪ್ರೀತಿ ಮಾಡುವದು) ವನ=ಗಿಡಗಳ ಶಬ್ದದ ಸ್ಥಳ, ಕಾಡು; ನೀರು ಹರಿಯುವ ಸ್ಥಳ, ನೀರು; ಅಂತರ=ಮಧ್ಯದ್ದು, intra, ಭೇದದ್ದು, other, ಜರ್ಮನಿಯಲ್ಲಿ: ಅಂದೆರ್—ಎಸ್.

ವನಿತೆ (ವನ್=ಪ್ರೀತಿ ಮಾಡುವದು) ಪ್ರೀತಿ ಮಾಡುವವಳು=ಸ್ತ್ರೀ; comp. venus.

ವರ್ಗ (ವೃಜ್=ವೃ=ಮುಚ್ಚುವದು, ಕಾಪಾಡುವದು, ವಿಶೇಷಿಸುವದು) ವಿಶೇಷಿಸಿದ್ದು, ಕುಲ. comp. the Latin "vulgus," ಜರ್ಮನಿಯಲ್ಲಿ: ಫೊಲ್ಕ್, folk.

ವಸ್ತು (ವಸ್=ಇರುವದು) ಇರುವಂಥಾದ್ದು, ಜರ್ಮನಿಯಲ್ಲಿ: ವೇಸೆನ್.

ವಾಯುವ್ಯ (ವಾಯು=ಗಾಳಿ, wind, ಜರ್ಮನಿಯಲ್ಲಿ: to be windy=ವೈಯ್—ಎನ್, ವೇಹ್—ಎನ್) ವಾಯು ಎಂಬ ದಿಕ್ಪಾಲಕನ ಕುರಿತ ದಿಕ್ಕು.

ವಾಸರ (ವಸ್=ಹೊಳೆಯುವದು) ಹಗಲು.

ವಾಸಿ (ವಸ್=ಉಳುಕೊಂಡಿರುವದು, ಜರ್ಮನಿಯಲ್ಲಿ: ವಾಹ್ನ್—ಎನ್, ವೋಹ್ನ್—ಎನ್) ಉಳುಕೊಂಡಿರುವವನು. ನಿವಾಸಿ=ನಿ—ವಾಸಿ; ನಿ=ಒಳಗೆ, in.

ವಿಕಾಸ (ವಿ=ದ್ವಿ=ಎರಡಾಗಿ, ವಿಂಗಡವಾಗಿ, two, dis—; ಕಸ್ ಅಥವಾ ಕಂಸ್=ಹೋಗುವದು=ಗಮ್, to go, ಜರ್ಮನಿಯಲ್ಲಿ: ಗೇಹ್—ಎನ್) ಅರುಳುವಿಕೆ, ಉಬ್ಬುವಿಕೆ.

ವಿನಯ (ವಿ=ವಿಂಗಡವಾಗಿ, ನೀ=ನಡಿಸುವದು; ವಿ—ನೀ=ಹೆಚ್ಚು ಕಡಿಮೆ ನೋಡಿ ಒಂದು ಕೆಲಸ ನಡಿಸುವದು) ಬುದ್ಧಿಯ ಶಿಕ್ಷೆ ಪಟ್ಟ ಮನಸ್ಸು, comp. the Greek "nomos", the Latin "nitor".

ವಿನೋದ (ವಿ=ವಿಂಗಡವಾಗಿ, ನುದ್=ಹಾಕುವದು, ನೂಕುವದು, comp. the Geek "nusso, nutto", ಬಿಡಿಸುವದು) ಆತ್ಮದ ಬಂಧ ಬಿಡಿಸುವಿಕೆ=ಸಂತೋಷ, ಲೀಲೆ.

ವಿಪತ್ತು (ವಿ=ಎರಡಾಗಿ, ಪದ್=ಹೋಗುವದು, to foot=to put the feet) ಎರಡಾಗಿ ಹೋಗುವದು, ಒಡೆಯುವದು, ಕೆಡುವಿಕೆ, ಕೇಡು.

ವಿಭಾಜ್ಯ (ವಿ=ದ್ವಿ, di; ಭಜ್=ಪಾಲು ಮಾಡುವದು; to make di-vision) ಪಾಲು ಮಾಡ ತಕ್ಕದ್ದು, divisible.

ವಿವರ (ವಿ=ವಿಂಗಡವಾಗಿ, ತೆಗೆದ್ದಾಗಿ; ವೃ=ಮುಚ್ಚುವದು; ವಿ—ವೃ=ಮುಚ್ಚಳಿಕೆ ತೆಗೆಯುವದು; ಅರ್ಥವನ್ನು to dis-close ಎಂಬದರಲ್ಲಿ ನೋಡ ಬಹುದು; ವೃ ಎಂಬದಕ್ಕೆ ಮಾಯಾವರಣವೆಂಬದರಲ್ಲಿ ಹೇಳಿದ್ದನ್ನು ಸರಿ ನೋಡ ಬೇಕು) ಬೈಲು ಪಡಿಸುವಿಕೆ, ಚಂದಾಗಿ ತೋರಿಸುವಿಕೆ.

ವಿಶೇಷ (ವಿ=ಬೇರೆ ಬೇರೆ; ಶಿಷ್=ವಿಂಗಡಿಸುವದು, ಜರ್ಮನಿಯಲ್ಲಿ: ಶೈದ್—ಎನ್) ತಕ್ಕ ಹಾಗೆ ವಿಂಗಡಿಸಿದ್ದು, ಹೆಚ್ಚು ಕಡಿಮೆ ಇತ್ಯಾದಿ.

ವೃದ್ಧಿ (ವೃಧ್=ಬೆಳೆಯುವದು, to fruit, to be-fructed) ಬೆಳವಣಿಗೆ, ಜರ್ಮನಿಯಲ್ಲಿ: ಫ್ರುಷ್ಟ್.

ವೃಶ್ಚಿಕ (ವೃಶ್ಚ್=ಕೊಯ್ಯುವದು, ಕಚ್ಚುವದು, ಜರ್ಮನಿಯಲ್ಲಿ: ರೈಸ್ಸ್—ಎನ್=ಹರಿಯುವದು) ಚೇಳು ಇತ್ಯಾದಿ.

ವೇದ (ವಿದ್=ತಿಳಿಯುವದು, to wit, ಜರ್ಮನಿಯಲ್ಲಿ: ವಿಸ್ಸ್—ಎನ್) ತಿಳುವಿಕೆ, ವಿದ್ಯೆ ಇತ್ಯಾದಿ.

ವೀರ (ವೃ=ಕಾಪಾಡುವದು, ಜರ್ಮಾನಿಯಲ್ಲಿ: ವಾರ್ಹ್—ಎನ್, ವೇರ್ಹ್—ಎನ್, to ware in the transitive sense) ಕಾಪಾಡುವವನು, hero; the Latin "vir„.

ವ್ಯಂಜನ (ವಿ=ವಿಂಗಡವಾಗಿ, ತೆಗೆದ್ದಾಗಿ; ಅಂಜ್=ಲೇಪಿಸುವದು; ವಿ—ಅಂಜ್=ಲೇಪ ತೆಗೆಯುವದು=ತೋರಿಸುವದು, vid. ವಿವರ) ರೂಪ, ಸೌಜ್ಞೆ, ಗಾತ್ತ್ರ ಇತ್ಯಾದಿ.

ವ್ಯಾಕುಲ (ವಿ=ಎರಡು ಕಡೆಯಾಗಿ; ಆ=ಸುತ್ತೂ; ಕುಲ್=ಒಟ್ಟಿರುವದು, ಕೂಡಿರುವದು, to be close) ಗಲಿಬಿಲಿಯಾಗಿರುವಿಕೆ, ಭ್ರಮೆ.

ವ್ಯಾಘ್ರ (ವಿ=ತೆಗೆದ್ದಾಗಿ ಅಥವಾ ವಿಶಾಲವಾಗಿ, ಆ=ಸುತ್ತೂ, ಘ್ರಾ=ಮೂಸಿನೋಡುವದು) ಹುಲಿ.

ವ್ಯಾಪಾರ (ವಿ=ವಿಶಾಲವಾಗಿ, ಆ=ಸುತ್ತೂ, ಪೄ=ಪೂರೈಸುವದು, to make full, to fill, to fulfil) ಚಂದಾಗಿ ಒಂದು ಕೆಲಸ ನಡಿಸುವದು, ಧಾವತಿ ಪಡುವಿಕೆ.

ವ್ಯಾಪಿಸುವದು (ವಿ=ವಿಶಾಲವಾಗಿ, ಆಪ್=ನಡಿಸುವದು, — transitive of ಈ=eo, — ಹೊಂದುವದು) ವಿಶಾಲ ಹೊಂದುವದು, ಅಗಲವಾಗಿರುವದು.

ಶರೀರ (ಶೄ=ಬಿಚ್ಚುವದು, comp. ಜರ್ಮಾನಿಯಲ್ಲಿ: to make ಸ್ಲಪ್ಪ್) ಬಿಚ್ಚಿಹೋಗುವಂಥಾದ್ದು=ಮೈ.

ಶಾಲೆ (ಶಲ್=ಮುಚ್ಚುವದು) ಮುಚ್ಚಿದ ಸ್ಥಳ=ಮನೆ, ಕೋಣೆ, hall, shool, shelter.

ಶಾಸ್ತ್ರ (ಶಾಸ್=ಅಪ್ಪಣೆ ಕೊಡುವದು, the Latin "sisto„?) ಅಪ್ಪಣೆ ಇತ್ಯಾದಿ.

ಶಿಥಿಲ (ಶ್ಲಥ್=ಸಡ್ಲಾಗಿರುವದು, to be slack, ಜರ್ಮಾನಿಯಲ್ಲಿ: ಸ್ಲಾತ್ತ್—ಎರ್ನ್) ಬಿಚ್ಚಿ ಹೋಗುವಂಥಾದ್ದು.

ಶ್ಯಾಮಕುಕ್ಕುಟ (ಶ್ಯೈ=ಮೊಸರಾಗುವದು, ಶ್ಯಾಮ=ಮೊಸರುಬಣ್ಣದ್ದು; ಕುಟ್=ಕೆದರುವದು; ಕುಕ್ಕುಟ=ಕೆದರುವಂಥಾದ್ದು, ಹುಂಜ, cock) ಬಿಳೇ ಅಥವಾ ಹಸರು ಅಥವಾ ಮಸ್ಕಾದ ಪಕ್ಷಿ.

ಶ್ಲೇಷ್ಮ (ಶ್ಲಿಷ್=ಅಂಟಿನ ಹಾಗೆ ಹತ್ತುವದು, to be slimy) ಅಂಟುಳ್ಳ ಒಂದು ವಸ್ತು, slime.

ಶೋಕ (ಶುಚ್=ಕರಕರೆಯಾಗಿರುವದು, to be sick ) ಕರಕರೆ.

ಶ್ರೋತ್ರ (ಶ್ರು=ಕೇಳುವದು, to hear, ಜರ್ಮನಿಯಲ್ಲಿ: ಹೊಯ್ರ್—ಎನ್) ಕಿವಿ.

ಸಂಕಲ್ಪ (ಸಮ್=ಕೂಡಿ, ಜರ್ಮನಿಯಲ್ಲಿ: ಸಮ್ಟ್—ಎನ್, con; ಕ್ಲೃಪ್=ನಡಿಸುವದು; comp. ಕೃ=to do) ಜೋಡಿಸುವಿಕೆ, ಕೈಗೂಡಿಸುವಿಕೆ, ಮಾಡುವಿಕೆ ಇತ್ಯಾದಿ.

ಸಂಕೋಚ (ಸಮ್=ಕೂಡಿ, con; ಕುಚ್=ಕೂಡುವದು, ಸಣ್ಣದಾಗುವದು, to shut) ಕೂಡಿ ಕೊಳ್ಳುವಿಕೆ, ಉಡುಗುವಿಕೆ.

ಸಂಕ್ರಾಮಿಕ (ಸಮ್=ಕೂಡಿ, con; ಕ್ರಮ್=ನಡೆಯುವದು) ಸೋಂಕುವಂಥಾದ್ದು.

ಸಂಗ್ರಹ (ಸಮ್=ಕೂಡಿ, con; ಗ್ರಹ್=ತೆಗೆಯುವದು, ಜರ್ಮನಿಯಲ್ಲಿ: ಗ್ರೈಫ್—ಎನ್ ಅಥವಾ ಗ್ರಪ್ಪ್—ಎನ್) ಬೇಕಾದದೆಲ್ಲ ಕೂಡಿಸೋಣ, ಸಾರಾಂಶ.

ಸಂದೇಹ (ಸಮ್=ಕೂಡಿ, ದಿಹ್=ಲೇಪಿಸುವದು ಅಥವಾ ಬೆಳೆಯುವದು, to become thick, ಜರ್ಮನಿಯಲ್ಲಿ: to become ದಿಕ್ಕ್, vid. ದೇಹ) ಲೇಪಿಸಿ ಕೂಡಿಸಿದ್ದು=ಘಟ್ಟಿಯಲ್ಲದ್ದೋ? ಅಥವಾ ಲೇಪವು ಸಂಗಡ ಕೂಡಿ ಮರೆ ಮಾಡುವದೋ?; ಸಂಶಯ.

ಸಂಭವ (ಸಮ್=ಕೂಡಿ, con; ಭೂ=ಆಗುವದು, to become) ಆಗುವಿಕೆ.

ಸಂಸರಣ (ಸಮ್=ಕೂಡಿ, ಸಮವಾಗಿ; ಸೃ=ನಡೆಯುವದು, ಜರ್ಮನಿಯಲ್ಲಿ: ಶ್ರೈತ್—ಎನ್) ಕೂಡಿರುವಂಥಾದ್ದು ಅಥವಾ ಚಂದಾಗಿ ನಡೆಯುವಂಥಾದ್ದು=ವಿಶ್ವ ಇತ್ಯಾದಿ.

ಸಂಸಾರ (ಸಂರಣವೆಂತ ನೋಡ ಬೇಕು) ಲೋಕಸಂಬಂಧದ್ದು.

ಸಿಂಹ (ಶಿಷ್=ಮೂಸಿ ನೋಡುವದು? or from ಹಿಂಸ್=ಹನ್=ಹೊಡೆಯುವದು, ಕೊಲ್ಲುವದು, to hit?) ಮೃಗರಾಜ.

ಸಿಂಹಾಸನ (ಸಿಂಹ—ಆಸನ; ಆಸ್=ಕುಳಿತಿರುವದು, to sit; ಆಸನ=seat) ಸಿಂಹದ ಆಕೃತಿಯಿಂದ ಶೃಂಗರಿಸಿದ ಪೀಠ.

ಸ (=ಸಹ, con) ಕೂಡಿ.

ಸಜೀವಾಚರ (ಸ—ಜೀವ—ಅ—ಚರ) ಜೀವವಿದ್ದು ಚರಿಸದಿರುವಂಥಾದ್ದು.

ಸತಿ (ಅಸ್=ಇರುವದು, ಜರ್ಮನಿಯಲ್ಲಿ: ಸೈನ್) ಇರುವವಳು, ಚಂದಾಗಿರುವವಳು, ಒಳ್ಳೇ ಸ್ತ್ರೀ.

ಸತ್ವ (ಸತಿ ಎಂತ ನೋಡು). ಇರುವಂಥಾದ್ದು, ಸತ್ಯ, ಬಲ, ಪ್ರಾಣಿ.

ಸಮ (comp. simi-lar) ಸರಿ.

ಸಮರ (ಸಮ್=ಕೂಡಿ, con; ಋ=ಹೋಗುವದು, to run) ಜಗಳ.

ಸಮಾಧಿ (ಸಮ್=ಕೂಡಿ, ಆ=ಸುತ್ತೂ, ಧಾ=ಇಡುವದು) ಆತ್ಮವನ್ನು ಪೂರಾಗಿ ತನ್ನ ವಶದಲ್ಲಿಟ್ಟು ಕೊಂಡಿರುವದು; ಹೆಣದ ಸುತ್ತಲೂ ಇಟ್ಟದ್ದು=ಕುಣಿ.

ಸಮೂಹ (ಸಮ್=ಕೂಡಿ, con; ವಹ್=ವೈಯುವದು, ತರುವದು, comp. vehicle) ಕೂಡಿಸಿದ್ದು=ಗುಂಪು.

ಸರಸ (ಸ=ಕೂಡಿ, ಸೃ=ಹೋಗುವದು=ಋ, ಜರ್ಮನಿಯಲ್ಲಿ: ಶ್ರೈತ್—ಎನ್) ನೀರು ಕೂಡಿದ್ದು, ರಸವುಳ್ಳದ್ದು.

ಸರೀಸೃಪ (ಸೃಪ್=ನಡಿಯುವದು, ಹರಿಯುವದು, to slip, ಜರ್ಮನಿಯಲ್ಲಿ: ಸ್ಲಿಪ್ಪ್—ಎನ್) ಹಾವು.

ಸರ್ಪ (ಸರೀಸೃಪ ಎಂತ ನೋಡು) ಹಾವು, serpent.

ಸರೋವರ (ಸರಸ್=ಕೆರೆ; ವರ=ಆರಿಸಿದ್ದು, ಉತ್ತಮ; ವೃ=ಆರಿಸುವದು, ಜರ್ಮನಿಯಲ್ಲಿ: ವೇಹ್ಲ್—ಎನ್) ಉತ್ತಮವಾದ ಕೆರೆ.

ಸಹಾಯ (ಸಮ್=ಕೂಡಿ, con; ಧಾ=ಇಡುವದು) ಸಂಗಡಿಗನು, ಸಂಗತಿ; comp. the Latin "sodalis", society.

ಸಾತ್ವಿಕ (ಅಸ್=ಇರುವದು, ಜರ್ಮನಿಯಲ್ಲಿ: ಸೈನ್; ಸತ್=ಇರುವಂಥಾದ್ದು, ಜರ್ಮನಿಯಲ್ಲಿ: ಸೈ—ಎಂದ್) ಇರುವಿಕೆಯ ಸಂಬಂಧವು, ನಿಜವಾದದ್ದು.

ಸಾಧಕ (ಸಾಧ್=ತೀರಿಸುವದು) ತೀರಿಸುವಿಕೆ.

ಸಾಧಾರಣ (ಸ=ಕೂಡಿ, ಧೃ=ಹಿಡಿದಿರುವದು, ಹೊರುವದು) ಕೂಡಿ ಹಿಡುಕೊಂಡದ್ದು, ಎಲ್ಲಿಯೂ ಸಮವಾದದ್ದು.

ಸಾಮಗ್ರಿ (ಸಮ್=ಕೂಡಿ, con; ಅಗ್ರ=ತುದಿ, in Greek "akra") ತುದಿಯುಳ್ಳದ್ದು, ತುದಿಗೆ ಮುಟ್ಟಿದ್ದು, ಪೂರ್ಣತೆ.

ಸಾರಸ (ಸರಸಿನ ಸಂಬಂದವುಳ್ಳದ್ದು) ತಾವರೆ, ಕಾಕ್ಕರೆ ಇತ್ಯಾದಿ.

ಸಾಹಸ (ಸಹ್=ತನ್ನ ಮೇಲೆ ತಕ್ಕೊಳ್ಳುವದು; ಸಾಕಾಗಿರುವದು, to be satis-fied, ಜರ್ಮನಿಯಲ್ಲಿ: to be ಸತ್ತ್) ಕೆಲಸ ತನ್ನ ಮೇಲೆ ತಕ್ಕೊಳ್ಳುವಂಥಾ ನಡತೆ.

ಸೀಕರ (ಸೀಕ್=ಚಿಮಿಕಿಸುವದು, ಶಿಡಿಯುವದು, to shed, to scatter, ಜರ್ಮನಿಯಲ್ಲಿ: ಗೀಸ್—ಎನ್=ನೀರು ಹಾಕುವದು) ಮಳೆ, ಹನಿ.

ಸುಕರ (ಸು=ಒಳ್ಳೇ, ಜರ್ಮನಿಯಲ್ಲಿ: ಗೂತ್, good; ಕೃ=ಮಾಡುವದು, to do) ಒಳ್ಳೇ ಕೆಲಸದ್ದು, ಸು—ಲಭ.

ಸುಖ (ಸು — ಖ=ಒಳ್ಳೇ — ಆಕಾಶ, good-sky) ಸಂತೋಷ.

ಸುಲಭ (ಸು=ಒಳ್ಳೇ; ಲಭ್=ಹೊಂದುವದು, ಜರ್ಮನಿಯಲ್ಲಿ: ರಪ್ಫ್—ಎನ್) ಬೇಗ ಶಿಕ್ಕುವಂಥಾದ್ದು.

ಸೂತ್ರ (ಸೂತ್ರ್=ಕಟ್ಟುವದು, to sew, the Latin "suo„) ಧಾರ, ವಿಧಿ.

ಸೃಷ್ಟಿ (ಸೃಜ್=ಹೊರಡಿಸುವದು, to create) ಬ್ರಹ್ಮ ತನ್ನಿಂದ ಹೊರಡಿಸಿದ್ದು= ವಿಶ್ವ.

ಸೋಪಾನ (ಸ—ಉಪ—ಅನ; ಸ=ಕೂಡಿ, too; ಉಪ=ಮೇಲಕ್ಕೆ, up; ಅನ= ಹೋಗುವಂಥಾದ್ದು) ಪಾವಟಿಗೆ.

ಸ್ತಂಭ (ಸ್ತಂಭ್=ಬಿಗಿಯಾಗಿ ಇಡುವದು, to stiffen, to stop, to stamp) ಕಂಭ.

ಸ್ತಬ್ಧ (ಸ್ತಭಿ=ನಿಲ್ಲುವದು, to stop) ಘಟ್ಟಿ, ತಡೆದ್ದು, ಮರುಳು, stupid.

ಸ್ತ್ರೀ (ಸೂ=ಹೆರುವದು, to bring forth "Sons") ಹೆರುವಂಥವಳು.

ಸ್ಥಳ (ಸ್ಥಲ್=ನಿಲ್ಲುವದು; ಜರ್ಮನಿಯಲ್ಲಿ: ಸ್ತೆಲ್ಲ್ — ಎನ್=ನಿಲ್ಲಿಸುವದು, to in-stall) ಸ್ಥಿರವಾದ ನೆಲೆ, ಜರ್ಮನಿಯಲ್ಲಿ: ಸ್ತೆಲ್ಲ್ — ಎ.

ಸ್ಥಾಯಿ (ಸ್ಥಾ=ನಿಲ್ಲುವದು, to stand) ನಿಲ್ಲುವಂಥಾದ್ದು.

ಸ್ಥಾವರ (ಸ್ಥಾಯಿ ಎಂತ ನೋಡು) ಸ್ಥಿರವಾದದ್ದು, ನಿಲುಗಡೆಯದು.

ಸ್ನಾನ (ಸ್ನಾ ಅಥವಾ ನಾ=ತೊಳಕೊಳ್ಳುವದು; ಜರ್ಮನಿಯಲ್ಲಿ: to make ನಸ್ಸ್, ನತ್; ನಾತ=ನತ್, wet) ಮೈ ತೊಳೆಯುವಿಕೆ. comp. ನಿಷ್=ನೀರು ಹಾಕುವದು, ಜರ್ಮನಿಯಲ್ಲಿ: ನೆತ್ಸ್ — ಎನ್, to make ನಸ್ಸ್; vid. ನಾವೆ.

ಸ್ನಿಗ್ಧ (ಸ್ನಿಹ್=ಎಣ್ಣೆ ಹಚ್ಚಿದ್ದಾಗಿರುವದು) ನುಣುಪು, ಚಂದ, snug.

ಸ್ವ (comp. the Latin "suus„, ಜರ್ಮನಿಯಲ್ಲಿ: ಸೈನ್, his) ತನ್ನ.

ಸ್ವರ್ಗ (ಸ್ವರ್=ಪ್ರಕಾಶ, ಸೂರ್ಯ, sol, sun, ಜರ್ಮನಿಯಲ್ಲಿ: ಸೊನ್ನ್ — ಎ; ಗಮ್=ಹೋಗುವದು, to go, ಜರ್ಮನಿಯಲ್ಲಿ: ಗೇಹ್ — ಎನ್) ಪ್ರಕಾಶ ಹೋಗುವ ಅಥವಾ ಉಳ್ಳ ಸ್ಥಳ, comp. cœlum.

ಸ್ವಾಭಾವಿಕ (ಸ್ವ=ತನ್ನ ವಿಷಯದ್ದು, his, ಜರ್ಮನಿಯಲ್ಲಿ: ಸೈನ್; ಭೂ=ಇರುವದು, to be) ಸ್ವಂತ ಇರುವಿಕೆಯದು; regarding the self—being.

ಸ್ವೇದಜ (ಸ್ವೇದ — ಜ; ಸ್ವಿದ್=ಬೆವರಾಗುವದು, to sweat, ಜರ್ಮನಿಯಲ್ಲಿ: ಸ್ವಿತ್ಸ್ — ಎನ್) ಬೆವರಿನಿಂದ ಹುಟ್ಟುವಂಥಾದ್ದು; sweat-genus.

ಹಂಸ (ಹಸ್=ನಗುವದು) ಒಂದು ನೀರುಗಾೞಿ, goose, ಜರ್ಮನಿಯಲ್ಲಿ: ಗ
ನ್ಸ್=goose.

ಹೃದಯ (ಹೃ=ತಕ್ಕೊಳ್ಳುವದು) ರಕ್ತ ತಕ್ಕೊಳ್ಳುವಂಥಾದ್ದು, ಎದೆಗುಂಡಿಗೆ, heart.

ಹಾಟಕ (ಹಟ್=ಹೊಳೆಯುವದು) ಬಂಗಾರ.

ಹಿತ (ಧಾ=ಇಡುವದು, ಕ್ರಮಿಸುವದು) ಚಂದಾಗಿ ಇಟ್ಟ, ಕ್ರಮಿಸಿದ, ತಕ್ಕ, of a good "theme."

ಹಿಮ (ಅಥವಾ ಹೇಮನ್, ಹೃಮ=ಬಂಗಾರ) ಪ್ರಕಾಶದ್ದು; ಥಳಿಯಿಂದಾಗುವ ಬಿಳುಪಾಗಿರುವ ಹಿಮವೆಂಬ ವಸ್ತು; the Latin "hiems„, winter, ಥಳಿ.

ಹೇತು (ಹಿ=ಹಾಕುವದು, ನಡಿಸುವದು) ನಡಿಸುವಂಥಾದ್ದು=ಕಾರಣ.

ಕ್ಷಮೆ (ಕ್ಷಮ್=ಹೊರುವದು, ತಾಳುವದು) ಭೂಮಿ, ತಾಳ್ಮೆ, ಮನ್ನಣೆ. comp. the Greek "sheo„=echo, to keep, in the Medium=to restrain oneself.

ಕ್ಷಯ (ಕ್ಷಿ=ಹಾಳಾಗುವದು) ಹಾಳು, de-cay?

ಕ್ಷುಧೆ (ಕ್ಷು=ಆಹಾರ; ಕ್ಷುಧ್=ಆಹಾರ ಬೇಕಾಗಿರುವದು) ಆಹಾರ ಬೇಕಾದ ಸ್ಥಿತಿ, ಹಸಿವೆ; ಜರ್ಮನಿಯಲ್ಲಿ: ಕಾಯ್ಷೆರ್=ಆಹಾರದ ಆಶೆ ಹುಟ್ಟಿಸುವಂಥಾದ್ದು.

ಕ್ಷೇತ್ರ (ಕ್ಷಿ=ವಾಸವಾಗಿರುವದು, comp. ಕಶ್=ನಡೆಯುವದು) ಹೊಲ, ದೇಶ, ಶರೀರ ಇತ್ಯಾದಿ.

ಕ್ಷೇಮ (ಕ್ಷಯ ಎಂತ ನೋಡು) according to Dr. Wilson: ದುಃಖ ಪರಿಹರಿಸುವಂಥಾದ್ದು, ದುಃಖಪರಿಹಾರವಾದ ಸ್ಥಿತಿ.



# THE MEANINGS OF SOME WORDS

## NECESSARY TO UNDERSTAND SECTION VII



# VII ಎಂಬ ವರ್ಗವನ್ನು ತಿಳುಕೊಳ್ಳಲಿಕ್ಕೆ ತಕ್ಕಂಥ ಕೆಲವು ಶಬ್ದಗಳ ಅರ್ಥವು



ಅಂಘ್ರಿ=ಕಾಲು || ಅಂಜನೇಭದ ಸಿಂಧುರ=ಪಶ್ಚಿಮ ದಿಕ್ಕಿನ ಆನೆಯ ಕೆಂಪು ಬಣ್ಣ || ಅಂಜಲಿ=ಬೊಗಸೆ || ಅಂಬುಧಿ=ಸಮುದ್ರ || ಅಗ=ಸೂರ್ಯ, ಮರ || ಅಘಮರ್ಷಣ=ಪಾಪ—ತೆಗೆಯುವಿಕೆ || ಅರ್ಘ್ಯ=ಕೈ ತೊಳೆಯುವ ನೀರು || ಅಚಲ=ಗುಡ್ಡ || ಅರ್ಜುನ=ಒಂದು ಜಾತೀ ಮರ || ಅದ್ರಿ=ಗುಡ್ಡ || ಅಧಮ=ಕೆಟ್ಟ || ಅಧ್ವರ=ಯಜ್ಞ || ಅನವರತ=ನಿತ್ಯ || ಅನಾವೃಷ್ಟಿ=ಬರ || ಅನಿಲ=ಘಾಳಿ || ಅನಿಷ್ಟ=ಸಂಕಟ || ಅನ್ವಿತ=ಉಳ್ಳ || ಅನುಪಮ=ಪ್ರತಿ ಇಲ್ಲದಂಥ || ಅಪವಿಘಾತ=ಹಾಳು ಮಾಡುವ || ಅಪಹೃತ=ಕದ್ದ || ಅಬ್ಜ=ತಾವರೆ || ಅಭ್ರ=ಮುಗಿಲು, ಮೋಡ || ಅರಿ=ಶತ್ರು || ಅರಿವರ್ಗ=ಶತ್ರುಗಳ ಕುಲ || ಅರುಣತೆ=ಕೆಂಪು ಬಣ್ಣ || ಅಲಂಘ್ಯ=ದಾಟ ತಕ್ಕದ್ದಲ್ಲದ್ದು || ಅವನಿ=ಭೂಮಿ || ಅವಿರಳ=ಎಡೆ ಬಿಡದ || ಅಶ್ರು=ಕಣ್ಣೀರು || ಅಹಿ=ಹಾವು || ಅಳಕ=ಸುಳಿಗೂದಲು || ಅಳಿ=ಭ್ರಮರ || ಅಕ್ಷತೆ=ಅಕ್ಕಿಯ ಅರ್ಪಣೆ ||

ಆಕ್ರಮಿಸುನದು=ಸಂಗಡ ನಡೆಯುವದು || ಆಗರ, ಆಗಾರ=ಸ್ಥಾನ, ಮನೆ || ಆಮೂಲಾಗ್ರ=ಬೇರಿನಿಂದ ತುದಿಯ ವರೆಗೆ || ಆರಾಮ=ತೋಟ || ಆಲಿ=ಕಣ್ಣು || ಆಲೋಲ=ಅಗಳಾಡುವ || ಆಶೆ=ದಿಕ್ಕು || ಆಸ್ಯ=ಮುಖ ||

ಇಂದೀವರ=ಕಪ್ಪು ಛಾಯೆಯ ತಾವರೆ || ಇಭ=ಆನೆ || ಇಷುಧಿ=ಬತ್ತಳಿಕೆ || ಇಳಾಭೃದ್ರಾಜ=ಭೂಮಿ ಸುತ್ತುವ ರಾಜ=ದೊಡ್ಡ ಪರ್ವತ || ಇಳೆ=ಭೂಮಿ ||

ಉನ್ನತಿ=ಹೆಚ್ಚುವಿಕೆ || ಉತ್ಕರ=ಹೆಚ್ಚುವಿಕೆ || ಉತ್ತುಂಗ=ಉದ್ದ || ಉದಧಿ=ಸಮುದ್ರ || ಉದ್ಗಮ=ಹೆಚ್ಚುವಿಕೆ || ಉದ್ದಾಮ=ಶ್ರೇಷ್ಠ || ಉದ್ಯತ್=ಉದ್ದ || ಉದ್ಯಾನ=ತೋಟ || ಉರ್ವರೆ=ಭೂಮಿ ||

ಕಂಕಣ=ಬಳೆ ಅಥವಾ ಧಾರಸುತ್ತುವಿಕೆ || ಕಂದರ=ಗುಹೆ || ಕಾಂತ=ಕಲ್ಲು || ಕಿಂಕಿರ=ಭೃಂಗಿ|| ಕಕ್ಕಸ=ಕಠಿಣ || ಕಟಕ=ಗುಂಪು, ನಗರ || ಕದಂಬ=ಗುಂಪು || ಕದಳಿ=ಬಾಳೆ || ಕಮಠ=ಕೂರ್ಮ || ಕಮನೀಯ=ಚಂದ || ಕರ=ಕೈ, ಕಿರಣ || ಕರಣ=ಇಂದ್ರಿಯ || ಕರಿ=ಆನೆ || ಕರ್ಕಟ=ಏಡಿ || ಕಲಪಿಕ=ಕೋಗಿಲೆ || ಕಲಮ, ಕಳಮ=ಭತ್ತದ ಪೈರು || ಕಲಾನಿಧಿ=ಚಂದ್ರ || ಕಲ್ಲೋಲ=ಚರಿಸುವಂಥ, ತೆರೆ || ಕಾಳ=ಕಪ್ಪು, ರಾತ್ರಿ || ಕೀರ=ಗಿಳಿ || ಕುಜ=ಮರ || ಕುದ್ದಾಲ=ಗುದ್ದಲಿ || ಕುಲ=ಗುಂಪು || ಕುಲಾದ್ರಿ=ಶ್ರೇಷ್ಟ ಪರ್ವತ || ಕುವರ=ಕುಮಾರ || ಕುಸುಮ=ಹೂವಿನೊಳಗಿನ ಕದರುಗಳು || ಕುಸುಮಿತ=ಹೂವಾದ || ಕೃತಕ=ಮಾಡಿದಂಥ || ಕೃಪಾಣ=ಕತ್ತಿ || ಕೇಶ=ಕೂದಲು || ಕೇಳಿ=ಆಟ || ಕೌತುಕ=ಆಶ್ಚರ್ಯ ||

ಗಂಡೂಪದ=ಸಮುದ್ರದ ಚಿಪ್ಪುಮೀನು || ಗಂಹರ=ಗುಹೆ || ಗಂಹರಿ=ಭೂಮಿ || ಗುಂಜಿ=ಗುಲಗುಂಜಿ || ಗಗನ=ಆಕಾಶ || ಗಹನ=ಕಾಡು || ಗ್ರಾಹ=ಮೊಸಳೆ || ಗುಹ್ಯಕ=ಕಾಣದಂಥವನು, ಪಟಿಂಗನು ||

ಘಟಿ=ಹಿಂಡು || ಘೂಕ=ಗೂಗೆ||

ಚಂದ್ರಿಕೆ=ಬೆಳದಿಂಗಳು || ಚಂದ್ರೋಪಲ=ಚಂದ್ರ—ಉಪಲ=ಚಂದ್ರನ ಕಲ್ಲು || ಚಕ್ರವಾಕ=ಕೆಂಪು ಹಂಸೆ|| ಚಟುಳ=ಚಂದ|| ಚಮರಿ, ಚಾಮರಿ=ಚಾಮರಸಂಬಂಧವಾದ|| ಚಯ=ಗುಂಪು || ಚಲಿತ=ಬೀಸುವ || ಚಾಪ=ಬಿಲ್ಲು || ಚಾಮೀಕರ=ಭಂಗಾರ || ಚೂತ=ಮಾವಿನ ಮರ ||

ಛಿದ್ರ=ತೂತು || ಛೈಲ, ಶೈಲ=ಗಿರಿ ||

ಜವ=ಬೇಗ || ಜಾರಣ, ಸಾರಣ=ಹೋಗುವಿಕೆ, ಆಟ || ಜಾಲ=ಅಂಚು || ಜೀಮೂತ=ಮುಗಿಲು ||

ತಡಿ=ತೀರ|| ತನಯ=ಮಗ || ತನು—ಗತ=ಮೈ ಮೇಲೆ ಹೋದ || ತಮಸ್—ಸ್ತೋಮ=ಕತ್ತಲೇ ಗುಂಪು || ತರಂಗಿಣಿ=ಹೊಳೆ || ತರಣಿ=ಸೂರ್ಯ || ತರುಣತೆ=ಎಳೇದು || ತರುಣಾರುಣಪ್ರಭಾಲಕ್ಷ್ಮಿ=ಎಳೇ ಉದಯದ ಪ್ರಕಾಶದ ಐಶ್ವರ್ಯ || ತುಷಾರ=ಹನಿ || ತ್ರಿದಶ=ಮೂರು ಸ್ಥಿತಿಯುದ್ದು || ತೇಜಿ=ಕುದುರೆ ||

ದಂಡಾಕೃತಿ=ಕೋಲಾಕಾರವುಳ್ಳ || ದಂದಶೂಕ=ಹಾವು || ದಶನ=ಹಲ್ಲು || ದಿನಕರ=ಸೂರ್ಯ || ದ್ರುಮ=ಮರ||

ಧವಳ = ಬಿಳೀ || ಧಾರ್ತರಾಷ್ಟ್ರ = ಹಂಸೆ || ಧಾರೆ = ಖಡ್ಗದ ಅಂಚು, ಕಿರಣ || ಧುರ = ಜಗಳ || ಧುರ್ಧರ = ಕೆಟ್ಟ || ಧೂಮ = ಹೊಗೆ || ಧೃತ = ಹಿಡಿದ ||

ನಂದನ = ತೋಟ || ನಕುಲ = ಮುಂಗಲಿ || ನಭ = ಆಕಾಶ || ನಯನ = ಕಣ್ಣು || ನಾರಿ = ಸ್ತ್ರೀ || ನಿಕರ = ಗುಂಪು || ನಿಕುರುಂಬ = ಹಿಂಡು || ನಿಖಿಳ = ಎಲ್ಲ || ನಿಗಮ = ಶಾಸ್ತ್ರ || ನಿಗರ = ತರ್ಕ || ನಿಧಿ = ಐಶ್ವರ್ಯ || ನಿರ್ಧರಿಸುವದು = ನಿಶ್ಚೈಸುವದು || ನಿರ್ಬಂಧಿಸುವದು = ನಡಿಸುವದು || ನಿಬಿಡ = ದಟ್ಟ || ನಿರವಧಿ = ಮೇರೆ ಇಲ್ಲದ್ದು || ನಿಷ್ಟ = ಉಳ್ಳ || ನಿಷ್ಟುರ = ಕೆಟ್ಟ || ನಿಳಯ = ಮನೆ || ನೃಪ = ನರರ ಪತಿ || ನೇಮಿ = ಗಾಲಿ ||

ಪಂಕರುಹ = ತಾವರೆ || ಪತಾಕ = ನಿಶಾನಿ || ಪಯೋನಿಧಿ = ಸಮುದ್ರ || ಪರಾಗ = ಧೂಳಿ || ಪರಿಕರ = ಸೌರಣೆ || ಪರಿಜ್ಞಾನ = ಸುತ್ತಲಿನ ತಿಳುವಳಿಕೆ || ಪರಿಧಿ = ಸೂರ್ಯನ ಸುತ್ತಲಿನ ಮಂಡಲ || ಪರಿವೃತ = ಸುತ್ತಿದಂಥ || ಪರಿಸರ = ಹತ್ತರ || ಪವಮಾನ = ಘಾಳಿ || ಪಲ್ಲವ = ಎಲೆ || ಪ್ಲವಂಗ = ಕೋತಿ || ಪಾಂಗ = ರೂಪ || ಪಾಂಡವರು = ಬಿಳೆಯವರು || ಪಾದ್ಯ = ಕಾಲು ತೊಳೆಯುವ ನೀರು || ಪಾಮರಿ = ಹೊಲಗಿತ್ತಿ || ಪಾವನ = ಶುದ್ಧ || ಪುಂಡರೀಕ = ಬಿಳೀ ತಾವರೆ || ಪುರುಷಾರ್ಥ = ಧರ್ಮ, ದಾನ || ಪುಳಿಂದಿನಿ = ಪುಳಿಂದರ ಸ್ತ್ರೀ || ಪೂತ = ಶುದ್ಧ || ಪ್ರಕೀರ್ಣ = ಗುಂಪು || ಪ್ರತತಿ = ಗುಂಪು || ಪ್ರಭಾವ = ಮಹಿಮೆ || ಪ್ರಾಕಾರಭ್ಯ = ಮುಂಚಿಗಿಂತ ಮುಂದಕ್ಕೊ || ಪ್ರಾಸಾದ = ಉಪ್ಪರಿಗೆ ||

ಬಂಧುರ = ಒತ್ತರವಾಗಿರುವಿಕೆ || ಬವರ = ಯುದ್ಧ ||

ಭಂಗ = ತುಂಡು || ಭವನ = ಮನೆ || ಭುಜಂಗ = ಹಾವು || ಭೂಜ = ಮರ || ಭೌಮ = ಭೂಮಿಾ ಸಂಬಂಧವಾದ ||

ಮಂಜರಿ = ಗೊಂಚಲು || ಮಂಜು = ಚಂದ || ಮಕರ = ಒಂದು ಜಾತೀ ಮೊಸಳೆ || ಮಕರಂದ = ಜೇನುತುಪ್ಪ || ಮಖ = ಯಜ್ಞ || ಮದಿತ = ಮದವುಳ್ಳ || ಮರಕತ = ಪಚ್ಚೀ ಕಲ್ಲು || ಮರೀಚಿ = ಪ್ರಕಾಶ || ಮಸ್ತಕ = ತಲೆ || ಮಹೀಶ = ಭೂರಾಜ || ಮಾತಂಗ = ಕಾಡುಜನ, ಆನೆ || ಮುಖಾಂಬುಜ = ಮುಖತಾವರೆ ||

ಯಾಚಕ = ತಿರಕನು || ಯುತ = ಕೂಡಿದ ||

ರಮಣ = ಪತಿ, ಶೂರ || ರಾಜೀವ = ಕೆಂಪು ತಾವರೆ || ರಾಜೀವ = ಮಿಾನು || ರಿಪು = ಶತ್ರು ||

ಲಗ್ನ = ನಕ್ಷತ್ರರಾಶಿಯ ಏರುವಿಕೆ || ಲತೆ = ಬಳ್ಳಿ || ಲಲನೆ = ಸ್ತ್ರೀ || ಲಸ = ಪ್ರಕಾಶ || ಲಾಪ = ನುಡಿಯುವಿಕೆ || ಲಾಲಲಾಲಿತ = ಬಹಳ ಪ್ರೀತಿ ಮಾಡುವ || ಲಾಸ್ಯ = ನಾಟ್ಯ || ಲೀಲಾಸ್ಯ = ನಗೆಮುಖ ||

ವಂಶ = ಬಿದರು || ವಜ್ರಮುಷ್ಟಿ = ಗುದ್ದು || ವಣಿಗ್ವರ = ಶ್ರೇಷ್ಠ ಬಣಜಿಗ || ವದನ =

ಮೋರೆ || ವಧು = ಸ್ತ್ರೀ || ವನಜ = ಕಾಡಿನಲ್ಲಿ ಹುಟ್ಟಿದ || ವನಿತೆ = ಸ್ತ್ರೀ || ವರೂಥ = ಗುಂಪು || ವಲ್ಲರಿ = ಬಳ್ಳಿ || ವಾರಿ = ಬೆವರು || ವಾಸರೆ = ಪ್ರಕಾಶ, ದಿವಸ || ವಿಕೃತಿ = ಕುರೂಪ || ವಿದ್ರುಮ = ಹವಳ || ವಿನಮಿತ = ಬಾಗಿಕೊಂಡ || ವಿಭವ = ಐಶ್ವರ್ಯ || ವಿಮಳ = ಶುದ್ಧ || ವಿಮುಕ್ತಭಾವಿತ = ಮೋಕ್ಷ ಹೊಂದಿದವರ ಭಾವವುಳ್ಳ || ವಿರಹಿ = ಅಗಲಿದ || ವಿಷ್ಟರ = ಆಸನ || ವಿಹಂಗ = ಪಕ್ಷಿ || ವೃಕೋದರ = ತೋಳದ ಹೊಟ್ಟೆಯುಳ್ಳ, ಹುಲಿ? || ವೃಕ್ಷವಾನರ = ಕೋತಿ || ವ್ರಜ = ಹಿಂಡು || ವೇದೋಕ್ತಿ = ವೇದದ ವಚನ ||

ಶಬರಿ = ಕಾಡುಜನರು || ಶಮನ = ತೀರಿಸುವಂಥ || ಶರ = ಅಂಬು, ಒಂದು ಜಾತೀ ಹುಲ್ಲು || ಶರಭ = ೮ ಕಾಲಿನ ಮೃಗ || ಶಸ್ತ್ರ = ಆಯುಧ || ಶಾಲಿ = ಭತ್ತ || ಶಾಲೂರ = ಮೀನು || ಶಿಲಾರೋಚಿ = ಕಲ್ಲಿನ ಪ್ರಕಾಶ || ಶೀತಾಂಶು = ತಂಪು ಕಿರಣದವನು, ಚಂದ್ರ || ಶೃಂಗ = ಕೊಂಬು, ತುದಿ || ಶ್ವೇತ = ಬಿಳೇ || ಶೈಲ = ಗುಡ್ಡ || ಶೈಶವ = ಶಿಶು ||

ಸಂಕುಲ = ಗುಂಪು || ಸಂಧಿಸುವದು = ಮುಟ್ಟುವದು || ಸಂಭೃತ = ಕೂಡಿದ || ಸಿಂಗ = ಸಿಂಹ || ಸತ್ಕರ = ಮಹಿಮೆ || ಸನ್ನಹಿತ = ಸಿದ್ಧವಾದ || ಸಮರ, ಸಮರಣ = ಜಗಳ || ಸಮುದಿತ = ಕೂಡಿದ || ಸರ = ಸಾಲು || ಸರ = ಕೆರೆ || ಸರಣಿ = ದಾರಿ || ಸರಿತ್ = ಹೊಳೆ || ಸಲ್ಲಲಿತ = ಹೊಳೆಯುವ || ಸಲ್ಲಾಪ = ಸಂಭಾಷಣೆ || ಸಲಿಲ = ನೀರು || ಸಹಕಾರ = ಮಾವು || ಸಹದೇವ = ಒಂದು ಜಾತೀ ಗಿಡ || ಸಾಯಕ = ಬಾಣ || ಸೀಕರ = ಹನಿ || ಸೀಗುರಿ = ಬೀಸಣಿಗೆ || ಸುಧೆ = ಅಮೃತ || ಸುಮಂದ = ಎಳೇ || ಸುರಭಿ = ಆಕಳು || ಸುಲಲಿತ = ಚಂದ || ಸುಸಮೋದ = ಒಳ್ಳೇ ಸಂತೋಷ || ಸೌದಾಮಿನಿ = ಮಿಂಚು || ಸೌಧ = ಮಾಳಿಗೆ || ಸೌರಂಭ = ಪ್ರಕಾಶ, ಕೆಂಪಾದ ಹೊಳಪು, ದೊಡ್ಡಸ್ತಿಕೆ || ಸ್ತಬಕ = ಗೊಂಚಲು || ಸ್ಮೀರ = ನಗೆ || ಸ್ವಕೀಯ = ತನ್ನ ವಿಷಯವಾದ || ಸ್ವನ = ಧ್ವನಿ || ಸ್ವೈರ = ಸಂತೋಷ ||

ಹಯ = ಕುದುರೆ || ಹಿಮಕರ = ಚಂದ್ರ ||

ಕ್ಷಿತಿಪ = ಭೂರಾಜ ||



# Third Book of Lessons

IN

## CANARESE

Adapted to the Vernacular
Schools of the Madras Presidency by order of the
Director of Public Instruction






**Mangalore**
**Printed by J. Hunziker, Basel Mission Press**
MDCCCLXII



